# ಸ್ವರ್ಣರೇಖೆ

ವೀರಕೇಸರಿ
ಎಂ. ಸೀತಾರಾಮಶಾಸ್ತ್ರಿ

ವಾಹಿನಿ ಪ್ರಕಾಶನ
ಜಯಚಾಮರಾಜರಸ್ತೆ, ಬೆಂಗಳೂರು-೨

# ಮುನ್ನುಡಿ

ನಾನು ಬರೆದಿರುವ ಐತಿಹಾಸಿಕ ಕಾದಂಬರಿಗಳಲ್ಲಿ ಇದು ನಾಲ್ಕನೆಯದು. ದೌಲತ್, ನಗರದ ರಾಣಿ, ಶ್ರೀರಂಗರಾಯ ಇವೇ ಹಿಂದಿನ ಕಾದಂಬರಿಗಳು. ಆ ಮೂರು ಕಾದಂಬರಿಗಳಿಗಿಂತಲೂ ಈ ಗ್ರಂಥದಲ್ಲಿ ಒಂದು ವೈಶಿಷ್ಟ್ಯವಿದೆ. ಆ ಕಾದಂಬರಿಗಳಲ್ಲಿ ರಾಜಕೀಯ ಘಟನೆಗಳು, ಯುದ್ಧ ವಿಗ್ರಹಗಳು ಬೇಕಾದಷ್ಟಿವೆ. ಈ ಕಾದಂಬರಿಯಲ್ಲಿ ಚಿಕ್ಕದೇವರಾಜ ರಾಯನ ಕಾಲದ ಸಾಮಾಜಿಕ ಚಿತ್ರವು ಚಿತ್ರಿತವಾಗಿದೆ. ಕಥಾನಾಯಕಿಯು ವೇಶ್ಯೆ. ಆದರೂ ಶಾಶ್ವತವಾದ ಬಂಗಾರದೊಡ್ಡಿ ನಾಲೆಯ ನಿರ್ಮಾಣಕ್ಕೆ ಕಾರಣಕರ್ತಳಾದುದರಿಂದ . ಆ ಮಹಿಳೆಯು ಚಾರಿತ್ರಿಕ ವ್ಯಕ್ತಿಯಾದಳು. ನನ್ನ ಯಾವ ಕಾದಂಬರಿಯೂ ಆಂಗ್ಲ ಕಥೆಗಳ ಛಾಯೆ ಉಳ್ಳವುಗಳಲ್ಲ. ನನ್ನ ಗ್ರಂಥಗಳಲ್ಲಿ ಎದ್ದು ಕಾಣುವುದು-ಸಂಸ್ಕೃತ ಕಥಾನಕಗಳ ಛಾಯೆ.

ಸಂಸ್ಕೃತ ಅಲಂಕಾರಶಾಸ್ತ್ರ ಪ್ರಕಾರವಾಗಿ ಗದ್ಯಕಾವ್ಯ ದಲ್ಲಾಗಲೀ, ಪದ್ಯಕಾವ್ಯದಲ್ಲಾಗಲೀ 'ರಸ' ಪ್ರಧಾನವಾಗಿರಬೇಕು. ಸ್ವರ್ಣರೇಖೆ ಕಾದಂಬರಿಯಲ್ಲಿ ಶೃಂಗಾರ, ಕರುಣಾರಸಗಳ ಹೆಚ್ಚಳವಿದೆ. ರಸಿಕರಾದ ವಾಚಕರಿಗೆ ಇದು ಸೊಗಸಿದರೆ ನನಗೆಷ್ಟೋ ಸಂತೋಷ.

ವಾಹಿನಿ ಗ್ರಂಥಮಾಲೆಯನ್ನು ಹೊರಡಿಸಿರುವ ಇಬ್ಬರು ಗೆಳೆಯರು ನನ್ನ ಪುಸ್ತಕವನ್ನು ಆದರದಿಂದ ಸ್ವಾಗತಿಸಿ ಪ್ರಕಟಿಸಿದ್ದಕ್ಕಾಗಿ ಶ್ರೀ ಕಾಮೇಶ್, ಚಿಂತಾಮಣಿ ಇವರುಗಳಿಗೆ ಧನ್ಯವಾದಗಳು.

ಬೆಂಗಳೂರು.
15-10-53

ಎಂ. ಸೀತಾರಾಮಶಾಸ್ತ್ರಿ.

೧

ದೇವರಿದ್ದಾನೆಯೇ ? ಎಲ್ಲಿದ್ದಾನೆ ? ಅದಕ್ಕೆ ಸಾಕ್ಷಿಯೇನಿದೆ ? ದೇವರು ! ದೇವರಿಲ್ಲದೆ ಈ ಜಗತ್ತು ಎಲ್ಲಿಂದ ಬರುತ್ತದೆ. ಈ ಜಗತ್ತು ವಾಯು, ಜಲ, ಅಗ್ನಿ, ಆಕಾಶ, ಇವೆಲ್ಲವೂ ದೇವರಿಂದ ಸೃಷ್ಟಿಯಾದವುಗಳು. ಭಗವಂತನೇ ಈ ಚರಾಚರಗಳ ಸೃಷ್ಟಿಕರ್ತನು.

ಇದೋ ! ಈ ಜಗತ್ತು ಕಾಣುತ್ತಿದೆ ! ವಾಯುವು ಬೀಸುತ್ತದೆ ! ಅಗ್ನಿಯು ಸುಡುತ್ತದೆ ! ಎಲ್ಲವೂ ಇದೆ ! ಅವೆಲ್ಲವೂ ಕಣ್ಣಿಗೆ ಕಾಣುವ ಭೂತ ಶಕ್ತಿಗಳು. ಅವುಗಳಿಗೆಲ್ಲಾ ಸೃಷ್ಟಿ ಮತ್ತು ಲಯಗಳೇಕೆ ? ಸೃಷ್ಟಿಕರ್ತನೊಬ್ಬನೇಕೆ ?

ಹಾ ! ಹಾ ! ಅವುಗಳಿಗೆಲ್ಲಾ ನಿಯಂತನೊಬ್ಬನು ಬೇಡವೇ ? ಈ ಪ್ರಾಣಿಗಳಿಗೆಲ್ಲಾ ಜೀವದಾತನಾರು ?

ವಾಯು, ಅಗ್ನಿ, ಜಲ ಈ ಮಹಭೂತಗಳು ಸ್ವಾಭಾವಿಕವಾಗಿಯೂ, ಸ್ವನಿಯಂತ್ರಿತವಾಗಿಯೂ ಇವೆ. ಪ್ರಾಣಿಗಳ ಜೀವನ ಮರಣಗಳೂಕೂಡಾ ಸ್ವಾಭಾವಿಕವಾಗಿಯೇ ಇದೆ. ಇಲ್ಲೆಲ್ಲಿಯೂ ನಿಮ್ಮ ಈಶ್ವರನು ಕಾಣುವುದಿಲ್ಲ. ನಿಮ್ಮ ಈಶ್ವರನು ನೀವು ಮಾಡಿಕೊಂಡಿರುವ ಗುಡಿಗಳಲ್ಲಿ ಶಿಲಾಮಯನಾಗಿ ದಾರುಮಯನಾಗಿ ಲೋಹಮಯನಾಗಿದ್ದಾನೆ.

"ಹಾ! ಹಾ! ಚಿಕ್ಕಪ್ಪಾಜೀ ಬಾಯಿಮುಚ್ಚು! ನೀನು ನಾಸ್ತಿಕನಾಗಿರುವೆ. ಈ ದುರ್ಬುದ್ಧಿಯು ನಿನಗೆಲ್ಲಿಂದ ಬಂದಿತು?" ಎಂದು ಯಜ್ಞನಾರಾಯಣ ಸೋಮಯಾಜಿಗಳು ಗದ್ದರಿಸಿದರು.

ಚಿಕ್ಕಪ್ಪಾಜಿಯು, "ಗುರುಗಳೇ! ಆಗ್ರಹ ಮಾಡಬೇಡಿರಿ. ದೇವರಿದ್ದಾನೆ – ದೇವರಿದ್ದಾನೆ ಎಂಬ ಗೊಡ್ಡುವಾದಕ್ಕಿಂತಲೂ, ದೇವರು ಎಲ್ಲಿದ್ದಾನೆ? ದೇವರು ಹೇಗಿದ್ದಾನೆ. ಎಂದು ತರ್ಕದ ವಿಚಾರ ಮಾಡುವುದೇ ಬುದ್ಧಿವಂತರ ಲಕ್ಷಣ"

"ಒಳ್ಳೆಯ ಬುದ್ಧಿವಂತ! ವೇದ, ಶಾಸ್ತ್ರ, ಕರ್ಮಜಿಜ್ಞಾನೆ, ಭಕ್ತಿರಹಸ್ಯ ವೇದಾಂತ ವಿಚಾರ ಇವುಗಳಲ್ಲವೂ ಇರಬೇಕು ರಾಜ ಭೋಗಗಳಲ್ಲಿ ಲಕ್ಷ್ಮೀದೇವಿಯ ಕಟಾಕ್ಷದಿಂದ ಸುಖದಿಂದಿರುವ ನಿನಗೆ ದೇವರು ಹೇಗೆ ಕಾಣಬೇಕು?"

"ಸರಿ ಗುರುಗಳೇ! ತಮಗಾದರೂ ಕಾಣಬೇಕಲ್ಲಾ. ತಾವು ಕಂಡ ದೇವರನ್ನು ನಮಗೂ ತೋರಿಸಬಹುದಲ್ಲಾ?"

ಸೋಮಯಾಜಿಗಳು ಕಣ್ಣುಮುಚ್ಚಿ ಧ್ಯಾನಾಸಕ್ತರಾದರು. ಅಲ್ಲಿ ನೆರದಿದ್ದ ವಿದ್ವದ್ಗೋಷ್ಠಿಯೆಲ್ಲವೂ ಸ್ತಂಭೀಭಾವವನ್ನು ಹೊಂದಿತು. ಚಿಕ್ಕಪ್ಪಾಜಿಯು ಕುತೂಹಲದಿಂದ ಅರಳಿದ ಕಣ್ಣುಗಳಿಂದ ಸೋಮ ಯಾಜಿಗಳ ತೇಜೋವಿರಾಜಮಾನವಾದ ಮುಖವನ್ನು ನೋಡುತ್ತಿದ್ದನು. ಆ ಸಭಾಮಂದಿರವೆಲ್ಲೆಲ್ಲಾ ಸುಗಂಧವು ಬೀರಲಾರಂಭ ವಾಯಿತು. ಸೋಮಯಾಜಿಗಳು ಕಣ್ಣುಗಳನ್ನು ಬಿಟ್ಟರು. ಮೇಲುಗಡೆ ತೇಜೋಮಯವಾದ ಸೂರ್ಯಬಿಂಬದಂತಹ ಜ್ಯೋತಿಯೊಂದು ಉದಯವಾಯಿತು. ಆ ಪ್ರಭೆಯನ್ನು ಕಂಡು ಎಲ್ಲರೂ ತಲೆಯೆತ್ತಿ ನೋಡಿದರು. ಆ ಸೂರ್ಯಬಿಂಬದ ಮಧ್ಯದಲ್ಲಿ ವಿದ್ಯುನ್ಮಯವಾದ ಮೂರ್ತಿಯೊಂದು ಕಂಗೊಳಿಸಿತು. ಶಂಖಚಕ್ರಧಾರಿಯಾದ ಶ್ರೀಮನ್ನಾರಾಯಣನ ಪ್ರತ್ಯಕ್ಷಮೂರುತಿ! ವಿದ್ವದ್ಗೋಷ್ಠಿಯೆಲ್ಲವೂ ಭಾವಾನ್ವಿತವಾಗಿ ಮಂತ್ರಗಳನ್ನು ಪಠಿಸುತ್ತಾ ಸೋಮಯಾಜಿಗಳಿಗೆ

ನಮಸ್ಕಾರ ಮಾಡುತ್ತಿದ್ದರು. ಚಿಕ್ಕಪ್ಪಾಜಿಯು ಭ್ರಾಂತನಾಗಿ ನೋಡುತ್ತ ಕುಳಿತಿದ್ದನು. ಸೋಮಯಾಜಿಗಳು, "ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್" ಎಂದು ಉಚ್ಚರಿಸಿದರು. ಆ ದಿವ್ಯ ದರ್ಶನವು ಮಾಯವಾಯಿತು. ಸೋಮಯಾಜಿಗಳು "ಚಿಕ್ಕಪ್ಪಾಜೀ! ಇದೇ ನಾನು ಆರಾಧಿಸುವ ಭಗವಂತ. ಅದನ್ನು ಪ್ರತ್ಯಕ್ಷ ಮಾಡಿ ತೋರಿಸಿದ್ದೇನೆ. ಈಶ್ವರನಿದ್ದಾನೆಂದು ನೀನು ಇನ್ನುಮೇಲಾದರೂ ನಂಬುವೆಯಾ?" ಎಂದರು.

ಚಿಕ್ಕಪ್ಪಾಜಿಯು, "ನಾವು ಸುಗಂಧವನ್ನು ಅನುಭವಿಸಿದೆವು. ತೇಜಸ್ಸನ್ನು ನೋಡಿದೆವು. ಇದು ಪ್ರತ್ಯಕ್ಷದರ್ಶನ. ಪೃಥ್ವಿ, ತೇಜಸ್ಸು ಇವೆಲ್ಲವೂ ಮಹಾಭೂತಗಳು. ಇವು ಪ್ರತ್ಯಕ್ಷವಾಗಿದೆಯೆಂದು ನಾನು ಹೇಳಿದೆನು. ಅದನ್ನು ನಾನೂ ಬಲ್ಲೆ. ನೀವೂ ಬಲ್ಲಿರಿ. ಅದನ್ನು ಪ್ರಭಾವಶಾಲಿಗಳಾದ ತಾವು ವಿಕೃತಿ ರೂಪದಿಂದ ಪ್ರತ್ಯಕ್ಷಮಾಡಿ ನಮ್ಮೆಲ್ಲರಿಗೂ ತೋರಿಸಿದಿರಿ. ತಾವು ದೊಡ್ಡವನೆಂದು ನಮ್ಮೆಲ್ಲರಿಗೂ ಗೊತ್ತೇಯಿದೆ. ಇದೂ ಒಂದು ದೊಡ್ಡವರ ಪವಾಡ! ಇಂದ್ರಜಾಲ! ಇದರಲ್ಲಿ ನಾನು ಈಶ್ವರನನ್ನು ಕಾಣಲೂ ಇಲ್ಲ. ಈಶ್ವರನ ಅಸ್ತಿತ್ವಕ್ಕೆ ಇದು ಪ್ರಮಾಣವೂ ಅಲ್ಲ."

ಸೋಮಯಾಜಿಗಳ ಮುಖವು ಕೋಪದಿಂದ ಕೆಂಪೇರಿತು. ವಿದ್ವಾಂಸರುಗಳ ಕಡೆಗೆ ತಿರುಗಿ "ನೀವೆಲ್ಲರೂ ಇಂದ್ರಜಾಲವನ್ನು ಕಂಡಿರೋ? ಸಾಕ್ಷಾತ್ ಪರಮೇಶ್ವರನನ್ನು ಕಂಡಿರೋ?" ಎಂದು ಪ್ರಶ್ನೆಹಾಕಿ ಎದ್ದುನಿಂತರು. ವಿದ್ವಾಂಸರೆಲ್ಲರೂ ಎದ್ದು "ಸೋಮಯಾಜಿಗಳೇ ನೀವು ಸಾಕ್ಷಾತ್ ಯಜ್ಞನಾರಾಯಣನಸ್ವರೂಪ. ನಿಮ್ಮ ಅನುಗ್ರಹದಿಂದ ನಾವೆಲ್ಲರೂ ಧನ್ಯರಾದೆವು" ಎಂದು ನಮಸ್ಕರಿಸಿದರು.

ಚಿಕ್ಕಪ್ಪಾಜಿಯು ಶಾಂತಭಾವದಿಂದ ಎದ್ದು ನಿಂತನು. ಸೋಮಯಾಜಿಗಳು, "ಚಿಕ್ಕಪ್ಪಾಜೀ! ನೀನು ನಾಸ್ತಿಕ! ಪಾಷಂಡ! ನೀನಿರುವ ಕಡೆ ಧರ್ಮವಿಲ್ಲ. ಸತ್ಯವಿಲ್ಲ. ನೀನು ಈ ರಾಜ್ಯದಲ್ಲಿ ಯುವ

ರಾಜ. ನಾಳೆ ರಾಜನಾಗಬಹುದು. ನಾನು ಈ ಪಾಷಂಡರಾಜ್ಯ ದಲ್ಲಿ ಒಂದುಕ್ಷಣವೂ ಇರುವುದಿಲ್ಲ. ಈ ರಾಜ್ಯದಲ್ಲಿ ಒಂದು ತೊಟ್ಟು ಜಲಪಾನ ಮಾಡುವುದಿಲ್ಲ. ನಿನಗೆ ದೇವರು ಸದ್ಬುದ್ಧಿಯನ್ನು ಕೊಡಲಿ." ಎಂದು ಹೇಳಿ ಅರಮನೆಯಿಂದ ಹೊರಟುಹೋದರು.

ಅರಮನೆಯಲ್ಲಿ ದೊಡ್ಡ ಗದ್ದಲವೆದ್ದಿತು ಮಹಡಿಯ ಮೇಲೆ ವಿಶ್ರಾಂತಿ ಭವನದಲ್ಲಿ ಮಲಗಿಸಿದ್ದ ದೊಡ್ಡಪ್ಪಾಜಿಗೆ ಈ ವರ್ತಮಾನವು ತಿಳಿಯಿತು. ಅವನ ಹೃದಯವು ಭಯದಿಂದ ನಡುಗಿತು ವಿದ್ವಾಂಸರು ದೊಡ್ಡಪ್ಪಾಜಿಗೆ ಆ ವಾದದ ವಿವರಣೆಯನ್ನು ದಿವ್ಯ ದರ್ಶನವನ್ನು ಬಣ್ಣಿಸಿ ಹೇಳಿದರು. ದೊಡ್ಡಪ್ಪಾಜಿಯು ಕ್ಷಣಹೊತ್ತು ಕಣ್ಣುಮುಚ್ಚಿ ನಿಟ್ಟುಸಿರುಬಿಟ್ಟನು. "ಆಹಾ! ಆ ದಿವ್ಯ ದರ್ಶನವನ್ನು ಮಾಡುವ ಪುಣ್ಯವು ನನಗೆ ಲಭಿಸಲಿಲ್ಲವಲ್ಲಾ" ಎಂದು ಉದ್ಗಾರ ತೆಗೆದನು. "ಸೋಮಯಾಜಿಗಳು ಶಪಥಮಾಡಿದ ಮೇಲೆ ತಪ್ಪುವರಲ್ಲ. ನಮ್ಮ ರಾಜ್ಯಕ್ಕೆ ಹಾನಿಯು ತಟ್ಟುತ್ತದೆ." ಎಂದು ನಡುಗುವ ಧ್ವನಿಯಿಂದ ನುಡಿದನು.

ಚಿಕ್ಕಪ್ಪಾಜಿಯು ರಾಜರ ಸಮ್ಮುಖಕ್ಕೆ ಬಂದುನಿಂತಿದ್ದನು. ರಾಜನು ಚಿಕ್ಕಪ್ಪಾಜಿಯೊಡನೆ ಯಾವ ಮಾತನ್ನೂ ಆಡಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ "ಚಿಕ್ಕಪ್ಪಾಜಿ! ನೀನು ತಪ್ಪುಮಾಡಿದೆ. ಮಹಾಪ ರಾಧ ಮಾಡಿದೆ. ಅಪಚಾರ ಮಾಡಿದೆ. ನೀನೇ ಹೋಗಿ ಸೋಮ ಯಾಜಿಗಳ ಕ್ಷಮಾಪ್ರಾರ್ಥನೆಯನ್ನು ಮಾಡಬೇಕು. ಅವರು ಆಗ್ರಹ ದಿಂದ ಶಾಪವಿತ್ತರೆ ಈ ರಾಜ್ಯವು ನಾಶವಾಗುತ್ತದೆ. ನಾನು ಉಪವಾಸ ಮಾಡಿ ಪ್ರಾಣಬಿಡುತ್ತೇನೆ." ಎಂದು ದೀನವಾಣಿಯಿಂದ ನುಡಿದನು.

ಚಿಕ್ಕಪ್ಪಾಜಿಯು, "ಅಪ್ಪಾಜಿ! ನಾನು ವಾದ ಮಾಡಿದ್ದು ನಿಜ. ವಾದಕ್ಕೆ ಕೊನೆಯಿಲ್ಲವೆಂದು ನಾನು ತಿಳಿದಿದ್ದೆ. ವಾದವು ಇಷ್ಟು ಬೇಗ ಮುರಿದುಬಿದ್ದು ಪ್ರಕೋಪಸ್ಥಿತಿಯು ಬರುವುದೆಂದು ತಿಳಿದಿದ್ದರೆ ನಾನು ವಾದ ಮಾಡುತ್ತಲೇ ಇರಲಿಲ್ಲ. ಯಜ್ಞನಾರಾಯಣ

ಸೋಮಯಾಜಿಗಳು ಕರ್ಮಠರೆಂದೂ ಪರಿಶುದ್ಧಾತ್ಮರೆಂದೂ ನಾನು ಬಲ್ಲೆ. ಇಂದು ಅವರು ಮಹಾಮಹಿಮರೆಂಬುದನ್ನು ತೋರಿಸಿ ಕೊಟ್ಟರು ಅವರಲ್ಲಿ ಹೋಗಿ ಕ್ಷಮೆಬೇಡುವುದಕ್ಕಾಗಲೀ ಶತ ನಮಸ್ಕಾರಗಳನ್ನು ಹಾಕುವುದಕ್ಕಾಗಲೀ ನಾನು ಹಿಂತೆಗೆಯುವುದಿಲ್ಲ. ನನ್ನಿಂದ ಈ ವಿದ್ವದ್ಶ್ರೇಷ್ಠಿಗೆ ಅಪಮಾನವಾಗಿದ್ದರೆ ನಾನೇ ಈ ರಾಜ್ಯ ವನ್ನು ಬಿಟ್ಟು ಹೋಗಲು ಸಿದ್ಧನಾಗಿದ್ದೇನೆ. ಅಪ್ಪಣೆ ಕೊಡೋಣ ವಾಗಲಿ " ಎಂದು ಹೇಳಿದನು

ರಾಜನು " ಚಿಕ್ಕಪ್ಪಾಜಿ ! ಅಧಿಕ ಪ್ರಸಂಗವನ್ನು ಮಾಡಬೇಡ ! ಸೋಮಯಾಜಿಗಳಲ್ಲಿ ಹೋಗಿ ಕ್ಷಮೆಬೇಡಿ ಬಾ !" ಎಂದು ಗದ್ದರಿ ಸಿದನು.

ಚಿಕ್ಕಪ್ಪಾಜಿಯು ನಮ್ರಭಾವದಿಂದ ಕೈಮುಗಿದು ಹೊರಟು ಕಾಲುನಡೆಯಿಂದಲೇ ಯಜ್ಞನಾರಾಯಣ ಸೋಮಯಾಜಿಗಳ ಮನೆಗೆ ಹೋದನು. ಹಜಾರದಲ್ಲಿ ಮಣೆಯು ಹಾಕಿತ್ತು. ಶಿಷ್ಯ ನೊಬ್ಬನು ಯುವರಾಜನನ್ನು ಮರ್ಯಾದೆಯಿಂದ ಕರೆದೊಯ್ದು ಆಸನದಲ್ಲಿ ಕುಳ್ಳಿರಿಸಿದನು. ಸೋಮಯಾಜಿಗಳು ಅಗ್ನಿಹೋತ್ರದ ಮನೆ ಯಿಂದ ಹೊರಗೆ ಬಂದರು ಅವರು ಯಜ್ಞೇಶ್ವರನ ಸಮಾರೋಪಣೆ ಮುಗಿಸಿಕೊಂಡು ಹೊರಗೆ ಬರುತ್ತಲೇ ಚಿಕ್ಕಪ್ಪಾಜಿಯನ್ನು ಕಂಡರು. ಶಾಂತಭಾವದಿಂದ ಪ್ರಸನ್ನರಾಗಿ " ಚಿಕ್ಕಪ್ಪಾಜಿ ! ಏನುಬಂದೆ ?" ಎಂದು ಕೇಳಿದರು.

ಚಿಕ್ಕಪ್ಪಾಜಿಯು ನಮಸ್ಕರಿಸಿ " ಗುರುಗಳೇ ! ನನ್ನ ಅಪರಾಧ ವನ್ನು ಕ್ಷಮಿಸಬೇಕು. ದೊಡ್ಡಪ್ಪಾಜಿಯವರು ವ್ಯಗ್ರರಾಗಿದ್ದಾರೆ. ನಿರಶನ ವ್ರತವನ್ನು ಕೈಗೊಳ್ಳುವುದಾಗಿ ಹೇಳುತ್ತಾರೆ. ನನಗೆ ಭಯ ವಾಗುತ್ತದೆ " ಎಂದು ಕೈಮುಗಿದು ಹೇಳಿದನು.

ಸೋಮಯಾಜಿಗಳು ಶಾಂತಭಾವದಿಂದ " ಚಿಕ್ಕಪ್ಪಾಜಿ ! ನಾನು ಆಗಲೇ ನಿನ್ನನ್ನು ಕ್ಷಮಿಸಿಬಿಟ್ಟೆ. ಅಪರಾಧವೇನೂ ಇಲ್ಲ. ಅಜ್ಞಾನ.

ಅದು ಪೂರ್ವಜನ್ಮ ವಿಪಾಕ! ನೀನೇನು ಮಾಡಬಲ್ಲೆ? ಆದರೆ ನಾನು ಮಾಡಿದ ಸಂಕಲ್ಪವನ್ನು ಹಿಂತೆಗೆಯುವುದಿಲ್ಲ. ಆಡಿದ ಮಾತನ್ನು ತಪ್ಪುವುದಿಲ್ಲ. ಅಗ್ನಿ ಸಮಾರೋಪಣೆ ಮಾಡಿದ್ದೇನೆ. ನಾನು ಪತ್ನೀ ಸಮೇತನಾಗಿ ಈ ಗೃಹತ್ಯಾಗ ಮಾಡುತ್ತೇನೆ. ದಕ್ಷಿಣ ದೇಶದಲ್ಲಿ ಕಾವೇರೀ ತೀರಕ್ಕೆ ಪ್ರಯಾಣ ಮಾಡುತ್ತೇನೆ. ಅಲ್ಲಿಯೇ ನಿಮ್ಮಗಳ ಶ್ರೇಯಃಪ್ರಾರ್ಥನೆ ಮಾಡುತ್ತಿರುತ್ತೇನೆ. ನೀನು ಹೋಗಿ ಮಹಾ ರಾಜರಿಗೆ ತಿಳಿಸು. ಭಯದಿಂದ ಕ್ರೋಧದಿಂದ ನಿರಶನ ವ್ರತವನ್ನು ಕೈಗೊಳ್ಳುವುದು ಧರ್ಮವಲ್ಲ. ಅದರಿಂದ ಪುಣ್ಯವು ಲಭಿಸುವುದಿಲ್ಲ. ಪಾಪವೇ ಸಂಘಟಿಸುತ್ತದೆ." ಎಂದು ಹೇಳಿದರು.

ಚಿಕ್ಕಪ್ಪಾಜಿಯು ಎಷ್ಟೋ ವಿಧವಾಗಿ ಕೇಳಿಕೊಂಡನು. ಫಲ ವಾಗಲಿಲ್ಲ. ಬ್ರಾಹ್ಮಣನು ಸ್ಥಿರನಿಶ್ಚಯದಿಂದ ಹೊರಟೇಬಿಟ್ಟಿದ್ದನು. ಚಿಕ್ಕಪ್ಪಾಜಿಯು ಹಿಂತಿರುಗಿ ಹೋಗಿ ಈ ಸಮಾಚಾರವನ್ನು ರಾಜನಿಗೆ ತಿಳಿಸಿದನು. ಮಹಾರಾಜನು ಅರಮನೆಯಿಂದ ಹೊರಟು ಸೋಮ ಯಾಜಿಗಳ ಮನೆಗೆ ಪಾದಚಾರಿಯಾಗಿಯೇ ಬಂದನು. ವಿದ್ವದ್ಗೋಷ್ಠಿ ಯೆಲ್ಲವೂ ಹಿಂಬಾಲಿಸಿ ಬಂದಿತು. ಚಿಕ್ಕಪ್ಪಾಜಿಯು ಅವರ ಹಿಂದೆಯೇ ಬಂದನು. ಸೋಮಯಾಜಿಗಳು ಸಪತ್ನೀಕರಾಗಿ ಶಿಷ್ಯವೃಂದದೊಡನೆ ಮನೆಯ ಹೊಸಿಲನ್ನು ದಾಟಿ ಮೆಟ್ಟಿಲುಗಳನ್ನು ಇಳಿದು ರಾಜಮಾರ್ಗಕ್ಕೆ ಬಂದಿದ್ದರು ಮಹಾರಾಜನು ಬಂದು ನಮಸ್ಕರಿಸಿ ಬೇಡಿಕೊಂಡನು. ಸೋಮಯಾಜಿಗಳು ರಾಜನನ್ನು ಆಶೀರ್ವದಿಸಿ ತಮ್ಮ ಸಂಕಲ್ಪಕ್ಕೆ ವಿಘ್ನವನ್ನೊಡ್ಡಬಾರದೆಂದು ಏನೋ ಕಾಲಕರ್ಮ ಸಂಯೋಗದಿಂದ ತಾವು ಮೈಸೂರಿನಲ್ಲಿ ಇದ್ದುದಾಗಿಯೂ ಈಶ್ವರನ ಆಜ್ಞೆಯಂತೆಯೇ ತಾವು ದಕ್ಷಿಣಯಾತ್ರೆ ಹೊರಟಿರುವುದಾಗಿಯೂ ಹೇಳಿ ಮಹಾರಾಜರ ಆಜ್ಞೆಯನ್ನು ಪಡೆದು ಮುಂದಕ್ಕೆ ಹೊರಟನು. ಮಧ್ಯಾಹ್ನದ ಸಮಯ ದಲ್ಲಿ ಸೋಮಯಾಜಿಗಳು ರಾಜಧಾನಿಯನ್ನು ಬಿಟ್ಟು ಹೊರಟರು. ಪುರಜನರೆಲ್ಲರೂ ಬಹುದೂರ ಅವರಹಿಂದೆ ಅನುಸರಿಸಿಹೋಗಿ ನಮಸ್ಕ

ರಿಸಿ ಆಶೀರ್ವಾದಗಳನ್ನು ಪಡೆದು ಹಿಂತಿರುಗಿದರು. ಮಹಾರಾಜನು ನಿರ್ವಿಣ್ಣನಾಗಿ ಅರಮನೆಯನ್ನು ಸೇರಿದನು.

೨

ದೊಡ್ಡದೇವರಾಜ ಒಡೆಯರ ಕಾಲದಲ್ಲಿ ಮೈಸೂರು ಸಂಪತ್ಭರಿತವಾಗಿದ್ದಿತು. ರಾಜಧಾನಿಯು ವಿದ್ವಜ್ಜನಭರಿತವಾಗಿಯೂ ಕಲಾನೈಪುಣ್ಯ ಪರಿಶೋಭಿತವಾಗಿಯೂ ಇದ್ದಿತು ರಾಜನ ಔದಾರ್ಯವು ರಾಮೇಶ್ವರದವರೆಗೆ ಪಬ್ಬಿದ್ದಿತು. ಆ ಕಾಲದಲ್ಲಿ ಎಲ್ಲೆಲ್ಲಿಯೂ ಶೈವ ವೈಷ್ಣವ ಭೇದದಿಂದ ಹೋರಾಟಗಳು ನಡೆಯುತ್ತಿದ್ದವು. ಪಾಂಡ್ಯ, ಚೇದಿ ರಾಜ್ಯಗಳು ಶೈವರಾಜ್ಯಗಳಾಗಿಯೂ ಚೋಳಮಂಡಲವು ವೈಷ್ಣವರಾಜ್ಯವಾಗಿಯೂ ಇದ್ದಿತು. ಬಹುಮಂದಿ ವಿದ್ವಾಂಸರು ಆ ಶೈವ ವೈಷ್ಣವ ಭೇದವನ್ನು ಸಹಿಸಲಾರದೆ ಮೈಸೂರಿಗೆ ಬಂದು ನೆಲೆಸಿದ್ದರು. ಯಜ್ಞಯಾಗಾದಿಗಳು ಬಹಳವಾಗಿ ನಡೆಯುತ್ತಿದ್ದವು. ಎಲ್ಲೆಲ್ಲಿಯೂ ದೇವ ಮಂದಿರಗಳ ನಿರ್ಮಾಣವಾಗಿದ್ದಿತು. ವಿಜಯನಗರದ ಕಳೆಯು ಮೈಸೂರಿನಲ್ಲಿ ಪ್ರತ್ಯಕ್ಷವಾಗಿದ್ದಿತು. ಹಿಂದಿನ ಪ್ರಕರಣವು ಅದೇಕಾಲದಲ್ಲಿ ಜರುಗಿದುದು.

ದೊಡ್ಡದೇವರಾಜನು ಯೌವನದಲ್ಲಿ ಪ್ರತಾಪಶಾಲಿಯಾಗಿದ್ದನು. ಈಗ ವೃದ್ಧಾಪ್ಯವು ಪದಾರ್ಪಣಮಾಡಿದೆ. ರೋಗಗ್ರಸ್ತನಾಗಿದ್ದಾನೆ. ಶರೀರದಲ್ಲಿ ಬಲವಿಲ್ಲ. ಮನಸ್ಸಿನ ಬಲವೂ ಕುಗ್ಗುತ್ತಿದೆ ಅರಮನೆಯಲ್ಲಿ ವಿದ್ವಾಂಸರ ಗೋಷ್ಠಿಗಳನ್ನು ಸೇರಿಸಿ ಪುರಾಣ ಪುಣ್ಯ ಕಥೆಗಳ ಶ್ರವಣದಿಂದ ಕಾಲ ಕಳೆಯುತ್ತಾನೆ. ವಿದ್ವಾಂಸರ ತತ್ತ್ವವಿಚಾರಗಳು ಅರಮನೆಯ ಚಾವಡಿಯಲ್ಲಿಯೂ, ರಂಗಮಹಲಿನಲ್ಲಿಯೂ ನಡೆಯುತ್ತಲೇ ಇರುತ್ತದೆ. ದೇಶಾಂತರಗಳಿಂದ ವಿದ್ವಾಂಸರುಗಳು ಈ ರಾಜಸಭೆಗೆ

ಬಂದು ವಾದಮಾಡುತ್ತಾರೆ. ವಿದ್ವಾಂಸರಿಗೆ ರಾಜನು ಖಿಲ್ಲತ್ತುಗಳನ್ನು ಸ್ವರ್ಣಮುದ್ರೆಗಳನ್ನು ಕೊಟ್ಟು ಆದರಿಸುತ್ತಾನೆ. ಈ ಕೀರ್ತಿಯು ಉತ್ತರ ದಕ್ಷಿಣದಲ್ಲೆಲ್ಲಾ ಹಬ್ಬಿದೆ.

ರಾಜನಿಗೆ ಮೂವರು ಧರ್ಮಪತ್ನಿಯರು. ಸಂತಾನವಿರಲಿಲ್ಲ. ಚಿಕ್ಕದೇವರಾಜನು ಮಹಾರಾಜನ ಸಹೋದರ. ಅವನ ಮೇಲೆ ರಾಜನಿಗಿದ್ದ ಪ್ರೀತಿಯು ಅನ್ಯಾದೃಶವಾದುದು. ಚಿಕ್ಕದೇವರಾಜನು ಮಹಾಪರಾಕ್ರಮಿ. ಶಾಸ್ತ್ರಾಧ್ಯಯನ ಮಾಡಿದ್ದನು. ಅವನನ್ನು ಕಂಡರೆ ವಿದ್ವಾಂಸರೆಲ್ಲರಿಗೂ ಬಹಳ ಪ್ರೀತಿ. ಮುಂದೆ ಮೈಸೂರಿನ ರಾಜನಾಗುವನು ಅವನೇ ಎಂದು ಎಲ್ಲರೂ ಹೇಳುತ್ತಿದ್ದರು. ಆರಾಜ ಸಭೆಯಲ್ಲಿ ಬ್ರಾಹ್ಮಣರು, ವೀರಶೈವರು, ಜೈನರು ಎಲ್ಲ ಮತಗಳ ಉದ್ದಾಮ ಪಂಡಿತರಿದ್ದರು. ಎಲ್ಲರಲ್ಲಿಯೂ ಚಿಕ್ಕಪ್ಪಾಜಿಯು ಸಮ ಭಾವದಿಂದ ವಿನಯ ವಿಶ್ವಾಸಗಳಿಂದ ನಡೆಯುತ್ತಿದ್ದನು. ಅವನಿಗೆ ದೇವರಲ್ಲಿ ಭಕ್ತಿಯಿದ್ದಿತು. ವಿದ್ವಾಂಸರಲ್ಲಿ ಪೂಜ್ಯಭಾವವಿದ್ದಿತು. ತತ್ತ್ವ ವಿಚಾರದ ವಾದವು ಬಂದಾಗ ಅವನು ಕಟ್ಟಕಡೆಯ ಹಂತದ ವರೆಗೆ ಹಾರುತ್ತಿದ್ದನು. ಅಲ್ಲಿ ವಿದ್ವಾಂಸರ ವಾದವು ಮೊಂಡಾಗಿದೆ. ಇದೇಕೆ ? ಎಂದು ತನ್ನಷ್ಟಕ್ಕೆ ತಾನೇ ಭಾವಿಸಿಕೊಳ್ಳುತ್ತಿದ್ದನು. ಸರಳಭಾವದಿಂದ ಈ ಪ್ರಶ್ನೆಯನ್ನೇ ಒಬ್ಬಿಬ್ಬರು ವಿದ್ವಾಂಸರಲ್ಲಿ ಎತ್ತು ತ್ತಿದ್ದನು. ವಿದ್ವಾಂಸರು, "ಶಾಸ್ತ್ರಾಧ್ಯಯನ ಮಾಡಬೇಕಯ್ಯಾ ! ಶಾಸ್ತ್ರಪಾರಂಗತನಾಗಬೇಕು ಆಗಲೇ ಸಮಗದ್ದುಗೆಯಲ್ಲಿ ಕುಳಿತು ಮಾತನಾಡುವ ಅಧಿಕಾರವು ನಿನಗೆ ಬರುತ್ತದೆ. ನಿನ್ನದೆಲ್ಲಾ ಅರ್ಧ ಪಾಂಡಿತ್ಯ." ಎಂದು ಬಿಡುತ್ತಿದ್ದರು. ಚಿಕ್ಕದೇವರಾಜನು ಖಿನ್ನ ನಾಗುತ್ತಿರಲಿಲ್ಲ ಇದು ವಿದ್ವಾಂಸರ ಬ್ರಹ್ಮಾಸ್ತ್ರ ಎಂದುಕೊಂಡು ಸಮ್ಮನಾಗುತ್ತಿದ್ದನು.

ಸೋಮಯಾಜಿಗಳ ವಾದಪ್ರಕರಣವು ನಡೆದುದು ಇಂಥದೊಂದು ಸಮಯದಲ್ಲಿಯೇ. ಸೋಮಯಾಜಿಗಳು ಸಾಧಾರಣವಾಗಿ ಶಾಸ್ತ್ರಾರ್ಥ

ದಲ್ಲಿ ಕೈ ಹಾಕುತ್ತಿರಲಿಲ್ಲ. ಅವರು ಶಾಸ್ತ್ರಪಾರಂಗತರಾಗಿದ್ದರೂ ವಿತಂಡವಾದವು ಅವರಿಗೆ ಸರಿಬೀಳುತ್ತಿರಲಿಲ್ಲ. ಯಾರೂ ಅವರನ್ನೆದುರಿಸಿ ಮಾತನಾಡುತ್ತಿರಲಿಲ್ಲ. ದೇಶಾಂತರದಿಂದ ವಿದ್ವಾಂಸರು ವಾದಕ್ಕಾಗಿ ಬಂದರೆ ಮಾತ್ರ ರಾಜಸಭೆಯಲ್ಲಿ ಸೋಮಯಾಜಿಗಳು ಶಾಸ್ತ್ರಾರ್ಥವನ್ನು ಮಾಡುತ್ತಿದ್ದರು. ಅವರ ವಾದಸರಣಿ, ತತ್ತ್ವನಿರ್ಣಯ ವಾಗ್ವೈಖರಿಯನ್ನು ನೋಡಿ ಎಲ್ಲರೂ ತಲೆಬಾಗಿಸುತ್ತಿದ್ದರು. ಒಂದು ದಿನ ಆಂಧ್ರದೇಶದ ಪಂಡಿತರೊಬ್ಬರು ವಿಜಯ ಪತಾಕೆಗಳನ್ನು ಸಂಪಾದಿಸಿಕೊಂಡು ಬಂದು ರಾಜಸಭೆಯಲ್ಲಿ ವಾದವನ್ನು ಹೂಡಿದ್ದರು. ಅದು ಸಾಂಖ್ಯಶಾಸ್ತ್ರದವಾದ. ಆ ಕಾಲದಲ್ಲಿ ಸಾಂಖ್ಯಶಾಸ್ತ್ರವು ಅಪರೂಪವಾಗಿ ಆ ಸ್ಥಾನದಲ್ಲಿ ನ್ಯಾಯಶಾಸ್ತ್ರವು ಪ್ರತಿಷ್ಠಿತವಾಗಿದ್ದಿತು. ಯಜ್ಞನಾರಾಯಣ ಸೋಮಯಾಜಿಗಳು ಸಾಂಖ್ಯಶಾಸ್ತ್ರ ಸಮ್ಮತವಾಗಿಯೇ ವಾದವನ್ನು ಮುಂದುವರಿಸಿದರು. ಸಾಂಖ್ಯದಲ್ಲಿ ನಿರೀಶ್ವರ ವಾದವು ಮುಗಿಲು ಮುಟ್ಟಿ ಹೋಗಿದೆ. ಆಂಧ್ರದೇಶದ ಪಂಡಿತನು "ಕಪಿಲ ಮಹರ್ಷಿಗಳ ಸಿದ್ಧಾಂತವೇ ನಿರೀಶ್ವರ ಸಿದ್ಧಾಂತ" ಎಂದು ವಾದವನ್ನು ಮುಕ್ತಾಯ ಪಡಿಸಿದರು. ಸೋಮಯಾಜಿಗಳು "ಸಾಂಖ್ಯಶಾಸ್ತ್ರವೇ ಕೊನೆಯಲ್ಲ. ಅದು ಬ್ರಹ್ಮವಿದ್ಯವಲ್ಲ ಕಪಿಲನು ಬ್ರಹ್ಮರ್ಷಿಯಲ್ಲ. ಈಶ್ವರನಿದ್ದಾನೆ! ಸರ್ವತ್ರ ಇದ್ದಾನೆ! ಸರ್ವಶಕ್ತನಾಗಿದ್ದಾನೆ! ಎಲ್ಲೆಲ್ಲಿಯೂ ಇದ್ದಾನೆ! ನನ್ನ ಹೃದಯದಲ್ಲಿ ಇದ್ದಾನೆ!" ಎಂದು ಆ ಸಭೆಯಲ್ಲಿ ಎದೆ ತಟ್ಟಿ ಹೇಳಿದರು. ಅಲ್ಲಿಗೆ ವಾದವು ಮುಗಿದು ಹೋಯಿತು. ರಾಜನು ಇಬ್ಬರಿಗೂ ಸಮಾನವಾದ ಮರ್ಯಾದೆಯನ್ನು ಒಪ್ಪಿಸಿದನು.

ಈ ವಾದವನ್ನು ಕೇಳಿದಂದಿನಿಂದ ಚಿಕ್ಕದೇವರಾಜನ ಮನಸ್ಸಿನಲ್ಲಿ ಅದೇ ವಾದವು ಪ್ರತಿಧ್ವನಿತವಾಗುತ್ತಿತ್ತು. ಈ ಹಿನ್ನೆಲೆಯಿಂದಲೇ ಅವನು ಸೋಮಯಾಜಿಗಳನ್ನು ಅದೇ ವಾದದಲ್ಲಿ ಕೆಣಕಿದ್ದನು. ಅದರ ಪರಿಣಾಮದಿಂದಲೇ ಸೋಮಯಾಜಿಗಳು ನಗರ ಪರಿತ್ಯಾಗವನ್ನು

ಮಾಡಿದರು.

ಅಂದಿನಿಂದ ವಿದ್ವಾಂಸರೆಲ್ಲರೂ ಚಿಕ್ಕದೇವರಾಜನನ್ನು ದೂರೀ ಕರಿಸುತ್ತ ಬಂದರು. ಯಾರೂ ಮಾತನಾಡಿಸುತ್ತಿರಲಿಲ್ಲ. ಚಿಕ್ಕದೇವ ರಾಜನು ಅತ್ಯಂತ ಖಿನ್ನನಾಗಿಯೇ ಇದ್ದನು. ಸೋಮಯಾಜಿಗಳ ನಗರ ಪರಿತ್ಯಾಗವು ಬಹಳ ಪ್ರತಿಕ್ರಿಯೆಯನ್ನುಂಟುಮಾಡಿತು. ವಿದ್ವಾಂ ಸರು ಒಬ್ಬೊಬ್ಬರಾಗಿ ಅನೇಕ ನೆಪಗಳನ್ನು ಮಾಡಿಕೊಂಡು ರಾಜಾ ಶ್ರಯವನ್ನು ಪರಿತ್ಯಜಿಸಿದರು. ದೊಡ್ಡದೇವರಾಜನು ದುಃಖದಲ್ಲಿ ಮುಳುಗಿದನು. ಮಂತ್ರಿಗಳಿಗೆ ಚಿಕ್ಕಪ್ಪಾಜಿಯ ಮೇಲೆ ವೈಷಮ್ಯವಿದ್ದೇ ಇದ್ದಿತು. ಅವರುಗಳು ಮಹಾರಾಜರೊಡನೆ ಸಮಯವರಿತು ದುರ್ಬೋಧೆಮಾಡಿ ಚಿಕ್ಕಪ್ಪಾಜಿಯನ್ನು ದೇಶದಿಂದ ಹೊರಗಟ್ಟ ಬೇಕೆಂದು ಸಲಹೆಯಿತ್ತರು. ದೊಡ್ಡದೇವರಾಜನು ಆ ಸಲಹೆಯು ಸರಿಯಾದದ್ದೇ ಎಂದು ನಿಶ್ಚಯಿಸಿದನು. ರಾಜಸಭೆಗೆ ಚಿಕ್ಕದೇವರಾಜ ನನ್ನು ಕರೆಸಿ, "ಚಿಕ್ಕಪ್ಪಾಜಿ! ನೀವು ರಾಜಧಾನಿಯಲ್ಲಿ ಇರಕೂಡದು. ಹದಿನಾಡು ಗ್ರಾಮವು ನಮ್ಮ ಪೂರ್ವೀಕರ ಜನ್ಮಸ್ಥಳ. ನೀವು ಅಲ್ಲಿ ಹೋಗಿ ನೆಲಸಬೇಕು." ಎಂದು ಆಜ್ಞೆ ಇತ್ತನು. ಚಿಕ್ಕಪ್ಪಾಜಿಯು ಮರುಮಾತನಾಡಲಿಲ್ಲ. ಮಹಾರಾಜರ ಪಾದಮುಟ್ಟಿ ಅಭಿವಾದನ ಮಾಡಿ ಏಕಾಕಿಯಾಗಿ ರಾಜಧಾನಿಯನ್ನು ಬಿಟ್ಟು ಹದಿನಾಡಿಗೆ ಹೊರಟು ಹೋದನು.

ಚಿಕ್ಕಪ್ಪಾಜಿಗೆ ವಿವಾಹವಾಗಿತ್ತು. ಅವನ ಧರ್ಮಪತ್ನಿ ಸುಗುಣಾಂಬ. ಚಿಕ್ಕಪ್ಪಾಜಿಯು ತನ್ನ ಪತ್ನಿಯಲ್ಲಿ ಬಹಳ ಪ್ರೇಮ ವಿಟ್ಟಿದ್ದನು. ಆದಾಗ್ಯೂ ಅಂತಃಪುರಕ್ಕೆ ಹೋಗಿ ಪತ್ನಿಯ ದರ್ಶನ ಮಾಡದೆ ಹದಿನಾಡಿಗೆ ಹೊರಟು ಹೋದನು.

ಮಹಾರಾಜನು ಈ ಸಹೋದರ ವಿರಹದಿಂದ ಬಹಳವಾಗಿ ಪರಿ ತಪಿಸಿದನು. ರಾಮನನ್ನು ವನಕ್ಕಟ್ಟಿದ ದಶರಥನಂತೆ ಅವನು ಖಿನ್ನ ನಾದನು. ತಕ್ಕ ವ್ಯವಸ್ಥೆಯನ್ನು ಮಾಡಿ ಚಿಕ್ಕದೇವರಾಜನ ರಾಣಿ

ಯನ್ನೂ ಅಪಾರವಾದ ಐಶ್ವರ್ಯವನ್ನೂ ಹದಿನಾಡಿಗೆ ಕಳುಹಿಸಿ ಕೊಟ್ಟನು. ಹದಿನಾಡು ಸಣ್ಣ ಗ್ರಾಮ. ಚಿಕ್ಕದೇವರಾಜನು ಅಲ್ಲಿ ವಾಸಮಾಡಲು ಆರಂಭಿಸಿದಮೇಲೆ ಆ ಗ್ರಾಮಕ್ಕೆ ಒಂದು ಕಳೆಯು ಬಂದಿದ್ದಿತು. ಕೆಲವರು ವಿದ್ವಾಂಸರು, ವೀರ ಪುರುಷರು ಚಿಕ್ಕದೇವ ರಾಜನನ್ನು ಅನುಸರಿಸಿ ಬಂದು ಅಲ್ಲಿ ನೆಲಸಿದ್ದರು. ಚಿಕ್ಕದೇವರಾಜನು ಶಾಂತವಾಗಿ ಕಾಲಕಳೆಯುತ್ತಿದ್ದನು. ಚಾಮರಾಜನಗರದಿಂದ ಒಬ್ಬ ತರುಣನು ಬಂದು ಆಗಾಗ ಚಿಕ್ಕದೇವರಾಜನನ್ನು ನೋಡಿ ಹೋಗು ತ್ತಿದ್ದನು. ಇವನು ಬಹಳ ವಿದ್ಯಾವಂತನೆಂದು ಚಿಕ್ಕದೇವರಾಜನು ಕಂಡುಕೊಂಡನು ಇವನನ್ನು ಹದಿನಾಡಿಗೆ ಬಂದಿರಬೇಕೆಂದು ಚಿಕ್ಕ ಪ್ರಾಜಿಯು ಪ್ರಾರ್ಥನೆ ಮಾಡಿದನು. ಅತಿ ಸ್ವಲ್ಪ ಕಾಲದಲ್ಲಿಯೇ ಚಿಕ್ಕಪ್ರಾಜಿಯೂ ಆ ತರುಣನೂ ಪರಮ ಮಿತ್ರರಾದರು. ಅವನ ಹೆಸರು ಪಂಡಿತಾರಾಧ್ಯ! ಅವರಿಬ್ಬರೂ ಯಾವಾಗಲೂ ಪುರಾಣ ಪುಣ್ಯ ಕಥೆಗಳನ್ನು ವಿಚಾರ ಮಾಡುತ್ತಾ ವೀರಚರಿತ್ರೆಗಳನ್ನು ವರ್ಣಿ ಸುತ್ತಿದ್ದರು. ಚಿಕ್ಕದೇವರಾಜನು ತನ್ನ ವೃತ್ತಾಂತವನ್ನೆಲ್ಲಾ ಈ ಸ್ನೇಹಿತನೊಂದಿಗೆ ಹೇಳಿಕೊಂಡನು. ಆರಾಧ್ಯನು, "ಮಹಾರಾಜನೇ! ಇದೆಲ್ಲಾ ಕರ್ಮ ಪರಿಪಾಕ. ರಾಜನಿಗೂ ಸಾಮಾನ್ಯ ಮನುಜನಿಗೂ ವ್ಯತ್ಯಾಸವೇನಿದೆ? ಸಾಮಾನ್ಯ ಮನುಜನು ತಾನು ದುಡಿದು ಹೊಟ್ಟೆ ಹೊರೆದುಕೊಳ್ಳುತ್ತಾನೆ. ಗೃಹಸ್ಥನು ಶ್ರಮದಿಂದಲೂ ಬುದ್ಧಿಶಕ್ತಿ ಯಿಂದಲೂ ಹೆಚ್ಚಾಗಿ ಸಂಪಾದಿಸಿ ಸಂಸಾರವನ್ನು ಕಾಪಾಡುತ್ತಾನೆ. ಅತಿಥಿ ಅಭ್ಯಾಗತರನ್ನು ಆದರಿಸುತ್ತಾನೆ. ಆದ್ದರಿಂದಲೇ 'ಧನ್ಯೋ ಗೃಹಸ್ಥಾಶ್ರಮಃ' ಎಂದು ಹೇಳಲ್ಪಟ್ಟಿದೆ. ರಾಜನೆಂಬುವನು ಪರಾ ಕ್ರಮದಿಂದಲೂ ಬುದ್ಧಿಶಕ್ತಿಯಿಂದಲೂ ಉದಾರ ಹೃದಯದಿಂದಲೂ ಸಾವಿರಾರು ಕುಟುಂಬಗಳನ್ನು ಸಲಹುತ್ತಾನೆ. ಧರ್ಮವನ್ನು ರಕ್ಷಿಸು ತ್ತಾನೆ. ಆದುದರಿಂದಲೇ 'ರಾಜಾ ಪ್ರತ್ಯಕ್ಷ ದೈವತಾ' ಎಂಬ ಆರ್ಯೋಕ್ತಿಯು ಫಲಿತವಾಗಿದೆ. ಅಂಥಾ ಶಕ್ತಿ ಸಾಮರ್ಥ್ಯಗಳು

ನಿನ್ನಲ್ಲಿವೆ. ರಾಜಕಳೆಯಿದೆ. ನೀನು ಧರ್ಮ ವಿಮುಖನೆಂದೂ, ನಾಸ್ತಿಕನೆಂದೂ ವಿದ್ವಾಂಸರು ನಿನ್ನನ್ನು ಪರಿತ್ಯಜಿಸಿದ್ದಾರೆ. ಸೋಮ ಯಾಜಿಗಳು ನಿನಗೆ ಇಂದ್ರಜಾಲವನ್ನು ಮಾಡಲಿಲ್ಲ. ನಿನ್ನನ್ನು ಧಾರ್ಮಿಕನಾಗಿ ಮಾಡುವುದಕ್ಕೆ ನಿನ್ನಲ್ಲಿ ಧರ್ಮಶ್ರದ್ಧೆಯನ್ನುಂಟು ಮಾಡುವುದಕ್ಕೆ ಅವರು ತಪಶ್ಶಕ್ತಿಯಿಂದ ಭಗವಂತನ ವಿಭೂತಿ ರೂಪ ವನ್ನು ಪ್ರತ್ಯಕ್ಷಮಾಡಿ ತೋರಿಸಿದರು. ಅದು ನಿನ್ನಲ್ಲಿ ಫಲಿಸಲಿಲ್ಲ. ನಿನ್ನ ಜನ್ಮಾಂತರಕ್ಕೆ ಭಕ್ತಿ ಜ್ಞಾನಗಳು ಹೊಂದುವುದಿಲ್ಲ. ನೀನು ಕರ್ಮಯೋಗಿ. ಕರ್ಮಯೋಗಿಗೆ ಜನತೆಯೇ ಜನಾರ್ಧನ. ಸೇವೆಯೇ ತಪಸ್ಸು. ಅದನ್ನು ನೀನು ಅರಿತುಕೊಳ್ಳಬೇಕು" ಎಂದು ಹೇಳಿದನು. ಆರಾಧ್ಯನ ಉಪದೇಶವು ರಾಜನಿಗೆ ಚೆನ್ನಾಗಿ ನಾಟಿತು. ಅವರಿಬ್ಬರೂ ಲೋಕ ಪರ್ಯಟನ ಮಾಡಬೇಕೆಂದೂ, ಅದರಿಂದಲೇ ಜನರ ಕಷ್ಟ ಸುಖಗಳ ಅನುಭವವಾಗುತ್ತದೆಂದೂ, ಆ ಅನುಭವದಿಂದಲೇ ನಿಜವಾದ ಧರ್ಮಾಧರ್ಮಗಳ ಅರಿವಾಗುವುದೆಂದೂ ನಿಶ್ಚಯಮಾಡಿಕೊಂಡರು. ಇಬ್ಬರೂ ಪ್ರಚ್ಛನ್ನ ವೇಷದಿಂದ ಯಾತ್ರೆಗೆ ಹೊರಟು ಹೋದರು.

ಚಿಕ್ಕದೇವರಾಜನು ಪಂಡಿತನೊಡನೆ ದೇಶವಿದೇಶಗಳನ್ನು ತಿರು ಗಿದನು. ಕಾಶ್ಮೀರದವರೆಗೆ ಅವರಿಬ್ಬರೂ ಕಾಲುನಡೆಯಲ್ಲಿಯೇ ನಡೆದುಹೋದರು. ಕಾಶ್ಮೀರ ಖಂಡದಿಂದ ಹಿಂತಿರುಗಿ ಗಂಗಾತೀರ ದಲ್ಲಿಯೇ ಸಂಚಾರಮಾಡುತ್ತಾ ಬಂದರು. ನಾನಾ ದೇಶಗಳು ನಾನಾ ಭಾಷೆಗಳು ನಾನಾ ಆಚಾರವ್ಯವಹಾರಗಳು ಇವೆಲ್ಲವನ್ನೂ ನೋಡುತ್ತ ಪರಸ್ಪರ ವಿಚಾರ ಮಾಡುತ್ತಾ ಬಂದರು. ಅವರಿಬ್ಬರೂ ವಿರಾಮವಾಗಿ ಕುಳಿತು ಆಗಾಗ ಧರ್ಮಾಧರ್ಮ ವಿಚಾರಮಾಡುತ್ತಿದ್ದರು. ಮಾನವ ಧರ್ಮವೇ ಸರ್ವಶ್ರೇಷ್ಠವೆಂದು ಪ್ರೀತಿ ಪರೋಪಕಾರ ಆರ್ತರ ರಕ್ಷಣೆ ಸೇವೆ ಇವುಗಳೇ ಧರ್ಮದ ತಿರುಳೆಂದು ನಿಶ್ಚಯಿಸಿಕೊಂಡರು. ಅವರಿಬ್ಬರೂ ತಮ್ಮ ಸ್ವದೇಶಕ್ಕೆ ಹಿಂತಿರುಗಬೇಕೆಂದು ಮನಸ್ಸು ಮಾಡಿದರು.

ಸ್ನೇಹಿತರಿಬ್ಬರೂ ವಾರಣಾಸಿಗೆ ಹಿಂತಿರುಗಿ ಬಂದರು. ಆಕ್ಷೇತ್ರ ದಲ್ಲಿ 'ಗಂಗಾಸ್ನಾನ ಮಾಡುತ್ತಾ ವಿಶ್ವೇಶ್ವರನ ದರ್ಶನ ಮಾಡುತ್ತಾ ಅನೇಕ ವಿದ್ವಾಂಸರೊಡನೆ ಕಲೆತು ಧರ್ಮವಿಚಾರ ಮಾಡುತ್ತಾ ಕೆಲವು ದಿನಗಳನ್ನು ಕಳೆದರು. ಅವರು ಮೈಸೂರನ್ನು ಬಿಟ್ಟು ಮೂರು ವರ್ಷ ಗಳಾಗಿ ಹೋಗಿದ್ದವು. ಅತ್ತಕಡೆಯ ಸಮಾಚಾರವೇ ತಿಳಿದಿರಲಿಲ್ಲ. ಕಾಶಿಯಲ್ಲಿ ಎಲ್ಲ ದೇಶದವರೂ ಬರುತ್ತಾರೆ. ತಮ್ಮ ತಮ್ಮ ಗೃಹ ಧರ್ಮಗಳಲ್ಲಿ ವಿರಕ್ತಿಯನ್ನು ಹೊಂದಿ ಆಮರಣಾಂತ ಕಾಶಿಯ ವಾಸ ವನ್ನು ನಿಶ್ಚಯಿಸಿಕೊಂಡು ಬರುವವರೆಷ್ಟೋ ಮಂದಿ. ಈ ಸಂಪ್ರ ದಾಯವು ಈಗಲೂ ಇದೆ. ಕಾಶೀ ಮರಣದಿಂದ ಮುಕ್ತಿಯು ಲಭಿಸುವು ದೆಂದು ಸನಾತನ ಧರ್ಮಾವಲಂಬಿಗಳಿಗೆ ನಂಬಿಕೆಯಿದೆ. ಅನೇಕ ರಾಜರುಗಳು ಅಲ್ಲಿ ಅತಿಥಿಗಳಿಗಾಗಿ ಅನ್ನಛತ್ರಗಳನ್ನಿಟ್ಟಿದ್ದಾರೆ. ಅನೇಕರು ಯಾತ್ರಿಗಳಿಗೆ ಸದಾಬರ್ತ್ (ಅಕ್ಕಿ ಹಿಟ್ಟು ತುಪ್ಪ ವಗೈರೆ ಸಾಮಾನುಗಳನ್ನು ಧರ್ಮವಾಗಿ ಕೊಡುವುದು) ಕೊಡುವ ಧರ್ಮವನ್ನು ನಡೆಸುತ್ತಾರೆ. ಕಾಶಿಯಲ್ಲಿ ಅನ್ನದಾನ ಮಾಡುವುದರಿಂದ ಅನಂತ ಪುಣ್ಯವು ಲಭಿಸುವುದೆಂದು ನಮ್ಮ ಜನರ ನಂಬಿಕೆಯಿದೆ.

ಈ ಸ್ನೇಹಿತರಿಬ್ಬರೂ ಮಣಿಕರ್ಣಿಕೆಯಲ್ಲಿ ಸ್ನಾನ ಮಾಡುತ್ತಿರು ವಾಗ ಮೈಸೂರಿನವರನ್ನು ಕಂಡರು. ದರ್ಶನಮಾತ್ರದಿಂದಲೇ ಮೈಸೂ ರಿನ ಜನರೆಂದು ಪಂಡಿತನು ಗುರುತಿಸಿದನು. ಅವರೊಡನೆ ಮೈಸೂರು ದೇಶದ ಸಮಾಚಾರವೇನೆಂದು ವಿಚಾರಿಸಿದನು. ' ಮೈಸೂರಿನಲ್ಲಿ ಯುವರಾಜನು ದೇಶಭ್ರಷ್ಟರಾಗಿ ಹೊರಟುಹೋಗಿದ್ದಾರೆಂದೂ ಅವ ರನ್ನು ರಾಜಧಾನಿಯಿಂದ ಹೊರಡಿಸಿದಂದಿನಿಂದ ಮಹಾರಾಜರು ರುಗ್ಣ ಶಯ್ಯೆಯಲ್ಲಿ ಮಲಗಿದ್ದಾರೆಂದೂ ಎಲ್ಲ ರಾಜ್ಯಗಳಲ್ಲಿಯೂ ಯುವರಾಜ

ರನ್ನು ಹುಡುಕಿಸುತ್ತಿದ್ದಾರೆಂದೂ' ತಿಳಿಸಿದರು. 'ಯುವರಾಜರನ್ನು ಹುಡುಕಿಕೊಟ್ಟವರಿಗೆ ಸಾವಿರ ವರಹಗಳ ಬಹುಮಾನ ಕೊಡುವುದಾಗಿ ಡಂಗೂರ ಹೊಡೆಸಿದ್ದಾರೆಂದು' ತಿಳಿಸಿದರು. ಈ ವರ್ತಮಾನವನ್ನು ಕೇಳಿ ಅವರಿಬ್ಬರು ಸ್ನೇಹಿತರಿಗೂ ಸ್ವದೇಶಕ್ಕೆ ಹಿಂತಿರುಗುವ ಕುತೂಹಲವು ಹೆಚ್ಚಿತು. ಅವರಿಬ್ಬರೂ ಮೈಸೂರಿಗೆ ಹಿಂತಿರುಗುವ ಸಂಕಲ್ಪವನ್ನು ಮಾಡಿದರು.

ಚಿಕ್ಕಪ್ಪಾಜಿಯೂ, ಪಂಡಿತನೂ ಕಾಶಿಯಿಂದ ಶ್ರೀರಂಗಪಟ್ಟಣಕ್ಕೆ ಹಿಂತಿರುಗುವ ಹೊತ್ತಿಗೆ ಮೂರು ತಿಂಗಳುಗಳು ಕಳೆದುಹೋಗಿದ್ದವು. ಶ್ರೀರಂಗಪಟ್ಟಣದಲ್ಲಿ ಅವರಿಬ್ಬರೂ ಕಾವೇರಿಯ ದಂಡೆಯಮೇಲಿನ ಮಂಟಪದಲ್ಲಿ ಬಂದಿಳಿದರು ಪುರಜನರೆಲ್ಲರೂ ಆಸೆಯಿಂದ ಬಂದು ಯುವರಾಜನನ್ನು ಸಂದರ್ಶಿಸಿದರು. ಮೈಸೂರಿಗೆ ವರ್ತಮಾನವು ಮುಟ್ಟಿತು. ಮರಣೋನ್ಮುಖರಾಗಿದ್ದ ದೊಡ್ಡದೇವರಾಜರಿಗೆ ಈ ಸಮಾಚಾರವನ್ನು ತಿಳಿಸಿದರು. ಅವರು ಹರ್ಷಿತರಾಗಿ ಹಾಸಿಗೆಯ ಮೇಲೆಯೇ ಎದ್ದು ಕುಳಿತರು ವೈದ್ಯರೆಲ್ಲರಿಗೂ ಜೀವ ಬಂದಹಾಗಾಯಿತು. ಅವರುಗಳು ಮಹಾರಾಜರ ಜೀವಕ್ಕೆ ಭಯವಿಲ್ಲ ಎಂದು ಹೇಳಲಾರಂಭಿಸಿದರು. ಮಹಾರಾಜರು ಮಂತ್ರಿಗಳನ್ನೂ, ಪುರಪ್ರಮುಖರನ್ನೂ, ವಿದ್ವಾಂಸರನ್ನೂ ಕರೆಸಿ ಆಲೋಚನೆ ಮಾಡಿದರು. ಎಲ್ಲರೂ ರಾಜರ ಮನಸ್ಸಿನಂತೆ ಯುವರಾಜನನ್ನು ಕರೆತರಬೇಕೆಂದು ಸಲಹೆಯಿತ್ತರು. ಮಂತ್ರಿಗಳೂ ಪುರೋಹಿತರೂ, ಪುರಪ್ರಮುಖರುಗಳೂ ಶ್ರೀರಂಗಪಟ್ಟಣಕ್ಕೆ ಹೋಗಿ ಯುವರಾಜರ ಭೇಟಿಮಾಡಿ ಮಹಾರಾಜರ ಅಪ್ಪಣೆಯನ್ನು ತಿಳಿಯಪಡಿಸಿದರು. ಯುವರಾಜನು ಪಲ್ಲಕ್ಕಿಯಲ್ಲಿ ಕುಳಿತು ಮೈಸೂರಿಗೆ ಬಂದನು. ಪುರಜನರೆಲ್ಲರೂ ವೈಭವದಿಂದ ಯುವರಾಜನನ್ನು ಅರಮನೆಗೆ ಕರೆತಂದರು. ಯುವರಾಜನನ್ನು ಕಾಣುತ್ತಲೇ ಮಹಾರಾಜನಿಗೆ ಅತ್ಯಾನಂದವಾಯಿತು. ತಮ್ಮನನ್ನು ಬಾಚಿತಬ್ಬಿಕೊಂಡು ಆನಂದಾಶ್ರುಗಳನ್ನು ಸುರಿಸಿದನು.

ಯುವರಾಜನು ಯಥಾಪ್ರಕಾರ ಅರಮನೆಯಲ್ಲಿ ನೆಲಸಿದನು.

ಯುವರಾಜನು ಪಂಡಿತನೊಡನೆ ಕಾವ್ಯಾಲಾಪಗಳನ್ನು ಮಾಡ ತೊಡಗಿದನು ಅವನ ವಾದದ ರೀತಿಯೇ ಬೇರೆಯಾಗಿದ್ದಿತು. ಆ ವಾದಗಳಲ್ಲಿ ಲೋಕಾನುಭವವು ತುಂಬಿದ್ದಿತು. ಯುವರಾಜನು ಪ್ರತಿಯೊಂದು ವಿಷಯಗಳನ್ನೂ, ಧರ್ಮಾರ್ಥಧರ್ಮಕ್ಕೆ ಒರೆ ಹಚ್ಚಿ ತೋರಿಸುತ್ತಿದ್ದನು. ವಿದ್ವಾಂಸರೆಲ್ಲರೂ ಆಶ್ಚರ್ಯಪಡುತ್ತಿದ್ದರು. ಧರ್ಮದ ಪ್ರತ್ಯಾಕ್ಷಾನುಭವವುಳ್ಳವನು ಚಿಕ್ಕದೇವರಾಜ ಎಂದು ಹೊಗಳಲಾರಂಭಿಸಿದರು.

ವಿದ್ವಾಂಸರುಗಳು ಮಹಾರಾಜರೊಡನೆ ಚಿಕ್ಕದೇವರಾಜನ ಗುಣಗಣಗಳನ್ನು ವರ್ಣಿಸಿದರು. ಅವನ ಧರ್ಮಾರ್ಥಧರ್ಮ ವಿವೇಚನೆ ಯನ್ನು ಕೊಂಡಾಡಿದರು. ಮಹಾರಾಜನು ಅವರುಗಳ ಅಭಿಪ್ರಾಯ ವರಿತು ಪುರಪ್ರಮುಖರನ್ನೂ, ಮಂತ್ರಿಗಳನ್ನೂ ಕರೆಯಿಸಿಕೊಂಡು ಚಿಕ್ಕ ದೇವರಾಜನಿಗೆ ಪಟ್ಟಕಟ್ಟಬೇಕೆಂಬ ತನ್ನ ಅಭಿಲಾಷೆಯನ್ನು ತಿಳಿಸಿ ದನು. ಅವರೆಲ್ಲರೂ ಏಕವಾಕ್ಯತೆಯಿಂದ ಮಹಾರಾಜರ ಅಭಿಪ್ರಾಯ ವನ್ನು ಅನುಮೋದಿಸಿದರು. ಮಹಾರಾಜರ ಅಪ್ಪಣೆಯಂತೆ ಚಿಕ್ಕ ದೇವರಾಜ ಒಡೆಯರಿಗೆ ಪಟ್ಟಾಭಿಷೇಕವಾಯಿತು ಸ್ವಲ್ಪ ದಿನಗಳಲ್ಲಿಯೇ ದೊಡ್ಡ ದೇವರಾಜರು ಸ್ವರ್ಗಾರೋಹಣ ಮಾಡಿದರು.

ಚಿಕ್ಕದೇವರಾಜರಿಗೆ , ಪಟ್ಟಾಭಿಷೇಕವಾಗುತ್ತಲೇ ಪಂಡಿತನು ಹದಿನಾಡಿಗೆ ಹಿಂತಿರುಗುವುದಾಗಿ ತಿಳಿಸಿದನು. ರಾಜನು ಅವನನ್ನು ಬಿಟ್ಟಿರಲಾಗದೆ ತನ್ನ ಸಮೀಪದಲ್ಲಿಯೇ ಇರಬೇಕೆಂದು ಪ್ರಾರ್ಥನೆ ಮಾಡಿ ಇರಿಸಿಕೊಂಡನು.

ಪಂಡಿತಾರಾಧ್ಯನಲ್ಲಿ ರಾಜನು ಯಾವಾಗಲೂ ರಾಜಕೀಯ ವಿಚಾರಗಳನ್ನು ಚರ್ಚಿಸುತ್ತಿದ್ದನು. ಅವನ ಸಲಹೆಗಳು ರಾಜನಿಗೆ ಯಾವಾಗಲೂ ಒಪ್ಪಿಗೆಯಾಗುತ್ತಿದ್ದವು. ಪಂಡಿತನು ಯಾವಾಗಲೂ ನಮ್ರಭಾವದಿಂದ ಇರುತ್ತಿದ್ದನು. ಅರಮನೆಯ ವಾತಾವರಣವು

ಅವನಿಗಷ್ಟು ಸುಖಮಯವಾಗಿರಲಿಲ್ಲ. ವಂಶಾನುಕ್ರಮವಾಗಿ ಬಂದಿದ್ದ ಮಂತ್ರಿಗಳಿಗೆ ಅವನಲ್ಲಿ ಮೊಟ್ಟಮೊದಲು ಸಂದೇಹಕ್ಕೆಡೆಯಾಯಿತು. ರಾಜ್ಯಭಾರದಲ್ಲಿ ಪಂಡಿತನ ಸಲಹೆಗಳೇ ಪ್ರಾಧಾನ್ಯತೆಯನ್ನು ಪಡೆಯುತ್ತಿದ್ದವು. ವಿದ್ವಾಂಸರುಗಳಿಗೆ ಪಂಡಿತನು ಗುಪ್ತಗಾಮಿಯೆಂದು ಅವನಲ್ಲಿ ಸಂದೇಹಕ್ಕೆ ಆರಂಭವಾಯಿತು. ವೈದಿಕ ವಿದ್ವಾಂಸರೂ, ವೀರಶೈವರೂ ಈ ಪಂಡಿತನು ಜೈನ ಮತಸ್ಥನೆಂದೂ, ಇವನ ಪ್ರಾಬಲ್ಯದಿಂದ ಧರ್ಮಕ್ಕೆ ಮುಳ್ಳು ತಟ್ಟುತ್ತದೆಂದೂ ಸಂಶಯಪಡಲಾರಂಭಿಸಿದರು. ಪಂಡಿತಾರಾಧ್ಯನು ಸೂಕ್ಷ್ಮವಾಗಿ ಇದನ್ನೆಲ್ಲಾ ಅರಿತುಕೊಳ್ಳುತ್ತಿದ್ದನು. ಆದರೆ ಅವನನ್ನು ಪ್ರತ್ಯಕ್ಷನಾಗಿ ಕಂಡಾಗ ಹಿಂದುಗಡೆ ವಿರೋಧ ಮಾಡುವವರೇ ಅವನ ಗುಣಗಳಿಗಾಗಿ ಮೆಚ್ಚುತ್ತಿದ್ದರು.

ಅರಮನೆಯಲ್ಲಿ ಪಂಡಿತರ ಗೋಷ್ಠಿಯಲ್ಲಿ ಒಂದು ದಿನ ಶಾಸ್ತ್ರಾರ್ಥವು ಎದ್ದಿದ್ದಿತು. ಅಕಸ್ಮಾತ್ತಾಗಿ ಪಂಡಿತನು ಆ ಸಭೆಗೆ ಬಂದನು. ಶೈವ, ವೈಷ್ಣವಧರ್ಮಗಳ ಕೋಲಾಹಲವೆದ್ದಿದ್ದಿತು. ವಿದ್ವಾಂಸರುಗಳು ಕೋಪೋದ್ರಿಕ್ತರಾಗಿ ತುಚ್ಛಭಾಷೆಗಳಿಂದ ಪರಸ್ಪರ ನಿಂದೆಗಳಿಗೆ ಆರಂಭಮಾಡಿದ್ದರು. ಪಂಡಿತನು ಆ ಸಭೆಗೆ ಬರುತ್ತಲೇ ಅವನನ್ನು ವಿದ್ವಾಂಸರುಗಳು ಕೂಡಿಸಿಕೊಂಡು ತಮ್ಮ ವಾದಗಳನ್ನು ವಿಸ್ತರಿಸತೊಡಗಿದರು. ಪಂಡಿತನು ಎಲ್ಲರನ್ನೂ ಸಮಾಧಾನಮಾಡಿ, "ದೇವರು ದೊಡ್ಡವನು. ಈ ಜಗತ್ತೆಲ್ಲವೂ ಅವನ ಸೃಷ್ಟಿ. ದೇವರಿಗೆ ಶೈವ, ವೈಷ್ಣವ ಭೇದವಿಲ್ಲ. ಈ ಭೇದಗಳೆಲ್ಲಾ ನಮ್ಮ ಸೃಷ್ಟಿ. ಲೋಕದಲ್ಲಿ ಧರ್ಮವೇ ದೊಡ್ಡದು ಎಲ್ಲ ಸಿದ್ಧಾಂತಗಳಿಗಿಂತಲೂ ಜ್ಞಾನವು ಮೇಲಾದುದು. ದೇವರು ಜ್ಞಾನ ಸ್ವರೂಪಿ. ಆನಂದಸ್ವರೂಪಿ." ಎಂದು ಹೇಳಿದನು. ವಿದ್ವಾಂಸರಿಗೆ ಸಮಾಧಾನವಾಗಲಿಲ್ಲ. "ಪಂಡಿತನೇ ! ನೀನು ಚಾತುರ್ಯದಿಂದ ಶಾಸ್ತ್ರಾರ್ಥದ ಮಾರ್ಗವನ್ನು ತಪ್ಪಿಸುತ್ತಿದ್ದೀಯೆ. ಶಿವನು ಹೆಚ್ಚೋ ವಿಷ್ಣುವು ಹೆಚ್ಚೋ ಸ್ಪಷ್ಟವಾಗಿ ಹೇಳು. ಯಾವಧರ್ಮವು ಶ್ರೇಷ್ಠ. ಅದನ್ನು ಹೇಳು" ಎಂದು

ಧೂರ್ತತೆಯಿಂದ ಕೇಳಿದನು. ಪಂಡಿತನು ಶಾಂತಭಾವದಿಂದ, "ಧರ್ಮ ಶಾಸ್ತ್ರಗಳು ವಾದಕ್ಕಾಗಿ ಹುಟ್ಟಲಿಲ್ಲ. ಅನುಷ್ಠಾನಕ್ಕಾಗಿ ಮಹರ್ಷಿ ಗಳಿಂದ ತೋರಿಸಲ್ಪಟ್ಟಿರುವ ರಾಜಮಾರ್ಗಗಳೇ ಅವು. ಎಲ್ಲ ಮಾರ್ಗ ಗಳಿಂದಲೂ ಧರ್ಮ ನಿರ್ಣಯವಾಗುತ್ತದೆ. ಅವರವರ ಧರ್ಮದಿಂದಲೇ ಅವರವರಿಗೆ ಶ್ರೇಯಸ್ಸು. ನದಿಗಳೆಲ್ಲವೂ ಸಾಗರದಲ್ಲಿ ಸೇರುವಂತೆ ಎಲ್ಲ ಧರ್ಮಗಳೂ ಭಗವಂತನಲ್ಲಿ ಹೋಗಿ ಶಾಂತವಾಗುತ್ತವೆ. ಭಗವಂತನನ್ನು 'ಶಿವ', 'ವಿಷ್ಣು' 'ಶಕ್ತಿ' ರೂಪದಿಂದ ಭಾವುಕರು ಭಜಿಸುತ್ತಾರೆ. ಅದೆಲ್ಲವೂ ಭಗವಂತನ ಪ್ರತಿಬಿಂಬಗಳು. ನಿಜವಾದ ಭಗವತ್ ಸ್ವರೂಪಕ್ಕೆ ಆಕಾರವಿಲ್ಲ. ಅದು ಶುದ್ಧಜ್ಞಾನ ಸ್ವರೂಪ" ಎಂದು ಹೇಳಿದನು. ವೀರಶೈವ ಪಂಡಿತನೊಬ್ಬನು ಶಾರ್ಯದಿಂದ ಮುಂದೆ ಬಂದು, "ಪಂಡಿತನೇ! ನೀನು ದೇವರನ್ನು ಕಂಡಿದ್ದೀಯಾ?" ಎಂದು ಪ್ರಶ್ನೆಮಾಡಿದನು. ಪಂಡಿತನು "ವಿದ್ವಾಂಸನೇ! ನಾನು ದೇವರನ್ನು ಕಂಡಿಲ್ಲ. ಪ್ರತಿ ಕ್ಷಣವೂ ದೇವರಿದ್ದಾನೆಂಬ ಚಿನ್ಹೆಗಳನ್ನು ಕಾಣುತ್ತಿದ್ದೇನೆ. ಆ ದಿವ್ಯ ಪುಷ್ಪವು ನನ್ನ ಕೈಯ್ಯಲ್ಲಿಲ್ಲ. ಆ ಸುವಾ ಸನೆಯು ಎಲ್ಲೆಲ್ಲಿಯೂ ಇದೆ. ಆ ಜ್ಯೋತಿಸ್ವರೂಪವನ್ನು ನಾನು ಕಂಡಿಲ್ಲ. ಆದರೆ ಆ ಪ್ರಭೆಯಿಂದಲೇ ನಾವೆಲ್ಲರೂ ನಮ್ಮ ಕಣ್ಣು ಗಳಿಂದ ಈ ಜಗತ್ತನ್ನು ಕಾಣುತ್ತಿದ್ದೇವೆ" ಎಂದು ಹೇಳಿದನು ಶಾಸ್ತ್ರಾರ್ಥಗಳು ಅಲ್ಲಿ ಕೊನೆ ಮುಟ್ಟಿಹೋದವು. ಆದರೆ ಯಾರಿಗೂ ಸಮಾಧಾನವಾಗಲಿಲ್ಲ. ವಿದ್ವಾಂಸರು ತಮ್ಮ ತಮ್ಮಲ್ಲಿಯೇ ಮಾತ ನಾಡಿಕೊಂಡು ತಮ್ಮತಮ್ಮ ಮನೆಗಳಿಗೆ ಹೋಗುತ್ತಿದ್ದರು "ಪಂಡಿತ ನಿಗೆ ಶಾಸ್ತ್ರವು ಗೊತ್ತಿಲ್ಲ. ಚಾತುರ್ಯದಿಂದ ಮಾತನಾಡಿ ಮೆಚ್ಚಿಸಲು ಪ್ರಯತ್ನಿಸುತ್ತಾನೆ. ಶಾಸ್ತ್ರವೆಂದರೆ ಶಾಸ್ತ್ರ! ಚಾಚೂ ತಪ್ಪಿದರೆ ಶಾಸ್ತ್ರಾರ್ಥವೆಲ್ಲಿ ಬಂತು? ಅವನ ದೇವರು, ಧರ್ಮ, ಇವೆಲ್ಲಾ ಗೊಡ್ಡು ಮಾತುಗಳು. ಪುರಾಣದ ಮಾತುಗಳು." ಎಂದುಕೊಂಡು ಹೋಗು ತ್ತಿದ್ದರು. ಕೆಲವರು "ಪಂಡಿತನು ಬುದ್ಧಿವಂತ. ವಾದವನ್ನು ಮುರಿದು

ಹಾಕಿಬಿಟ್ಟ. ಅವನಿಗೆ ಶೈವ, ವೈಷ್ಣವ ಭೇದವಿಲ್ಲ" ಎಂದುಕೊಳ್ಳು ತ್ತಿದ್ದರು. ಮತ್ತೆ ಕೆಲವರು "ಅವನು ನಾಸ್ತಿಕ. ಶೈವ ವೈಷ್ಣವ ಸಂಪ್ರದಾಯಗಳನ್ನು ಒಪ್ಪುವುದಿಲ್ಲ. ಜ್ಞಾನವಂತೆ ಜ್ಞಾನ-ಶಾಸ್ತ್ರ ಸಂಪ್ರದಾಯಗಳಿಲ್ಲದೇ ಜ್ಞಾನವೆಲ್ಲಿದೆ. ಇದೆಲ್ಲಿಯೋ ಬೌದ್ಧಮತದ ಭ್ರಾಂತಿ" ಎಂದುಕೊಂಡು ಹೊರಟು ಹೋದರು.

ಆದರೂ ಅಂದಿನಿಂದ ವಿದ್ವತ್‌ಸಭೆಯಲ್ಲಿ ಅವನಿಗೊಂದು ಸ್ಥಾನವು ದೊರೆಯಿತು. ವಿದ್ವಾಂಸರೆಲ್ಲರಿಗೂ ಅವನ ಮಾತುಗಳನ್ನು ಕೇಳುವುದಕ್ಕೆ ಆಶೆ. ದಿನ ದಿನಕ್ಕೆ ಪಂಡಿತನಲ್ಲಿ ಒಂದು ವಿಧವಾದ ನಿಗೂಢ ಪ್ರೇಮಕ್ಕೆ ಆರಂಭವಾಯಿತು. ಮಂತ್ರಿಗಳು ಆಗಾಗ ಪಂಡಿತನೊಡನೆ ರಾಜಕೀಯಗಳನ್ನು ಚರ್ಚಿಸುತ್ತಿದ್ದರು.

ರೈತರು ಬೆಳೆವ ಬೆಳೆಗಳಲ್ಲಿ ಅರ್ಧವನ್ನು ರಾಜರಿಗೆ ಕೊಡುವ ಪದ್ಧತಿಯಿತ್ತು. ಗೋಧನದಲ್ಲಿ ಉತ್ಕೃಷ್ಟವಾದ ಗೋವುಗಳನ್ನು ರಾಜ ರಿಗೆ ಅರ್ಪಿಸಬೇಕೆಂಬ ಸಂಪ್ರದಾಯವಿತ್ತು. ಚಿಕ್ಕದೇವರಾಜನೂ ಪಂಡಿತನೂ ಬಹುದಿನಗಳು ಆಲೋಚನೆ ಮಾಡಿದರು. ಈ ಸಂಪ್ರ ದಾಯವನ್ನು ಬದಲಾಯಿಸಬೇಕೆಂದೂ ಧನರೂಪದಲ್ಲಿಯೇ ರಾಜಾದಾ ಯವನ್ನು ಸಲ್ಲಿಸಬೇಕೆಂದೂ ವಿಚಾರಮಾಡತೊಡಗಿದರು. ಮಂತ್ರಿಗಳು ಇದನ್ನೊಪ್ಪಲಿಲ್ಲ. ಈ ವಿಷಯದಲ್ಲಿ ವಿಪುಲ ಚರ್ಚೆಗೆ ಆರಂಭವಾಯಿತು. ರಾಜನು ಧಾನ್ಯಗಳನ್ನು ವಸೂಲ್ಮಾಡಕೂಡದೆಂದೂ ದ್ರವ್ಯರೂಪವಾಗಿ ಯೇ ರಾಜಾದಾಯವನ್ನು ವಸೂಲ್ಮಾಡಬೇಕೆಂದೂ ರಾಜಾಜ್ಞೆಯನ್ನು ಹೊರಡಿಸಿದನು. ದೇಶದಲ್ಲಿ ನಾಣ್ಯಗಳ ಚಲಾವಣೆಯು ಹೆಚ್ಚಾಗಿ ಇಲ್ಲದೇ ಇತ್ತು. ಟಂಕಸಾಲೆಯನ್ನಿಡಿಸಿ ಚಿನ್ನ ಬೆಳ್ಳಿ ತಾಮ್ರದ ನಾಣ್ಯಗಳನ್ನು ಮಾಡಿಸಿದನು. ಇದಕ್ಕೆಲ್ಲಾ ಪಂಡಿತಾರಾಧ್ಯನ ಸಲಹೆಯೇ ಕಾರಣವೆಂದು ಜನಜನಿತವಾಯಿತು. ಈ ಪದ್ಧತಿಯಿಂದ ದೇಶದಲ್ಲಿ ಬರಗಾಲ ಬರುತ್ತದೆಂದೂ ರಾಜನು ದರಿದ್ರನಾಗುತ್ತಾನೆಂದೂ ಜನ ರೆಲ್ಲರೂ ಹೊಟ್ಟೆಯ ಪಾಡಿಗಾಗಿ ರೈತರನ್ನು ಆಶ್ರಯಿಸುತ್ತಾರೆಂದೂ

ಶೂದ್ರ ಪ್ರಾಬಲ್ಯವು ಹೆಚ್ಚಾಗಿ ಹೋಗುತ್ತದೆಂದೂ ವಿದ್ವಾಂಸರೂ ಮಂತ್ರಿಗಳೂ ಹೇಳತೊಡಗಿದರು. ಮಂತ್ರಿಗಳು ತಮ್ಮ ಅಧಿಕಾರಕ್ಕೆ ರಾಜೀನಾಮೆಗಳನ್ನಿತ್ತರು. ವಿದ್ವಾಂಸರು ವಿಮುಖರಾದರು.

ಚಿಕ್ಕದೇವರಾಜ ಒಡೆಯನು ಇದೆಲ್ಲವನ್ನೂ ಕಂಡು ಕೋಪ ಗೊಳ್ಳಲಿಲ್ಲ. ವಿಸ್ಮಯವನ್ನು ಹೊಂದಿದನು. 'ರಾಜ್ಯದಲ್ಲಿ ಹೊಸ ಪರಿವರ್ತನೆಗಳಾಗುವಾಗಲೆಲ್ಲಾ ಹೀಗೆಯೇ ಜನವಿಪ್ಲವವಾಗುವುದು ಸ್ವಾಭಾವಿಕವಾಗಿಯೇ ಇದೆ. ಇಂತಹ ಪರಿವರ್ತನೆಗಳಾಗದೇ ರಾಜ್ಯವು ಬೆಳೆಯುವುದಿಲ್ಲ' ಎಂದುಕೊಂಡನು ಪಂಡಿತನನ್ನು ಪ್ರಾರ್ಥನೆಮಾಡಿ ಮಂತ್ರಿಪದವಿಯನ್ನು ವಹಿಸಿಕೊಳ್ಳಬೇಕೆಂದು ನಿರ್ಬಂಧಪಡಿಸಿದನು. ಪಂಡಿತಾರಾಧ್ಯನು ಅಂದಿನಿಂದ ಮೈಸೂರಿನ ಮಂತ್ರಿಯಾದನು.

೪

ಶ್ರೀರಂಗಪಟ್ಟಣದಲ್ಲಿ ವೈಮಾಳಿಗೆಯ ಉತ್ಸವವು ಆರಂಭವಾಯಿತು. ರಂಗನಾಥನ ರಂಗಮಹಲಿನಲ್ಲಿ ಪ್ರತಿದಿನವೂ ಸಂಗೀತ, ನರ್ತನಗಳೂ, ಕೀರ್ತನೆ, ಭಜನೆಗಳೂ ಅನ್ಯಾದೃಶವಾಗಿ ನಡೆಯುತ್ತಿದ್ದವು. ದೇಶವಿದೇಶಗಳಿಂದ ಬಹುಮಂದಿ ಯಾತ್ರಿಕರು ವಿದ್ವಾಂಸರುಗಳು ಈ ಉತ್ಸವವನ್ನು ನೋಡಲು ಬರುತ್ತಿದ್ದರು. ಮೈಸೂರಿನಿಂದ ವೇಶ್ಯೆಯೊಬ್ಬಳು ಬಂದು ಅಮೋಘವಾದ ಸಂಗೀತವನ್ನು ಹಾಡಿದಳೆಂದು ಊರಿನಲ್ಲೆಲ್ಲಾ ಪ್ರಸಿದ್ಧವಾಯಿತು. ರಾಜನು ಆ ದಿನ ದೇವಾಲಯಕ್ಕೆ ಬಂದಿರಲಿಲ್ಲ. ಆದರೆ ಈ ಸಂಗೀತದ ವರ್ಣನೆಯು ಮಾತ್ರ ರಾಜನ ಕಿವಿಯನ್ನು ಹೊಕ್ಕಿತು. ಅಂತಃಪುರದಲ್ಲಿಯೂ ಈ ಸಂಗೀತದ ಪ್ರಶಂಸೆಯು ನಡೆದಿತ್ತು. ರಾಜರಲ್ಲಿ ವಿಶೇಷವ್ಯಾಪನೆ ಇದ್ದ ಅಳಸಿಂಗ

ರಾರ್ಯರು ಆ ಸಂಗೀತಗಾರಳ ಸಂಗೀತವನ್ನು ಅರಮನೆಯಲ್ಲಿ ನಡೆಸ ಬೇಕೆಂದು ರಾಜರನ್ನು ಒತ್ತಾಯಪಡಿಸಿದರು. ಅರಮನೆಯ ಭವ್ಯ ನಾದ ರಂಗಮಹಲಿನಲ್ಲಿ ಸಂಗೀತ ಕಛೇರಿಯ ಏರ್ಪಾಡಾಗಿದ್ದಿತು ವಿದ್ವಾಂಸರೂ ಉನ್ನತಾಧಿಕಾರಿಗಳೂ ಬಂದು ತಮ್ಮ ತಮ್ಮ ಆಸನಗಳಲ್ಲಿ ಮಂಡಿಸಿದ್ದರು. ರಂಗಮಹಲಿನ ಮಧ್ಯದಲ್ಲಿ ಚಚ್ಚೌಕವಾದ ರತ್ನ ಗಂಬಳಿಯನ್ನು ಹಾಸಿ ಅದರಮೇಲೆ ಪುಷ್ಪದಾನುಗಳನ್ನು ಇಟ್ಟಿದ್ದರು. ಆ ಸದರಿನಮೇಲೆ ಸಂಗೀತಗಾರಳು ಪಕ್ಕವಾದ್ಯಗಳೊಡನೆ ಕುಳಿತು ಕೊಂಡು ತಂಬೂರಿಯನ್ನು ಶೃತಿಗೈಯ್ಯುತ್ತಿದ್ದಳು ಅಷ್ಟರಲ್ಲಿ ಅರ ಮನೆಯ ಒಳಗಿನಿಂದ ವಂದಿಮಾಗಧರ ಪರಾಕಿನ ಧ್ವನಿಯು ಕೇಳಿ ಸಿತು. ಮಹಾರಾಜರು ಆ ರಂಗಮಹಲಿಗೆ ಬಂದು ಅಲ್ಲಿ ಸಜ್ಜಾಗಿದ್ದ ಲೋಡಿನ ಮೇಲೆ ಕುಳಿತುಕೊಂಡರು. ಮಹಾರಾಜರ ಅಪ್ಪಣೆಯಂತೆ ಸಿಂಗರಾರ್ಯನು ಮುಂದುಗಡೆ ಕುಳಿತುಕೊಂಡನು. ಸಂಗೀತಕ್ಕೆ ಆರಂಭವಾಯಿತು. ಅಂದಿನ ಸಂಗೀತವನ್ನು ವಿದ್ವಾಂಸರೆಲ್ಲರೂ ಮೆಚ್ಚಿ ದರು. ರಾಜನು ಸಿಂಗರಾರ್ಯನನ್ನು "ಆರ್ಯರೇ! ಈ ವಿದುಷಿಯು ಯಾವ ದೇಶದವಳು? ಈ ವಿದ್ಯಾಭ್ಯಾಸವು ಎಲ್ಲಿ ನಡೆಯಿತು?" ಎಂದು ಪ್ರಶ್ನೆಮಾಡಿದರು.

ಸಿಂಗರಾರ್ಯನು ಕೈಮುಗಿದು, "ಮಹಾಪ್ರಭು ಹುಡುಗಿಯು ಮೈಸೂರಿನವಳು. ಆಕೆಯ ಗುರುವು ದಕ್ಷಿಣ ದೇಶದವನು. ತನ್ನ ಹೆಸರು ವಿಶ್ವೇಶ್ವರ ಎಂದು ಹೇಳಿಕೊಳ್ಳುತ್ತಾನೆ. ಉಪನಾಮಗಳಿಲ್ಲ. ಆದರೂ ಸಾಹಿತ್ಯ ಕಲೆಯಲ್ಲಿ ಅದ್ವಿತೀಯ ಪಾಂಡಿತ್ಯವಿದೆ. ಭರತಶಾಸ್ತ್ರದಲ್ಲಿಯೂ ಆತನು ನಿಸ್ಸೀಮ," ಎಂದು ಹೇಳಿದನು.

ರಾಜನು ಆಕೆಯ ಕಡೆಗೆ ತಿರುಗಿ, "ವಿದುಷಿ! ನಿನ್ನ ವಿದ್ವತ್ತು ಪ್ರಶಸ್ತವಾದುದು. ನಿನ್ನ ಸಂಗೀತವು ಅಮೋಘವಾದುದು" ಎಂದು ಹೇಳಿದನು. ಅರಮನೆಯ ಭಕ್ಷಿಗಳು ತಟ್ಟೆಯಲ್ಲಿ ಪೀತಾಂಬರವನ್ನೂ, ವಜ್ರದ ಓಲೆಯುಗಳನ್ನೂ ಮುಕ್ತಾಹಾರವನ್ನೂ ತಂದು ಆ ವಿದುಷಿಗೆ

ಬಹುಮಾನವಾಗಿ ಒಪ್ಪಿಸಿದರು. ಸಂಗೀತಗಾರಳು ಆ ಸಭೆಯಲ್ಲಿ ಎದ್ದುನಿಂತು ಮಹಾರಾಜರನ್ನು ಅಭಿವಂದಿಸಿ ವಿದ್ವಾಂಸರುಗಳಿಗೆ ಕೈ ಮುಗಿದು ಆ ಬಹುಮಾನವನ್ನು ಸ್ವೀಕರಿಸಿದಳು. ಮಹಾರಾಜನು, "ವಿದುಷಿ ನಿನ್ನ ಹೆಸರೇನು ?" ಎಂದು ಕೇಳಿದನು.

ಅವಳು ಮಂದಹಾಸವನ್ನು ಬೀರುತ್ತಾ ತಲೆ ತಗ್ಗಿಸಿ "ಮಲ್ಲಿಗೆ !" ಎಂದು ಹೇಳಿ ಕೈ ಮುಗಿದಳು. ರಾಜನು ನಕ್ಕು "ಮಲ್ಲಿಗೆ !" ಎಂದು ಆ ಸಭಾಮಂಟಪದಿಂದ ಅಂತರ್ಗೃಹದೊಳಗೆ ಹೊರಟುಹೋದನು. ಅಂತಃಪುರದಲ್ಲಿದ್ದ ರಾಣೀವಾಸದವರೆಲ್ಲರೂ ಮೇಲುಭಾವಣಿಯಲ್ಲಿ ಕುಳಿತು ಸಂಗೀತವನ್ನು ಕೇಳುತ್ತಿದ್ದರು. ಸಂಗೀತಸಭೆಯು ಪೂರ್ತಿ ಯಾದ ಮೇಲೆ ರಾಣೀವಾಸಕ್ಕೆ ಮಲ್ಲಿಗೆಯನ್ನು ಕರೆಸಿ ಎಲ್ಲರೂ ಪ್ರಶಂಸೆ ಮಾಡಿದರು. ಮಲ್ಲಿಗೆಯು ರಾಣೀವಾಸದವರನ್ನೆಲ್ಲಾ ನಮಿಸಿ ಅಪ್ಪಣೆ ಪಡೆದು ತನ್ನ ಬಿಡಾರಕ್ಕೆ ಹಿಂತಿರುಗಿದಳು.

ಮಲ್ಲಿಗೆಯು ಸಿಂಗರಾರ್ಯನ ಮನೆಯಲ್ಲಿಯೇ ಬಿಡಾರವನ್ನು ಮಾಡಿದ್ದಳು. ಎರಡು ದಿನಗಳು ಕಳೆದತರುವಾಯ ಅರಮನೆಯಲ್ಲಿ ಮಲ್ಲಿಗೆಯ ನರ್ತನಕ್ಕೆ ಏರ್ಪಾಡಾಗಿದ್ದಿತು. ಆ ನರ್ತನದಲ್ಲಿಯೂ ಮಲ್ಲಿಗೆಯು ರಾಜನನ್ನು ಮೆಚ್ಚಿಸಿದಳು. ಆ ದಿನವೂ ಅರಮನೆಯಿಂದ ವಸ್ತ್ರದುಕೂಲಾಭರಣಗಳು ಉಡುಗರೆಯಾಗಿ ಕೊಡಲ್ಪಟ್ಟವು. ಮಲ್ಲಿ ಗೆಯು ಮಹಾರಾಜರನ್ನು ಅಭಿವಂದಿಸಿ ಅಪ್ಪಣೆಯನ್ನು ಪಡೆದು ಬಿಡಾ ರಕ್ಕೆ ತೆರಳಿದಳು.

ಆ ಎರಡು ದಿನಗಳೂ ಮಂತ್ರಿ ಪಂಡಿತಾರಾಧ್ಯನು ಆ ಸಂಗೀತ ನರ್ತನಗಳಿಗೆ ಬಂದಿರಲಿಲ್ಲ. ಸಿಂಗರಾರ್ಯನು ಈ ಮಲ್ಲಿಗೆಯನ್ನು ಮಂತ್ರಿಗೆ ಭೇಟಿ ಮಾಡಿಸಬೇಕೆಂದು ಪ್ರಯತ್ನಿಸಿದನು. ಮಂತ್ರಿಯು ರಾಜಕಾರ್ಯಗಳಲ್ಲಿ ಮುಳುಗಿದ್ದನು. ಆ ಅರಮನೆಯಲ್ಲಿ ಸಿಂಗರಾರ್ಯನ ಪ್ರಭಾವವು ಬಹಳವಾಗಿದ್ದಿತು. ವಿದ್ವಾಂಸರಲ್ಲಿಯೂ ಅವನ ಪ್ರಭಾವವು ಬಹಳವಾಗಿದ್ದಿತು. ರಾಜಕಾರಣಗಳಲ್ಲಿಯೂ ಅವನು ಬುದ್ಧಿವಂತ

ನೆನಿಸಿಕೊಂಡಿದ್ದನು. ಆದರೆ ವಿಷಯಾಸಕ್ತನೆಂಬ ದೂರು ಕೇಳಿ ಬರುತ್ತಿದ್ದಿತು.

ಪಂಡಿತಾರಾಧ್ಯನು ಹೊರಗೆ ಗೌರವವನ್ನು ವ್ಯಕ್ತಪಡಿಸುತ್ತಿದ್ದನು. ಮನದಲ್ಲಿ ಸಿಂಗರಾರ್ಯನ ವಿಷಯದಲ್ಲಿ ತಿರಸ್ಕಾರ ಭಾವವನ್ನಿಟ್ಟಿದ್ದನು. ಆದರೂ ದರಬಾರಿನ ಸಂಪ್ರದಾಯದಂತೆ ಮಂತ್ರಿಗಳ ಗೃಹದಲ್ಲಿ ಮಲ್ಲಿಗೆಗೆ ಭೇಟಿಯ ಏರ್ಪಾಡಾಗಿದ್ದಿತು. ಮಲ್ಲಿಗೆಯು ಫಲಪುಷ್ಪಗಳನ್ನು ತೆಗೆದುಕೊಂಡುಹೋಗಿ ಮಂತ್ರಿಯ ಭೇಟಿ ಮಾಡಿದಳು. ಸಿಂಗ ರಾರ್ಯನು ಅವಳ ಜೊತೆಯಲ್ಲಿಯೇ ಮಂತ್ರಿಗಳ ಮನೆಗೆ ಹೋಗಿದ್ದನು. ಮಲ್ಲಿಗೆಯನ್ನು ಮಂತ್ರಿಗೆ ಭೇಟಿಮಾಡಿಸಿ ಅವಳ ವೈದುಷ್ಯವನ್ನು ಬಣ್ಣಿಸಿ ಅರಮನೆಯಲ್ಲಿ ಅವಳಿಗೆ ದೊರೆತ ಅಸದೃಶ ಬಹುಮಾನಗಳನ್ನು ಮಂತ್ರಿಗೆ ನಿವೇದಿಸಿದನು.

ಮಂತ್ರಿಯು ಸಂತಸವನ್ನು ವ್ಯಕ್ತಪಡಿಸಿ "ಮಹಾರಾಜರು ಕಲಾಭಿಮಾನಿಗಳು. ಸ್ವಯಂ ಕಲಾವಿದರು. ವಿದುಷಿಗೆ ಕೊಟ್ಟ ಬಹುಮಾನಗಳೆಲ್ಲವೂ ಉಚಿತವಾಗಿವೆ. ಬಹಳ ಸಂತೋಷ." ಎಂದು ಉತ್ತರವಿತ್ತನು ಸಿಂಗರಾರ್ಯನು ಮಂತ್ರಿಗಳ ಸಮ್ಮು ಖದಲ್ಲಿ ಒಂದು ಸಂಗೀತಸಭೆಯನ್ನು ಏರ್ಪಡಿಸಲು ಅಪ್ಪಣೆ ಯನ್ನು ಬೇಡಿದನು. ಮಂತ್ರಿಯು ತಲೆದೂಗಿ, "ಆರ್ಯರೇ ! ನನಗೆ ಅವಕಾಶವೇ ಇಲ್ಲ. ಮನಸ್ಸು ಜಟಿಲವಾದ ರಾಜಕಾರ್ಯಗಳಲ್ಲಿ ಮುಳುಗಿದೆ. ಮತ್ತೊಮ್ಮೆ ಈ ವಿದುಷಿಯ ಸಂಗೀತವನ್ನು ಕೇಳಲು ಅವಕಾಶವನ್ನು ಮಾಡಿಕೊಳ್ಳುತ್ತೇನೆ" ಎಂದು ಹೇಳಿ ಉಪಚಾರೋಕ್ತಿ ಗಳಿಂದ ಗೌರವಿಸಿ ಕಳುಹಿಸಿಕೊಟ್ಟನು.

ಸಿಂಗರಾರ್ಯನ ಮನದಲ್ಲಿ ಸಮಾಧಾನವಾಗಲಿಲ್ಲ. 'ಮಂತ್ರಿಯು ಕಲಾವಿದನಲ್ಲ' ಎಂದುಕೊಂಡನು. ತನ್ನ ಗೌರವಕ್ಕಾದರೂ ಮಂತ್ರಿಯು ಸಂಗೀತಸಭೆಯನ್ನು ನಡೆಸಿ ಈ ವಿದುಷಿಗೆ ಗೌರವ ಮಾಡಬೇಕಾಗಿ ತ್ತೆಂದು ಸಿಂಗರಾರ್ಯನ ಅಭಿಪ್ರಾಯವಾಗಿದ್ದಿತು. ಮಂತ್ರಿಯು

ಮಾತನಾಡುವಾಗ ಈ ವಿದುಷಿಯು 'ಯಾವ ಊರಿನವಳು' ಎಂದು ಕೇಳಿದ್ದನು. 'ವೇಶ್ಯೆಯೇ?' ಎಂದು ಪ್ರಶ್ನೆಮಾಡಿದ್ದನು. ಈ ಮಾತು ಸಿಂಗರಾರ್ಯನ ಮನದಲ್ಲಿ ಕುಕ್ಕುತ್ತಿದ್ದಿತು 'ವೇಶ್ಯೆಯೇ ?' ಎಂಬ ಪ್ರಶ್ನೆಯು ಮಲ್ಲಿಗೆಯನ್ನು ಸಂಕೋಚಕ್ಕೆ ಗುರಿಮಾಡಿದ್ದಿತು. ಮಲ್ಲಿಗೆಯು ಸಿಂಗರಾರ್ಯನ ಮನೆಗೆ ಹಿಂತಿರುಗುತ್ತಲೇ ಸಿಂಗರಾರ್ಯನನ್ನು ಕುರಿತು " ಪಂಡಿತೋತ್ತಮರೇ ! ಮಂತ್ರಿಗಳ ವಿಷಯದಲ್ಲಿ ನಿಮ್ಮ ಅಭಿಪ್ರಾಯ ವೇನು ?" ಎಂದು ಕೇಳಿದಳು.

ಸಿಂಗರಾರ್ಯನು, " ಮಲ್ಲಿಗೆ, ಆರಾಧ್ಯನು ವಿದ್ವಾಂಸನೆಂಬುವು ದಕ್ಕೆ ಸಂದೇಹವೇ ಇಲ್ಲ. ಆದರೆ ರಸಿಕನಲ್ಲ. ಕಲಾಪ್ರೇಮಿಯಲ್ಲ. ಉದಾರಿಯೂ ಅಲ್ಲ " ಎಂದು ಉತ್ತರಕೊಟ್ಟನು.

ಮಲ್ಲಿಗೆಯು " ಮಹಾಶಯರೇ ! ನಮ್ಮ ಕುಲದ ವಿಷಯದಲ್ಲಿ ಮಂತ್ರಿಗಳಿಗೆ ಬಹಳ ತಿರಸ್ಕಾರವಿರಬಹುದು " ಎಂದು ಖಿನ್ನಳಾಗಿ ನುಡಿದಳು.

" ಹಾಗೆ ಹೇಳಲಾಗುವುದಿಲ್ಲ. ಮಂತ್ರಿಗೆ ಅಂತಹ ದುರ್ಭಾವನೆ ಗಳಿವೆಯೆಂದು ಹೇಳಲಾಗುವುದಿಲ್ಲ. ಅವನು ಕೇಳಿದ 'ವೇಶ್ಯೆಯೇ ?' ಎಂಬ ಮಾತು ಅಷ್ಟೇನೂ ಅರ್ಥಗರ್ಭಿತವಾದುದಲ್ಲ. ಮಂತ್ರಿಯು ಅನೇಕ ದೇಶ ದೇಶಾಂತರಗಳಲ್ಲಿ ಸಂಚರಿಸಿದ್ದಾನೆ. ಅನೇಕ ಸಮಾಜ ಪದ್ಧತಿಗಳನ್ನು ಅರಿತಿದ್ದಾನೆ. ಅವನ ಆಳವನ್ನು ಕಂಡುಹಿಡಿಯುವುದು ಕಷ್ಟ. ಹೇಗೆಯೇ ಆಗಲಿ ನಿನ್ನಂತಹ ವಿದುಷೀಮಣಿಯನ್ನೂ 'ವೇಶ್ಯೆಯೇ ?' ಎಂದು ಕೇಳಿದ್ದರಲ್ಲಿ ಅಷ್ಟು ಔಚಿತ್ಯವೇನೂ ಇಲ್ಲ" ಎಂದನು.

ಮಲ್ಲಿಗೆಯು ಖಿನ್ನವದನೆಯಾಗಿ " ಪಂಡಿತರೇ ! ಔಚಿತ್ಯ ಅನೌ ಚಿತ್ಯಗಳ ಮಾತಿನಿಂದೇನು ? ನಮ್ಮ ಕುಲವು ಕಳಂಕಿತವಾದುದು. ಅದನ್ನು ಒಪ್ಪಲೇಬೇಕು " ಎಂದು ನಿಟ್ಟುಸಿರು ಬಿಟ್ಟಳು.

ಪಂಡಿತನು, "ಮಲ್ಲಿಗೆ, ಈ ಸಮಾಜವು ಹುಟ್ಟಿದಂದಿನಿಂದ ನಿಮ್ಮ

ಕುಲವು ಇದ್ದೇ ಇದೆ. ದೇವಲೋಕದಲ್ಲಿ ರಂಭೆ ಊರ್ವಶಿಯರಿದ್ದಾರೆ. ಅಪ್ಸರೋಗಣವಿದೆ. ಈ ಭೂಲೋಕದಲ್ಲಿಯೂ ನಿಮಗೆ ಮನ್ನಣೆಯಿದೆ. ದೇವಾಯತನಗಳಲ್ಲಿಯೂ ನಿಮಗೆ ಸ್ಥಾನವಿದೆ. ವೇಶ್ಯೆಯರು ಎಂಬ ಹೆಸರನ್ನು ಪಾಮರ ಜನರು ನಿಮ್ಮ ಕುಲಕ್ಕೆ ಕಟ್ಟಿದ್ದಾರೆ. ವಿದ್ವಾಂಸರು ನಿಮ್ಮನ್ನು ದೇವಕನ್ಯೆಯರೆಂದು ಕರೆಯುತ್ತಾರೆ. ಕಲಾ ವೈದುಷ್ಯಗಳಿಂದ ನಿಮಗೆ ಪ್ರತಿಭೆಯಿದೆ. ದೇವರ ಸೇವೆಯಿಂದ ಪೂಜ್ಯತೆಯಿದೆ. ರಾಜಸಭೆಗಳಲ್ಲಿ ಚತುಶ್ಶಾಸ್ತ್ರಕೋವಿದರಿಗೆ ದೊರೆಯುವ ಮನ್ನಣೆಯು ನಿಮಗೆ ದೊರೆಯತಕ್ಕದ್ದೆಂದು ಮನುಮಾಂಧಾತರ ಕಾಲದಿಂದಲೂ ಸಂಪ್ರದಾಯವಿದೆ. ನೀನು ಅಂತಹ ವೈದುಷ್ಯವನ್ನೂ ಅದಕ್ಕೆ ತಕ್ಕ ಮರ್ಯಾದೆಗಳನ್ನೂ ಪಡೆದಿರುವೆ. ಹೀನಕುಲವೆಂದು ನೀನೇಕೆ ಖಿನ್ನಳಾಗುವೆ ?”

ಮಲ್ಲಿಗೆಯು “ಆರ್ಯರೇ ! ನಾನು ಖಿನ್ನಳಾಗಿಲ್ಲ. ವಿಚಾರಪರಳಾಗಿದ್ದೇನೆ. ವೇಶ್ಯೆಯೆಂದರೇನು ? ಅವರ ಧರ್ಮವಾವುದು ? ಎಂಬುದನ್ನು ವಿಚಾರ ಮಾಡುತ್ತಿದ್ದೇನೆ. ನಾನು ಸಾಯುವುದರೊಳಗೆ ಎಂದಾದರೊಂದು ದಿನ ಅದನ್ನರಿತುಕೊಂಡರೆ ನಾನು ಧನ್ಯಳಾಗುತ್ತೇನೆ” ಎಂದು ಹೇಳಿದಳು.

ಸಿಂಗರಾರ್ಯನಿಗೆ ಕೆಲವು ಚಿನ್ನದ ವರಹಗಳನ್ನು ಪೀತಾಂಬರವನ್ನು ಕಾಣಿಕೆಯಾಗಿಕೊಟ್ಟು ಅಲ್ಲಿಂದ ಮೈಸೂರಿಗೆ ಹಿಂತಿರುಗಿದಳು.

ಮೈಸೂರಿನಲ್ಲಿ ತನ್ನ ಜನ್ಮದಾತಳಾದ ಮಾತೆಗೆ ತನಗೆ ದೊರೆತ ರಾಜ ಮರ್ಯಾದೆಗಳೆಲ್ಲವನ್ನೂ ತೋರಿಸಿ ಶ್ರೀರಂಗಪಟ್ಟಣದಲ್ಲಿ ನಡೆದ ಸಂಗೀತ ಕಛೇರಿಗಳನ್ನೂ ಅಲ್ಲಿ ವಿದ್ವಾಂಸರೂ ಮಹಾರಾಜರೂ ತನ್ನ ವಿದ್ಯೆಯನ್ನು ಪ್ರಶಂಸಿಸಿದ ಪರಿಯನ್ನೂ ವಿವರಿಸಿದಳು. ಸಿಂಗರಾರ್ಯನ ಆದರಾತಿಥ್ಯಗಳನ್ನು ಹೊಗಳಿದಳು. ಮಲ್ಲಿಗೆಯ ತಾಯಿಯು “ಮಗೂ ಪಟ್ಟಣವು ನಿನಗಷ್ಟು ಸಂತೋಷಪ್ರದವಾಗಿದೆಯೇ ?” ಎಂದು ಕೇಳಿದಳು. ಮಲ್ಲಿಗೆಯು, “ಹೌದಮ್ಮಾ, ಪಟ್ಟಣವು ದೇವೇಂದ್ರನ ಲೋಕ

ದಂತೆ ನನಗೆ ತೋರುತ್ತಿತ್ತು. ಕಲಾಪ್ರೇಮಿಗಳಾದ ಮಹಾರಾಜರು, ಸರಳ ಸ್ವಭಾವದ ವಿದ್ವಾಂಸರುಗಳು ಆ ಪಟ್ಟಣದಲ್ಲಿರುವುದು ವಿದ್ಯಾವಂತರಿಗೊಂದು ಹೆಮ್ಮೆ. ಪಟ್ಟಣದಲ್ಲಿ ಐಶ್ವರ್ಯವು ತುಂಬಿ ತುಳುಕುತ್ತಿದೆ. ಶ್ರೀರಂಗನಾಥನ ಸಾನ್ನಿಧ್ಯ. ನನಗೆ ಅಲ್ಲಿಯೇ ಇದ್ದು ಬಿಡೋಣವೆನ್ನಿಸಿತಮ್ಮ"

"ನೋಡು ಮಗೂ! ನಮ್ಮ ಮನಸ್ಸನ್ನು ಗಟ್ಟಿಮಾಡಿಟ್ಟುಕೊಳ್ಳಬೇಕು. ನಮ್ಮ ಬುದ್ಧಿಯು ನಮ್ಮ ಕೈಯಲ್ಲಿರಬೇಕು. ನಾವು ಯಾವುದಕ್ಕೂ ಮೋಹಗೊಳ್ಳಬಾರದು, ದೂರದಲ್ಲಿದ್ದರೆ ಆಕರ್ಷಣೆಯಿದೆ. ಇದು ನಮ್ಮ ಕುಲಧರ್ಮ" ಎಂದು ಹೇಳಿದಳು.

ಮಲ್ಲಿಗೆಯು ನಿಟ್ಟುಸಿರುಬಿಟ್ಟಳು. "ಕುಲಧರ್ಮ-ಆಕರ್ಷಣೆ" ಎಂಬೆರಡು ಶಬ್ದಗಳನ್ನು ಅಸ್ಪಷ್ಟವಾಗಿ ನುಡಿದಳು. ತಾಯಿಯು, "ಮಗಳೇ! ನೀನೇಕೆ ಖಿನ್ನಳಾಗಿರುವೆ? ನಿನ್ನ ಅಮೋಘವಾದ ರೂಪಲಾವಣ್ಯಗಳು! ಅಸದೃಶವಾದ ಕಲಾ ನೈಪುಣ್ಯ! ವಿದ್ವತ್ಪ್ರಭೆ! ಇವುಗಳಿಂದ ಈ ರಾಜ್ಯವನ್ನೇ ಆಕರ್ಷಿಸಬಲ್ಲೆ ದೇವರ ದಯವಿದ್ದರೆ ಈ ರಾಜ್ಯವನ್ನೇ ನೀನು ಆಳಬಲ್ಲೆ. ಅದೇ ನನ್ನ ಬಸುರಿನ ಬಯಕೆ" ಎಂದು ಹೇಳಿದಳು.

ಮಲ್ಲಿಗೆಯು ಲಜ್ಜೆಯಿಂದ ತಲೆಬಾಗಿಸಿ ಮಾತೆಯ ಸಾನ್ನಿಧ್ಯವನ್ನು ಬಿಟ್ಟು ಹೊರಟುಹೋದಳು.

ಮಲ್ಲಿಗೆಯು ಮೈಸೂರಿಗೆ ಹಿಂತಿರುಗಿ ಬಂದ ದಿನ ಮಧ್ಯಾಹ್ನ ವಿಶ್ವೇಶ್ವರನು ಮಲ್ಲಿಗೆಯ ಮನೆಗೆ ಬಂದನು. ಮಲ್ಲಿಗೆಯು ಗುರುವನ್ನು ಆದರಿಸಿ ಆಸನದಮೇಲೆ ಕುಳ್ಳಿರಿಸಿ ಗುರುವಿಗೆ ಅಭಿವಾದನ ಮಾಡಿದಳು. ರಾಜಸಭೆಯಲ್ಲಿ ತನಗೆ ದೊರೆತ ವಜ್ರಕಂಕಣಗಳನ್ನೂ ಮುಕ್ತಾಹಾರಗಳನ್ನೂ ಪೀತಾಂಬರಗಳನ್ನೂ ತಟ್ಟೆಗಳಲ್ಲಿ ತಂದು ಗುರುವಿನ ಮುಂದಿಟ್ಟು, "ಗುರುಗಳೇ! ಇದೆಲ್ಲವನ್ನೂ ತಾವು ಸ್ವೀಕರಿಸಬೇಕು. 'ಇದು ತಾವಿತ್ತ ವಿದ್ಯಾದಾನಕ್ಕೆ ನಾನೊಪ್ಪಿಸಿರುವ ಗುರುದಕ್ಷಿಣೆ' ಎಂದು

ಸ್ವೀಕರಿಸಬೇಕು" ಎಂದು ಪ್ರಾರ್ಥನೆ ಮಾಡಿದಳು.

ವಿಶ್ವೇಶ್ವರನು ನಗುತ್ತಾ, "ಮಲ್ಲಿಗೆ, ನಿನ್ನ ವಿದ್ಯಾಭ್ಯಾಸವು ಪೂರೈಸಿ ಹೋಯಿತೇನು? ಈ ಗುರುದಕ್ಷಿಣೆಯನ್ನಿತ್ತು ನನ್ನನ್ನು ಕಳುಹಿಸಿಬಿಡುವೆಯೇನು?" ಎಂದು ಕೇಳಿದನು.

ಮಲ್ಲಿಗೆಯು "ಗುರುಗಳೇ! ವಿದ್ಯಾಭ್ಯಾಸವು ಪೂರೈಸಿತೆಂದು ನಾನು ಹೇಗೆ ಹೇಳಬಹುದು? ಪಂಡಿತರು ಹೇಳಬೇಕು. ಗುರುಗಳಾದ ತಾವು ಹೇಳಬೇಕು. ಇದು ಪ್ರಥಮ ದಕ್ಷಿಣೆ. ಇದೆಲ್ಲಾ ನನ್ನ ವಿದ್ಯೆಗೆ ದೊರತ ಬಹುಮಾನ. ಅದು ವಿದ್ಯಾಗುರುಗಳಾದ ತಮಗೆ ಸಲ್ಲತಕ್ಕದ್ದು" ಎಂದು ಹೇಳಿದಳು.

ವಿಶ್ವೇಶ್ವರನು "ಮಲ್ಲಿಗೆ ನನ್ನ ವಿದ್ಯವನ್ನು ನಾನು ಅಳೆದು ನೋಡಲೂ ಇಲ್ಲ. ಪರೀಕ್ಷೆಮಾಡಿಕೊಳ್ಳಲೂ ಇಲ್ಲ. ನನ್ನಲ್ಲಿರುವ ವಿದ್ಯಾಪ್ರತಿಭೆಗಳೆಲ್ಲಾ ದೇವರ ಅನುಗ್ರಹವೆಂದು ನಂಬಿದ್ದೇನೆ. ಅದನ್ನು ಮನಸಾರ ನಿನಗೆ ಕಲಿಸಿಕೊಟ್ಟಿದ್ದೇನೆ. ಇನ್ನೂ ಕಲಿಯುವುದು ಸ್ವಲ್ಪ ಉಳಿದಿರಬಹುದು ನನ್ನ ಪೂರ್ವೋತ್ತರಗಳನ್ನು ನೀನರಿಯೆ. ಯಾರೂ ಅರಿಯರು. ನನ್ನನ್ನು ವಿದ್ವಾಂಸನೆಂದು ಗೌರವಿಸುವವರು ಬಹಳ ಮಂದಿ ಇದ್ದಾರೆ ಭಿಕಾರಿಯೆಂದು ಅಲ್ಲಗಳೆಯುವವರೂ ಬಹುಮಂದಿ ಇದ್ದಾರೆ. ಹುಚ್ಚನಂತೆ ಅಲೆಯುವುದನ್ನು ನೋಡಿ ಹುಚ್ಚನೆಂದುಕೊಳ್ಳುವವರೂ ಇದ್ದಾರೆ. ಈ ವಸ್ತ್ರಾಭರಣಗಳಿಂದ ನನಗೇನು ಸುಖವಾದೀತು. ಇದನ್ನು ನಾನೆಲ್ಲಿಗೆ ತೆಗೆದುಕೊಂಡು ಹೋಗಲಿ. ಇವೆಲ್ಲವೂ ನಿನ್ನಲ್ಲಿಯೇ ಇರಲಿ. ನೀನು ನನ್ನವಳಾಗಿದ್ದರೆ ನಿನ್ನದೆಲ್ಲವೂ ನನಗಿದ್ದಂತೆಯೇ" ಎಂದು ಹೇಳಿದನು.

ಮಲ್ಲಿಗೆಯು "ಗುರುದೇವಾ! ತಾವು ಈ ಗುರುದಕ್ಷಿಣೆಯನ್ನು ಸ್ವೀಕರಿಸುವುದಿಲ್ಲವೇ? ನನ್ನ ಪ್ರಾರ್ಥನೆಯನ್ನು ತಿರಸ್ಕರಿಸುವಿರಾ?" ಎಂದು ದೈನ್ಯದಿಂದ ನುಡಿದಳು.

ವಿಶ್ವೇಶ್ವರನು "ಇಲ್ಲ! ನಾನು ನಿನ್ನನ್ನು ಎಂದಿಗೂ ತಿರಸ್ಕರಿಸುವು

ದಿಲ್ಲ. ಗುರುದಕ್ಷಿಣೆಯನ್ನು ಸ್ವೀಕರಿಸುತ್ತೇನೆ. ಆದರೆ ನನ್ನ ದಕ್ಷಿಣೆಯು ಬೇರೆ" ಎಂದನು.

ಮಲ್ಲಿಗೆಯು ಸ್ವಲ್ಪ ಗಾಬರಿಯಿಂದ "ಪೂಜ್ಯರೆ! ಅದೇನು ಹೇಳಿರಿ ನಾನು ತಂದೊಪ್ಪಿಸುವೆನು." ಎಂದು ಕೇಳಿದಳು.

ವಿಶ್ವೇಶ್ವರನು ನಕ್ಕು "ನಾನು ಕೇಳುವುದು ಗುರುದಕ್ಷಿಣೆಯಾಗುವು ದಿಲ್ಲ. ಅದು ಭಿಕ್ಷವಾಗುತ್ತದೆ. ನೀನೇ ಅದನ್ನು ತಿಳಿದುಕೊಳ್ಳಬೇಕು. ಎಂದು ನೀನು ನನ್ನ ಗುರುದಕ್ಷಿಣೆಯನ್ನು ತಿಳಿಯಬಲ್ಲೆಯೋ ಅಂದು ನಿನ್ನ ವಿದ್ಯವು ಪೂರ್ಣವಾಗುತ್ತದೆ." ಎಂದು ಹೇಳಿ ಹೊರಡಲು ಅನುವಾದನು. ಮಲ್ಲಿಗೆಯು ಮುಂಬಾಗಿಲಿನವರೆಗೆ ಬಂದು ವಿಶ್ವೇಶ್ವರ ನನ್ನು ಕಳುಹಿಸಿಕೊಟ್ಟಳು.

ಮಲ್ಲಿಗೆಯು ಮೈಸೂರಿಗೆ ಹಿಂತಿರುಗಿ ಬಂದಾಗಿನಿಂದಲೂ ಅನೇ ಕರು ಅವಳ ಮನೆಗೆ ಬಂದು ಭೇಟಿ ಕೊಡುತ್ತಿದ್ದರು. ಸಂಗೀತ ವಿದ್ವಾಂಸರು, ನಟ ವಿಟ ಗಾಯಕರು ಬಂದು ಮಲ್ಲಿಗೆಯನ್ನು ಪ್ರಶಂಸೆ ಮಾಡಿ ಹೋಗುತ್ತಿದ್ದರು. ಆ ಊರಿನಲ್ಲಿದ್ದ ಅನೇಕ ಮಂದಿ ವೇಶ್ಯೆಯರು ಬಂದು ಮಲ್ಲಿಗೆಯ ಭೇಟಿ ಮಾಡಿ ಅವಳಿಗೆ ದೊರೆತ ರಾಜಮರ್ಯಾದೆ ಗಳನ್ನು ನೋಡಿ ಸಂತೋಷಗೊಂಡು ಪುಷ್ಪ ತಾಂಬೂಲಗಳನ್ನು ಹಣ್ಣು ಹಂಪಲುಗಳನ್ನು ಸ್ವೀಕರಿಸಿ ಹಿಂತಿರುಗುತ್ತಿದ್ದರು. ಸುಮಾರು ಒಂದು ವಾರ ಕಾಲ ಈ ಸಡಗರಗಳು ನಡೆಯುತ್ತಲೇ ಇದ್ದವು. ಪ್ರಶಂಸೆಗಳ ಮಳೆಗರೆಯುತ್ತಿದ್ದಿತು

ಮಲ್ಲಿಗೆಯು ರಾಜಧಾನಿಗೆ ಹೋಗಿ ಹಿಂತಿರುಗಿದ ಮೇಲೆ ವಿಶ್ವೇಶ್ವರನು ಅವಳ ಸ್ವಭಾವದಲ್ಲಿ ಯಾವುದೋ ಒಂದು ವ್ಯತ್ಯಾಸವನ್ನು ಕಾಣಲಾರಂಭಿಸಿದನು. 'ಮಲ್ಲಿಗೆಗೆ ತನ್ನಲ್ಲಿ ಆದರ ಗೌರವಗಳಿಲ್ಲದಿದ್ದರೆ ತಾನೇಕೆ ಇಲ್ಲಿರಬೇಕು?' ಎಂದುಕೊಳ್ಳುತ್ತಿದ್ದನು ಮಲ್ಲಿಗೆಯ ಮನಸ್ಸಿನಲ್ಲಿಯೂ ವಿಕಲ್ಪವು ಆರಂಭವಾಗಿದ್ದಿತು. ಸಾಧಾರಣವಾಗಿ ಸಂಗೀತವಿದ್ಯೆಯನ್ನು ಕಲಿತವರು ರಾಜರ ಆಸ್ಥಾನದಲ್ಲಿ ಮನ್ನಣೆಯನ್ನು ಪಡೆದರೆ ಆ ಮರ್ಯಾದೆಗಳನ್ನು ವಿದ್ಯಾಗುರುಗಳಿಗೆ ಗುರುದಕ್ಷಿಣೆಯಾಗಿ ಒಪ್ಪಿಸುವ ವಾಡಿಕೆ. ವಿಶ್ವೇಶ್ವರನಿಗೆ ಈ ಅಮೂಲ್ಯಾಭರಣಗಳು ಬೆಲೆಯಿಲ್ಲವೆಂದು ದೃಢವಾಗಿತ್ತು. ಆದರೆ ಎಲ್ಲೆಲ್ಲಿಯೂ ಈ ಮಾತು ಗಳು ನಡೆಯುತ್ತಿದ್ದವು. ಅನೇಕರು ವಿಶ್ವೇಶ್ವರನನ್ನು ಪ್ರತ್ಯಕ್ಷವಾಗಿಯೇ ಕೇಳಲು ಆರಂಭಿಸಿದರು. ವಿಶ್ವೇಶ್ವರನು ಹುಚ್ಚನಂತೆ ನಕ್ಕು 'ನವರತ್ನ ಖಚಿತವಾದ ತೋಡಾಮುಕ್ತಾಹಾರಗಳನ್ನು ಹಾಕಿಕೊಂಡು ನಾನೆಲ್ಲಿಗೆ ಹೋಗಬೇಕು? ಯಾವ ಸಭೆಯಲ್ಲಿಯೂ ನಾನು ನನ್ನ ಹಾಡುಗಾರಿಕೆ ಯನ್ನು ನಡೆಸುವುದೇ ಇಲ್ಲ. ನನಗೇಕೆ ಆಭರಣಗಳು?' ಎಂದು ಹೇಳುತ್ತಿದ್ದನು.

ಈ ಸಮಾಚಾರವು ರಾಜಧಾನಿಯಲ್ಲಿ ಅಲ್ಲಲ್ಲಿ ಹರಡಿ ರಾಜರ ಕಿವಿಗೂ ಬಿದ್ದಿದ್ದಿತು. ರಾಜರು ಸಂಗೀತ ಪ್ರಿಯರಾಗಿದ್ದರು. ಅವರು ವಿಶ್ವೇಶ್ವರನ ಪಾಂಡಿತ್ಯವೆಂತಹುದೋ ನೋಡಬೇಕೆಂದು ಕುತೂಹಲಿ ಗಳಾದರು. ಒಂದುದಿನ ಆಸ್ಥಾನದ ಸಂಗೀತ ವಿದ್ವಾಂಸರೊಡನೆ ತಮ್ಮ ಅಭಿಪ್ರಾಯವನ್ನು ಸೂಚಿಸಿದರು. ಸಿಂಗರಾರ್ಯನೇ ಮೈಸೂರಿಗೆ ಬಂದು ಮಲ್ಲಿಗೆಯನ್ನು ಕಂಡು 'ರಾಜರ ಕೃಪಾದೃಷ್ಟಿಯು ನಿನ್ನ ಮೇಲೆಯೂ ನಿನ್ನ ಗುರುವಾದ ವಿಶ್ವೇಶ್ವರನ ಮೇಲೆಯೂ ಬಿದ್ದಿದೆ' ಎಂದು ತಿಳಿಸಿದರು.

ವಿಶ್ವೇಶ್ವರನು ಪ್ರತಿದಿನವೂ ಮಲ್ಲಿಗೆಯ ಮನೆಗೆ ಬರುತ್ತಿದ್ದನು. ಮಲ್ಲಿಗೆಯು ಅತ್ಯಾದರದಿಂದ ಸಿಂಗರಾರ್ಯನಿಗೆ ಗುರುವಿನ ಪರಿಚಯ ಮಾಡಿಸಿಕೊಟ್ಟಳು. ಸಿಂಗರಾರ್ಯನು ಮಾತಿನಲ್ಲಿ ಬಲುಚತುರ. ಅವನು ವಿಶ್ವೇಶ್ವರನೊಡನೆ ಸಂಭಾಷಣೆ ಮಾಡಿದನು. ಅನೇಕ ದೇಶಗಳಿಂದ ಪಟ್ಟಣಕ್ಕೆ ಸಂಗೀತ ವಿದ್ವಾಂಸರು ಬಂದು ಮರ್ಯಾದೆ ಯನ್ನು ಪಡೆದ ಕಥೆಗಳನ್ನು ಹೇಳಿದನು. ಆಂಧ್ರದೇಶದ ವೆಂಕಟರಮ ಣಾವಧಾನಿಗಳ ವೀಣಾವಾದನ ನೈಪುಣ್ಯವನ್ನು ಬಣ್ಣಿಸಿದನು. ಆ ಕಾಲದಲ್ಲಿ ವೆಂಕಟರಮಣಾವಧಾನಿಗಳು ವೀಣೆಯಲ್ಲಿ ಗಾಯತ್ರಿಯನ್ನು ನುಡಿಸಿದಾಗ ಅವರಿಗೆ ಗಾಯತ್ರಿಯ ಪ್ರತ್ಯಕ್ಷವಾಗುತ್ತಿತ್ತೆಂದು ಪ್ರತೀತಿ ಯಿದ್ದಿತು. ಮಧುರೆಯ ಶರಭಶಾಸ್ತ್ರಿಯ ಅಮೋಘ ಸಂಗೀತದ ಪ್ರಾವೀಣ್ಯವನ್ನು ಸಿಂಗರಾರ್ಯನು ಬಣ್ಣಿಸಿದನು. ಪ್ರಸ್ತಾಪತ್ವೇನ ಮಲ್ಲಿಗೆಯ ಸಂಗೀತ ನೈಪುಣ್ಯವನ್ನೂ ಸ್ತುತಿಸಿ, ಮಹಾರಾಜರ ಮೆಚ್ಚುಗೆ ಯನ್ನು ಬಣ್ಣಿಸಿದನು. ವಿಶ್ವೇಶ್ವರನನ್ನು ಕುರಿತು "ವಿದ್ವಾಂಸರೇ! ನಿಮ್ಮ ಶಿಷ್ಯಳು ಇಷ್ಟೊಂದು ಹೆಸರುವಾಸಿಯನ್ನು ಪಡೆದಿರುವಾಗ ತಾವು ಆಸ್ಥಾನಕ್ಕೆ ಬಂದು ತಮ್ಮ ಗಾನಾಮೃತದಿಂದ ನಮ್ಮೆಲ್ಲರಿಗೂ ಆನಂದ ವನ್ನುಂಟುಮಾಡಿ ಮಹಾರಾಜರ ಮೆಚ್ಚುಗೆಯನ್ನು ಪಡೆಯಬೇಕೆಂದು ನಮ್ಮಗಳ ಆಶೆಯಿದೆ." ಎಂದು ಹೇಳಿದನು.

ವಿಶ್ವೇಶ್ವರನು ಶಾಂತನಾಗಿ "ಸಿಂಗರಾರ್ಯರೇ! ಗಾನಬ್ರಹ್ಮ ಶರಭಶಾಸ್ತ್ರಿಗಳ ಮಗನೇ ನಾನು. ನಾನು ಈ ಶಾಸ್ತ್ರವನ್ನು ಕಲಿತವನಲ್ಲ. ನಮ್ಮ ತಂದೆಯವರ ತಪಸ್ಸಿನಿಂದ ಸರಸ್ವತಿಯು ನನಗೆ ಈ ವಿದ್ಯವನ್ನು ಕರುಣಿಸಿದ್ದಾಳೆ. ನಾನು ಸಂಸಾರದಲ್ಲಿ ವಿರಕ್ತನಾಗಿ ಈ ಲೋಕದಲ್ಲಿ ಅಲೆಯುತ್ತಿದ್ದೇನೆ. ಕಲಿತ ವಿದ್ಯೆಯನ್ನು ಯಾರಿಗಾದರೂ ದಾನ ಮಾಡಲೇಬೇಕು. ಇಲ್ಲದಿದ್ದರೆ, ಗುರುವಿನ ಋಣವು ತೀರುವುದಿಲ್ಲ. ಅದಕ್ಕೆ ಸರಿಯಾಗಿ ಈ ಶಿಷ್ಯಳು ದೊರೆತಿದ್ದಾಳೆ. ಇವಳಿಗೆ ಯಾವ ಮುಚ್ಚುಮರೆಯೂ ಇಲ್ಲದೆ ನನ್ನ ವಿದ್ಯವನ್ನೆಲ್ಲಾ ಕಲಿಸಿದ್ದೇನೆ.

ಅವಳು ನಿಮ್ಮಂತಹ ವಿದ್ವಾಂಸರನ್ನೂ ಮಹಾರಾಜರನ್ನೂ ಮೆಚ್ಚಿಸಿದ ಮೇಲೆ ನನಗೆ ಮೆಚ್ಚುಗೆಯು ಬಂದಂತೆಯೇ ಆಯಿತು" ಎಂದು ಹೇಳಿದನು.

ಸಿಂಗರಾರ್ಯನಿಗೆ ಈ ವಿಶ್ವೇಶ್ವರನ ಹಾಡುಗಾರಿಕೆಯನ್ನು ಕೇಳಬೇಕೆಂದು ಆಶೆಯು ಹುಟ್ಟಿತು. ಅವನು ಮತ್ತೆ ಮತ್ತೆ ಪ್ರಾರ್ಥನೆ ಮಾಡಿದನು. ಅಂದು ಸಂಧ್ಯಾಕಾಲದಲ್ಲಿ ಮಲ್ಲಿಗೆಯ ಮನೆಯಲ್ಲಿಯೇ ಎರಡು ಚರಣಗಳನ್ನು ಹಾಡುವುದಾಗಿ ವಿಶ್ವೇಶ್ವರನು ಮಾತುಕೊಟ್ಟನು. ಸಂಧ್ಯಾಕಾಲ ಮಲ್ಲಿಗೆಯ ಮನೆಯ ಹಜಾರದಲ್ಲಿ ಸಂಗೀತ ಕಛೇರಿಗೆ ಎಲ್ಲವೂ ಸಿದ್ಧವಾಗಿದ್ದಿತು. ಮೈಸೂರಿನಲ್ಲಿ ಘಟಾನುಘಟಿಗಳೆನ್ನಿಸಿಕೊಂಡಿದ್ದ ಮೃದಂಗದ ಶಾಮಣ್ಣ, ತಂಬೂರಿಯ ನಾರಣಪ್ಪ ಇವರೆಲ್ಲರೂ ಬಂದು ತಮ್ಮ ತಮ್ಮ ವಾದ್ಯಗಳನ್ನು ಸರಿಪಡಿಸಿಕೊಳ್ಳುತ್ತಿದ್ದರು. ಹಜಾರದಲ್ಲಿ ಅನೇಕ ವಿದ್ವಾಂಸರು ಬಂದು ಕುಳಿತಿದ್ದರು ಸಿಂಗರಾರ್ಯನು ಲೋಡು ದಿಂಬುಗಳ ಮೇಲೆ ಸುಖಾಸೀನನಾಗಿದ್ದನು. ಸುಗಂಧದ ಹೊಗೆಯು ಹಜಾರವನ್ನೆಲ್ಲಾ ಘಮಘಮಿಸುವಂತೆ ಮಾಡಿದ್ದಿತು. ವಿಶ್ವೇಶ್ವರನು ಎಲ್ಲಿಂದಲೋ ಬಂದನು. ಮನೆಯೊಳಗೆ ಹೋಗಿ ಕೈಕಾಲುಗಳನ್ನು ತೊಳೆದುಕೊಂಡು ವಿಭೂತಿಯನ್ನು ಧರಿಸಿ ಸದರಿಗೆ ಬಂದು ಕುಳಿತುಕೊಂಡನು. ಮಲ್ಲಿಗೆಯು ದುಕೂಲವನ್ನುಟ್ಟು ರತ್ನಾಭರಣಗಳನ್ನು ಧರಿಸಿಕೊಂಡು ಒಳಗಿನಿಂದ ತಂಬೂರಿಯನ್ನು ತಂದು ವಿಶ್ವೇಶ್ವರನ ಕೈಗೆ ಕೊಟ್ಟಳು. ತಾನೂ ಒಂದು ತಂಬೂರಿಯನ್ನು ತಂದು ವಿಶ್ವೇಶ್ವರನ ಹಿಂದೆ ಕುಳಿತು ಶೃತಿಯನ್ನು ಹದಗೊಳಿಸಿದಳು. ವಿಶ್ವೇಶ್ವರನು ತನ್ನ ಮುಂದಿಟ್ಟಿದ್ದ ತಂಬೂರಿಯನ್ನು ಕಣ್ಣಿಗೊತ್ತಿಕೊಂಡು ಸಭಿಕರಿಗೆ ಕೈಜೋಡಿಸಿ ತಂಬೂರಿಯ ತಂತಿಗಳನ್ನು ಧ್ವನಿಗೈಯ್ದನು. ಪಕ್ಕವಾದ್ಯದವರು ತಾಳವನ್ನು ಸೂಚಿಸಿದರು. ವಿಶ್ವೇಶ್ವರನ ಹಾಡುಗಾರಿಕೆಯು ಆರಂಭವಾಯಿತು. ಸಭಿಕರೆಲ್ಲರೂ ಚಿತ್ರಪ್ರತಿಮೆಗಳಂತೆ ಕೇಳುತ್ತ ಕುಳಿತಿದ್ದರು. ಸುಮಾರು ಒಂದು

ಗಂಟೆಯ ಹೊತ್ತು ವಿಶ್ವೇಶ್ವರನು ಹಾಡಿರಬಹುದು. ಅವನ ಕಂಠಧ್ವನಿ, ರಾಗಾಲಾಪನೆ, ಪಲ್ಲವಿ, ಆವರ್ತಗಳು ಇವೆಲ್ಲವನ್ನೂ ಕೇಳಿ ವಿದ್ವಾಂಸರು ಬೆರಗಾಗಿಹೋಗಿದ್ದರು. ಕಾಲತ್ರಯದಲ್ಲಿಯೂ ಅನಿರ್ವಚನೀಯ ರಾಗಬಂಧವಿದ್ದಿತು. ತಾಳಗಳಲ್ಲಿ ವಿಚಿತ್ರವಾದ ಧೃತಿಯಿದ್ದಿತು. ಗಾನದೇವತೆಯ ಕಳೆಗಳನ್ನು ವಾಯುಮಂಡಲದಿಂದ ಆಕರ್ಶಿಸಿ ಭೂಮಿಯಮೇಲೆ ಹೊಡೆದು ಆಕಾಶದಲ್ಲಿ ಮೂರ್ತಿಮತ್ತಾಗಿ ದರ್ಶನ ಮಾಡಿಸುತ್ತಿರುವ ಅಮೋಘ ಚಮತ್ಕಾರವನ್ನು ವಿದ್ವಾಂಸರು ಕಾಣು ತ್ತಿದ್ದರು. ವಿಶ್ವೇಶ್ವರನು ಕಛೇರಿಯನ್ನು ಪೂರೈಸಿ ತಂಬೂರಿಯನ್ನು ಸದರಿನಮೇಲೆ ಇಟ್ಟನು. ಮಲ್ಲಿಗೆಯು ಒಳಗೆ ತಟ್ಟೆಯಲ್ಲಿ ಸಿದ್ಧಮಾಡಿಟ್ಟಿದ್ದ ಮುಕ್ತಾಹಾರ ರತ್ನಕಂಕಣಗಳನ್ನು ತಂದು ಗುರುವಿನ ಮುಂದಿಟ್ಟು ನಮಸ್ಕರಿಸಿದಳು. ಇದು ರಾಜಮರ್ಯಾದೆಯೆಂದೂ ಗುರುದಕ್ಷಿಣೆಯಾಗಿ ಸ್ವೀಕರಿಸಬೇಕೆಂದೂ ಸಭೆಯಲ್ಲಿ ಪ್ರಾರ್ಥನೆ ಮಾಡಿದಳು. ಗುರುಗಳು ಆ ಮುಕ್ತಾಹಾರವನ್ನು ತೆಗೆದು ತಂಬೂರಿಗೆ ಅಲಂಕರಿಸಿದರು. ರತ್ನಕಂಕಣವನ್ನು ಮಲ್ಲಿಗೆಗೇ ಕೊಟ್ಟು 'ಇದು ಸ್ತ್ರೀಯರಿಗೆ ಕೊಡುವ ಪುರಸ್ಕಾರ' ಎಂದು ಹೇಳಿದನು. ಸಿಂಗರಾರ್ಯನು ವಿಶ್ವೇಶ್ವರನ ಪಾಂಡಿತ್ಯವನ್ನು ಕೊಂಡಾಡಿದನು. ಶರಭಶಾಸ್ತ್ರಿಗಳೇ ಇಂದು ಪ್ರತ್ಯಕ್ಷವಾಗಿ ಬಂದು ಹಾಡಿದಂತಾಯಿತೆಂದು ಬಣ್ಣಿಸಿದನು. ರಾಜಾಸ್ಥಾನಕ್ಕೆ ಬರಬೇಕೆಂದು ವಿಶ್ವೇಶ್ವರನನ್ನು ಪುನಃ ಪ್ರಾರ್ಥಿಸಿದನು. ವಿಶ್ವೇಶ್ವರನು ವಿನಯಭಾವದಿಂದಲೇ ನಿರಾಕರಣೆಯನ್ನು ವ್ಯಕ್ತಪಡಿಸಿದನು. ಸಿಂಗರಾರ್ಯನಿಗೆ ತಾಂಬೂಲ ಪುಷ್ಪಮಾಲಿಕೆಗಳನ್ನು ಮಲ್ಲಿಗೆಯು ಅರ್ಪಿಸಿದಳು. ಪುಷ್ಪತಾಂಬೂಲಗಳನ್ನು ವಿದ್ವಾಂಸರೆಲ್ಲರಿಗೂ ಸಮರ್ಪಿಸಿದಳು. ಸಭಿಕರೆಲ್ಲರೂ ಬೀಳ್ಕೊಂಡು ಹೊರಟರು. ವಿಶ್ವೇಶ್ವರನು ಆ ಹಜಾರದಲ್ಲಿಯೇ ಒಬ್ಬಿಬ್ಬರು ಸಂಗೀತ ವಿದ್ವಾಂಸರೊಂದಿಗೆ ಮಾತನಾಡುತ್ತಾ ಕುಳಿತಿದ್ದನು. ಅವರೆಲ್ಲರೂ ವಿಶ್ವೇಶ್ವರನ ಅಪ್ಪಣೆಯನ್ನು ಪಡೆದು ಮಲ್ಲಿಗೆಯನ್ನು ಹರಸಿ ಹೊರಟುಹೋದರು.

ಆ ಹಜಾರವು ನಿರ್ಮಾನುಷ್ಯವಾದ ಮೇಲೆ ಮಲ್ಲಿಗೆಯು ಗುರುವಿನಲ್ಲಿ ತನ್ನ ಖಿನ್ನಭಾವವನ್ನು ವ್ಯಕ್ತಪಡಿಸಿದಳು. ವಿಶ್ವೇಶ್ವರನೂ ಮಲ್ಲಿಗೆಯೂ ಪರಸ್ಪರ ಸಂಭಾಷಣೆ ಮಾಡುತ್ತಾ ಮೇಲುಪ್ಪರಿಗೆಯ ಮೇಲೆ ಹೋದರು. ಅಲ್ಲಿ ಬಿಸಿಲುಮಹಡಿಯಮೇಲೆ ಅವರಿಬ್ಬರೂ ನಿಂತು ಮಾತನಾಡತೊಡಗಿದರು. ತಂಗಾಳಿಯು ಬೀಸುತ್ತಿದ್ದಿತು. ಚಂದ್ರಿಕೆಯು ಹಾಲಿನಂತೆ ಚೆಲ್ಲಿದ್ದಿತು. ವಿಶ್ವೇಶ್ವರನು ತಲೆಯೆತ್ತಿ ನೋಡಿದನು. ಆಕಾಶದಲ್ಲಿ ವಿರಾಜಿಸುತ್ತಿರುವ ಚಂದ್ರಮನನ್ನು ನೋಡಿದನು. ಮತ್ತೊಮ್ಮೆ ಮಲ್ಲಿಗೆಯ ಮುಖವನ್ನು ನೋಡಿದನು. ಪುನಃ ಚಂದ್ರನನ್ನು ನೋಡಿ ಮಲ್ಲಿಗೆಯ ಮುಖವನ್ನು ದಿಟ್ಟಿಸಿನೋಡಿದನು. "ಮಲ್ಲಿಗೆ, ಕವಿಗಳು ನಿನ್ನಂತಹ ಸ್ತ್ರೀಯರನ್ನು ಬಣ್ಣಿಸುವಾಗ ಈ ಚಂದ್ರನನ್ನು ಮುಖಕ್ಕೆ ಹೋಲಿಸುತ್ತಾರೆ. ನಾನು ಅದೇ ಹೋಲಿಕೆಯನ್ನು ಹೋಲಿಸಿ ನೋಡಿದೆ. ನಿನ್ನ ಹಣೆಯಮೇಲಿರುವ ಮುಂಗೂದಲುಗಳು ಆ ಚಂದ್ರನಿಗೆಲ್ಲಿದೆ? ನಿನ್ನ ವಿಶಾಲನೇತ್ರಗಳು ಆ ಚಂದ್ರನಿಗೆ ಎಲ್ಲಿವೆ? ಈ ಅಧರಗಳ ರಕ್ತಿಮೆಯು ಚಂದ್ರನಲ್ಲೆಲ್ಲಿದೆ? ಈ ಕಪೋಲಗಳ ಧಾಳಧಳ್ಯವು ಆ ಚಂದ್ರನಲ್ಲಿದ್ದರೂ ಈ ರಕ್ತಿಮೆಯು ಚಂದ್ರನಲ್ಲೆಲ್ಲಿದೆ? ಚಂದ್ರನಲ್ಲಿ ಕಳಂಕವು ಪ್ರತ್ಯಕ್ಷವಾಗಿದೆ ನಾನು ಕವಿಯಾದರೆ ನಿನ್ನ ಅಕಳಂಕವದನವನ್ನು ಹೇಗೆ ಬಣ್ಣಿಸಬೇಕೆಂದು ,ಚಿಂತಿಸುತ್ತಿದ್ದೇನೆ" ಎಂದು ಹೇಳಿದನು.

ಮಲ್ಲಿಗೆಯು ನಾಚಿಕೆಯಿಂದ ತಲೆಬಾಗಿ ವಿಶ್ವೇಶ್ವರನ ಎರಡು ಕೈಗಳನ್ನೂ ಹಿಡಿದುಕೊಂಡು "ಗುರುದೇವಾ! ತಮ್ಮಲ್ಲಿ ಏನೋ ಒಂದು ರಹಸ್ಯವಿದೆ. ನೀವು ನನ್ನ ಗುರುದಕ್ಷಿಣೆಯನ್ನು ಏಕೆ ಸ್ವೀಕರಿಸಲಿಲ್ಲ. ಮಹಾರಾಜರ ಆಹ್ವಾನವನ್ನೇಕೆ ಮನ್ನಿಸಲಿಲ್ಲ. ನಿಜವನ್ನು ಹೇಳಬೇಕು" ಎಂದು ಕೇಳಿದಳು. ವಿಶ್ವೇಶ್ವರನು ಮಲ್ಲಿಗೆಯ ಬೆನ್ನು ಸವರುತ್ತಾ, "ಮಲ್ಲಿಗೆ ಅದರಲ್ಲಿ ರಹಸ್ಯವೇನೂ ಇಲ್ಲ. ನೀನೇ ಅದನ್ನು ಅರಿತುಕೊಳ್ಳುವೆಯೆಂದು ಆಶೆಯನ್ನಿಟ್ಟುಕೊಂಡಿದ್ದೆ. ನನ್ನ ಗುರು

ದಕ್ಷಿಣೆಯು ಅಮೂಲ್ಯವಾದುದು. ನಾನು ನಿನ್ನ ಪ್ರೇಮವನ್ನು ಗುರುದಕ್ಷಿಣೆಯಾಗಿ ಪ್ರಾರ್ಥಿಸುತ್ತೇನೆ. ಆ ಪ್ರಾರ್ಥನೆಯು ಸಫಲವಾಗದಿರುವಾಗ ರಾಜರ ಆಹ್ವಾನವು ನನಗೆ ನೀರಸವಾದುದು. ನಿನ್ನಿಂದಲೇ ಪುರಸ್ಕೃತನಾಗದ ನಾನು ರಾಜರ ಪುರಸ್ಕಾರಕ್ಕೆ ಭ್ರಾಂತನಾಗುವುದು ಹೇಗೆ ? ನೀನು ನನ್ನ ಪ್ರೇಮಭಿಕ್ಷೆಯನ್ನು ಇಂದಾದರೂ ನೀಡುವೆಯಾ ? ಹೇಳು !" ಎಂದು ಕೇಳುತ್ತಾ ಮಲ್ಲಿಗೆಯ ಗಲ್ಲವನ್ನು ಹಿಡಿದೆತ್ತಿ ಚುಂಬಿಸಿದನು ಮಲ್ಲಿಗೆಯ ಅಧರಗಳು ನಡುಗುತ್ತಿದ್ದವು. ಕಣ್ಣಿನಲ್ಲಿ ಕಂಬನಿಯು ಧಾರೆಯಾಗಿದ್ದಿತು. ಅಸ್ಪಷ್ಟ ತೊದಲು ನುಡಿಗಳಿಂದ "ಗುರುದೇವಾ ! ನಾನು ನಿನ್ನ ದರ್ಶನವಾದಂದಿನಿಂದ ಪಿತೃಭಾವನೆಯನ್ನು ಇಟ್ಟಿದ್ದೇನೆ. ಆ ವಾತ್ಸಲ್ಯಕ್ಕಿಂತಲೂ ಪ್ರೇಮವು ಮಿಗಿಲಾದುದೆಂದು ನಾನೆಂದೂ ಭಾವಿಸಲೇ ಇಲ್ಲ ಅರ್ಜುನನು ಉತ್ತರೆಯನ್ನು ಹೇಗೆ ಕಂಡನೋ ಹಾಗೆ ತಮ್ಮ ಮನದಲ್ಲಿ ವಾತ್ಸಲ್ಯವಿಲ್ಲವೇ ?" ಎಂದಳು. ವಿಶ್ವೇಶ್ವರನು ಮಲ್ಲಿಗೆಯನ್ನು ಭರದಿಂದ ಬಾಚಿ ತಬ್ಬಿಕೊಂಡು ಸಮೀಪದಲ್ಲಿದ್ದ ಶ್ವೇತ ಶಿಲಾಫಲಕದಮೇಲೆ ಕುಳಿತುಕೊಂಡು ಮಲ್ಲಿಗೆಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು, "ಪ್ರಿಯೆ ! ಮಲ್ಲಿಗೆ ! ನಮ್ಮ ಆರಾಧ್ಯದೇವನಾದ ಪರಮೇಶ್ವರನು ಪಾರ್ವತಿಗೆ ಲಾಸ್ಯನೃತ್ಯವನ್ನು ಕಲಿಸಿದ ಗುರುವಲ್ಲವೇ ? ಬ್ರಹ್ಮದೇವನು ಸರಸ್ವತಿಯ ವಿದ್ಯವನ್ನು ಅನುಗ್ರಹಿಸಿದ ಗುರುವಲ್ಲವೆ ? ಶ್ರೀಮನ್ನಾರಾಯಣನ ತಪಃಪ್ರಭಾವದಿಂದಲೇ ಮಹಾಲಕ್ಷ್ಮಿಯು ಕ್ಷೀರಸಾಗರದಲ್ಲಿ ಉದ್ಭವಿಸಲಿಲ್ಲವೇ ? ಗುರುಶಿಷ್ಯರು ಪ್ರೇಮಬಂಧನದಿಂದ ಪರಿಸಬಾರದೆಂದು ನಿನಗೆ ಕಲಿಸಿಕೊಟ್ಟವರಾರು ? ನಮ್ಮಿಬ್ಬರ ಪ್ರೇಮಬಂಧನಕ್ಕೆ ಯಾವ ಶಾಸ್ತ್ರಗಳೂ ಅಡ್ಡಿಬಾರವು ಆ ಅಡ್ಡಿಯಿದ್ದರೆ, ನಾನು ಶಾಸ್ತ್ರಗಳನ್ನು ಪರಿತ್ಯಜಿಸುತ್ತೇನೆ. ಗಾನಬ್ರಹ್ಮವೊಂದೇ ನನ್ನ ಪರಮದೈವ, ಆ ಗಾನಬ್ರಹ್ಮದ ಸಾಕಾರಮೂರ್ತಿ ನೀನು ! ಇವೆರಡೇ ಈ ಜನ್ಮದಲ್ಲಿ ಪ್ರಿಯವಸ್ತುಗಳು ಎಂದು ಹೇಳಿ ಮಲ್ಲಿಗೆಯನ್ನು ಆಲಿಂಗಿಸಿ ಚುಂಬಿಸಿದನು. ಮಲ್ಲಿಗೆಯ

ಮನದಲ್ಲಿ ಪ್ರೇಮಾಂಕುರವು ಉದಯಿಸಲೇ ಇಲ್ಲ. ಆದರೆ ವಿಶ್ವೇಶ್ವರನ ಮಾಯೆಯಲ್ಲಿ ಅವಳು ಕೀಲುಗೊಂಬೆಯಂತೆ ವಿಶ್ವೇಶ್ವರನ ಹೃದಯ ವನ್ನು ಅಲಂಕರಿಸಿದಳು. ವಿಶ್ವೇಶ್ವರನ ಬಹುದಿನಗಳ ಬಯಕೆಯು ಪೂರ್ಣವಾಯಿತೋ ಇಲ್ಲವೋ ಹೇಳಲಾಗುವುದಿಲ್ಲ. ಆದರೆ ಅವನು ಅಂದು ಮಲ್ಲಿಗೆಯನ್ನು ಜಯಿಸಿದನು. ಕೃತಾರ್ಥನಾದೆನೆಂದು ಕೊಂಡನು.

೬

ಶ್ರೀರಂಗಪಟ್ಟಣದಿಂದ ಮಲ್ಲಿಗೆಗೆ ಕರೆಬಂದಿತು. ಅರಮನೆಯಲ್ಲಿ ಸಂಗೀತಕಚೇರಿಯಾಗಬೇಕೆಂದು ಮಹಾರಾಜರ ಅಪ್ಪಣೆಯಾಗಿರುವು ದಾಗಿಯೂ ಪಕ್ಕವಾದ್ಯಗಳೊಂದಿಗೆ ಬರಬೇಕಾಗಿಯೂ ಅರಮನೆಯ ಭಕ್ಷಿಯವರು ದೂತರನ್ನಟ್ಟಿದ್ದರು. ಮಲ್ಲಿಗೆಯು ಮೂರುದಿನಗಳೊಳ ಗಾಗಿ ಬರುವುದಾಗಿ ಹೇಳಿಕಳುಹಿಸಿದಳು. ಪಕ್ಕವಾದ್ಯದವರನ್ನು ಕರೆಸಿ ಕೊಂಡು ತನ್ನೊಡನೆ ಶ್ರೀರಂಗಪಟ್ಟಣಕ್ಕೆ ಬರಬೇಕೆಂದು ಪ್ರಾರ್ಥನೆ ಮಾಡಿದಳು. ಅವರೆಲ್ಲರೂ ಸಿದ್ಧಪಡಿಸಿಕೊಂಡು ಮಲ್ಲಿಗೆಯು ಹೊರಡುವ ಸಮಯಕ್ಕೆ ಬರುವುದಾಗಿ ಉತ್ಸಾಹದಿಂದ ತಿಳಿಸಿದರು. ಮಲ್ಲಿಗೆಯ ತಾಯಿಯೂ ಜೊತೆಯಲ್ಲಿ ಹೊರಡುವ ಏರ್ಪಾಡಾಯಿತು. ಈ ಬಾರಿ ಹೆಚ್ಚುಕಾಲ ಶ್ರೀರಂಗಪಟ್ಟಣದಲ್ಲಿ ನಿಲ್ಲಬೇಕಾಗುವುದೆಂದು ಭಾವಿಸಿ ಮಲ್ಲಿಗೆಯು ಬಹಳ ಸನ್ನಾಹಗಳನ್ನು ಮಾಡಿಕೊಂಡಳು.

ವಿಶ್ವೇಶ್ವರನು ಪ್ರತಿದಿನವೂ ಮಲ್ಲಿಗೆಯ ಮನೆಗೆ ಬಂದು ಹೋಗು ತ್ತಿದ್ದನು. ಕ್ರಮವಾಗಿ ಪಾಠಗಳನ್ನೇನೋ ನಡೆಸುತ್ತಿದ್ದನು. ವಾರ ಕ್ಕೊಂದು ದಿನ ನಾಟ್ಯಭಂಗಿಗಳನ್ನು ಹೇಳಿಕೊಡುತ್ತಿದ್ದನು. ವಿಶ್ವೇಶ್ವರನು

ನಿತ್ಯವೂ ಬರುವಂತೆ ಆ ದಿನವೂ ಮಲ್ಲಿಗೆಯ ಮನೆಗೆ ಬಂದನು. ಅಂದು ಮಲ್ಲಿಗೆಯು ಪ್ರಯಾಣಸಿದ್ಧತೆಯಲ್ಲಿ ತೊಡಗಿದ್ದಳು. ವಿಶ್ವೇಶ್ವರನು ಬರುತ್ತಲೇ ಅವನಿಗೂ ಅರಮನೆಯಿಂದ ಕರೆಯು ಬಂದಿರುವ ಸಮಾಚಾರವನ್ನು ಉತ್ಸಾಹದಿಂದ ತಿಳಿಸಿದಳು ವಿಶ್ವೇಶ್ವರನು ಸ್ವಲ್ಪ ಹೊತ್ತು ಮೌನದಿಂದಿದ್ದು ನಿಟ್ಟುಸಿರುಬಿಟ್ಟನು. "ಮಲ್ಲಿಗೆ! ನೀನೇಕೆ ಶ್ರೀರಂಗ ಪಟ್ಟಣಕ್ಕೆ ಹೋಗಬೇಕು ?"

"ಇದೇನು ಗುರುಗಳೇ! ರಾಜರ ಅಪ್ಪಣೆಯಾದರೆ ರಾಜಸಭೆಗೆ ಹೋಗಿ ವಿದ್ಯಾಪ್ರದರ್ಶನ ಮಾಡುವುದು ನಮ್ಮ ಧರ್ಮವಲ್ಲವೇ ?"

"ವಿದ್ಯೆಯ ಆನಂದಕ್ಕಾಗಿ ವಿದ್ಯೆಯನ್ನು ಕಲಿಯಬೇಕೆಂಬುದಷ್ಟೆ ನನಗೆ ಗೊತ್ತು. ರಾಜಸಭೆಗಳಲ್ಲಿ ಹೋಗಿ ಮೆರೆಯಬೇಕೆಂಬುದು ನನಗೆ ಗೊತ್ತಿಲ್ಲ."

"ಗುರುದೇವಾ ರಾಜಮನ್ನಣೆಯಿಲ್ಲದೇ ವಿದ್ಯಾಪ್ರಕಾಶವಿಲ್ಲವೆಂದು ನಾನು ಭಾವಿಸಿದ್ದೇನೆ."

"ಹಾ! ಹಾ! ರಾಜಮನ್ನಣೆಯುಬೇಕೋ. ನೀನು ನನ್ನ ಪ್ರಭಾವದಿಂದ ಪ್ರಕಾಶಿಸುತ್ತಿರುವೆಯೋ ರಾಜಮನ್ನಣೆಯಿಂದ ಪ್ರಕಾಶಿಸುತ್ತಿರುವೆಯೋ ?"

"ಗುರುದೇವಾ ! ತಮ್ಮ ಪ್ರಭಾವದಿಂದ ಅಲ್ಪಸ್ವಲ್ಪ ವಿದ್ಯೆಯನ್ನು ಕಲಿತೆ ಆ ವಿದ್ಯೆಯಿಂದ ರಾಜಪುರಸ್ಕಾರವು ದೊರೆಯಿತು ತಮ್ಮ ಪ್ರಭಾವದಿಂದ ವಿದ್ಯೆ! ವಿದ್ಯೆಯಿಂದ ರಾಜಪುರಸ್ಕಾರ! ವಿದ್ಯೆ–ಪುರಸ್ಕಾರಗಳೆರಡೂ ತಮ್ಮ ಅನುಗ್ರಹದಿಂದ ದೊರೆತಿವೆ"

"ವಿದ್ಯಾವಂತರಿಗೆ ರಾಜಮರ್ಯಾದೆ, ಅರಮನೆಯ ಪುರಸ್ಕಾರಗಳಿಂದ ಏನಾಗಬೇಕು ?"

"'ನಿರಾಶ್ರಯಾ ನಶೋಭ್ಯಂತೆ ಪಂಡಿತಾ ವನಿತಾ ಲತಾ' ಎಂದು ದೊಡ್ಡವರು ಹೇಳುವುದಿಲ್ಲವೇ ?"

"ಮಲ್ಲಿಗೆ ನಿನಗೆ ಹುಚ್ಚು ಹಿಡಿದಿದೆ. ವಿದ್ಯೆಯು ಸ್ವಯಂಪ್ರಕಾಶ

ವಾಗಿರಬೇಕು. ಆಶ್ರಯದಿಂದ ವಿದ್ಯೆಯು ಶೋಭಿಸುವುದಾದರೆ, ಅದು ಗಿಲೀಟು ಒಡವೆಯಂತೆ ಬೆಲೆಯಿಲ್ಲದ್ದು."

ಮಲ್ಲಿಗೆಯು ಮೌನವನ್ನು ತಾಳಿ ತಲೆಬಾಗಿದಳು. ವಿಶ್ವೇಶ್ವರನು "ಮಲ್ಲಿಗೆ ! ಏನು ನಿಶ್ಚಯಮಾಡಿದೆ ?" ಎಂದು ಕೇಳಿದನು.

ಮಲ್ಲಿಗೆಯು "ಗುರುಗಳೇ ! ರಾಜದೂತರಿಗೆ ಮಾತುಕೊಟ್ಟಿದ್ದೇನೆ. ಪಕ್ಕವಾದ್ಯದವರಿಗೆ ಆಹ್ವಾನವಿತ್ತಿದ್ದೇನೆ. ನನ್ನ ತಾಯಿಯು ಉತ್ಸಾಹದಿಂದ ಹೊರಡಲು ಅನುವಾಗಿದ್ದಾಳೆ. ನಾನು ಹಿಂತೆಗೆಯಲಾರೆ. ರಾಜಧಾನಿಗೆ ಹೋಗಿಯೇ ಹೋಗುತ್ತೇನೆ. ತಮ್ಮ ಮಾತು ಯಾವಾಗಲೂ ಲೋಕಸಂಪ್ರದಾಯಕ್ಕೆ ವಿರುದ್ಧವಾಗಿಯೇ ಇರುತ್ತದೆ. ಆದುದರಿಂದಲೇ ತಾವು ಲೋಕೋತ್ತರ ಮಹಾಪುರುಷರೆಂದು ನಂಬಿದ್ದೇನೆ."

"ಒಳ್ಳೆಯದು ಮಲ್ಲಿಗೆ ನಾನೇನು ಮಾಡಬೇಕು ?"

"ತಾವೂ ನಮ್ಮೊಡನೆ ರಾಜಧಾನಿಗೆ ದಯಮಾಡಿಸಿದರೆ, ಬಲು ಸಂತೋಷ ನಾನು ಕೃತಾರ್ಥಳಾಗುತ್ತೇನೆ" ಎಂದು ಹೇಳಿದಳು.

ವಿಶ್ವೇಶ್ವರನು ನಗುತ್ತಾ ತಲೆಯಲ್ಲಾಡಿಸಿ "ನಾನು ರಾಜಧಾನಿಗೆ ಬರುವುದಿಲ್ಲ" ಎಂದು ಹೇಳಿದನು.

ಮಲ್ಲಿಗೆಯು "ಏಕೆ ಗುರುಗಳೇ ! ತಾವೇಕೆ ರಾಜಧಾನಿಗೆ ಬರಕೂಡದು" ಎಂದು ಕೇಳಿದಳು.

"ರಾಜಧಾನಿಯಲ್ಲಿ ವೈಷ್ಣವರ ಪ್ರತಿಷ್ಠೆಯು ಮಿತಿಮೀರಿ ಹೋಗಿದೆ. ಅಲ್ಲಿಗೆ ನಾನು ಬರುವುದಿಲ್ಲ."

ಮಲ್ಲಿಗೆಯು "ಗುರುದೇವಾ ! ತಮಗೆ ಹರಿ-ಹರರಲ್ಲಿ ಭೇದವುಂಟೆ ? ನಾನೆಂದೂ ತಮ್ಮ ಬಾಯಿಂದ ಕೇಳಿಲ್ಲವಲ್ಲಾ" ಎಂದು ಆಶ್ಚರ್ಯವನ್ನು ಸೂಚಿಸಿದಳು.

ವಿಶ್ವೇಶ್ವರನು "ಶಿವ-ವಿಷ್ಣು ಭೇದವನ್ನು ನಾನು ಆಡಿಯೂ ಇಲ್ಲ. ನೀನು ಕೇಳಿಯೂ ಇಲ್ಲ. ನಿಜವಾಗಿಯೂ ಹರಿಹರರಲ್ಲಿ ಭೇದವಿಲ್ಲ.

ನನಗೂ ಆ ಭೇದವು ಕಿಂಚಿತ್ತಾದರೂ ಇಲ್ಲ. ಆದರೆ ರಾಜಧಾನಿಯ ಮಾತೇ ಬೇರೆ! ರಾಜರ ಸುತ್ತಮುತ್ತಲೂ ನೇರಿಕೊಂಡು ಪ್ರತಿಷ್ಠಿತರಾಗಿರುವ ವೈಷ್ಣವರು ದುರಹಂಕಾರಿಗಳು. ಈಶ್ವರನನ್ನು ದ್ವೇಷ ಮಾಡುವರು" ಎಂದು ಹೇಳಿದನು.

ಮಲ್ಲಿಗೆಯು ಎಲ್ಲವನ್ನೂ ಕೇಳುತ್ತಿದ್ದಳು. "ಗುರುದೇವಾ! ಮಹಾರಾಜರೂ ವೀರ ವೈಷ್ಣವರಾಗಿದ್ದಾರೇನು?"

"ಮಹಾರಾಜರು ಹೇಗಿದ್ದಾರೋ ನನಗೇನು ಗೊತ್ತು? ಸುತ್ತಮುತ್ತಲಿನವರೆಲ್ಲರೂ ವೈಷ್ಣವರು. ಅಲ್ಲಿ ವೈಷ್ಣವರ ಪ್ರತಿಷ್ಠೆಯೇ ಹೆಚ್ಚು. ನಾನಲ್ಲಿಗೆ ಬರುವುದಿಲ್ಲ. ಆದುದರಿಂದಲೇ ನಾನು ನಿನ್ನನ್ನು ಹೋಗಬೇಡವೆಂದು ನಿಷೇಧಮಾಡಿದೆ."

ಮಲ್ಲಿಗೆಯು "ಗುರುದೇವಾ! ನಾನು ಆಮಂತ್ರಣವನ್ನು ಒಪ್ಪಿಕೊಂಡಿದ್ದೇನೆ. ಹೋಗಿಯೇ ಹೋಗುತ್ತೇನೆ. ನನ್ನ ವಿದ್ಯೆಯು ಸಂಗೀತ. ಅದರಲ್ಲಿ ಶಿವ-ವಿಷ್ಣು ಭೇದವೇನಿದೆ? ನಾನು ಈ ಬಾರಿ ಹಿಂದಿಗಿಂತಲೂ ಅತುಳವಾದ ರಾಜಮರ್ಯಾದೆಗಳನ್ನು ತಂದು ತಮ್ಮ ಪಾದಕ್ಕೊಪ್ಪಿಸುತ್ತೇನೆ" ಎಂದಳು

ವಿಶ್ವೇಶ್ವರನು "ನೀನು ಬರಲಾರೆ!.........ನನ್ನನ್ನು ಪುನಃ ಇಲ್ಲಿ ನೋಡಲಾರೆ...." ಎಂದು ಹೇಳಿದನು.

ಮಲ್ಲಿಗೆಯ ಕಣ್ಣುಗಳಿಂದ ಒಂದೆರಡು ಬಾಷ್ಪಬಿಂದುಗಳು ಉದುರಿದವು. ಅವಳು ಗುರುವಿನ ಪಾದದ ಮೇಲೆ ಮಸ್ತಕವನ್ನಿಟ್ಟು ನಮಸ್ಕರಿಸಿದಳು. ಗುರುವು ಮೌನದಿಂದಲೇ ಹರಸಿ ಹೊರಟು ಹೋದನು.

೬

ಶ್ರೀರಂಗಪಟ್ಟಣದ ಅರಮನೆಯಲ್ಲಿ ಅನೇಕ ಸಂಗೀತ ಕಛೇರಿಗಳಾದವು. ಮಲ್ಲಿಗೆಯ ಹೆಸರು ಅತ್ಯಂತ ಪ್ರಕಾಶಮಾನವಾಗಿದ್ದಿತು. ಈ ಸಂಗೀತ ಕಛೇರಿಗಳಲ್ಲಿ ಒಂದೇ ಒಂದು ಲೋಪವಿದ್ದಿತು ಯಾವ ಕಛೇರಿಗೂ ಮಂತ್ರಿ ಪಂಡಿತಾರಾಧ್ಯನು ಬಂದಿರಲಿಲ್ಲ ಆದರೆ ಮಲ್ಲಿಗೆಯ ಕಛೇರಿಯು ಸಂಗೀತ ಕಛೇರಿಯಷ್ಟಕ್ಕೇ ಪರ್ಯವಸಾನವಾಗಿರಲಿಲ್ಲ. ಅರಮನೆಯಲ್ಲಿ ಪ್ರತಿದಿನವೂ ಮಲ್ಲಿಗೆಯ ಸಂಗೀತ ಕಛೇರಿಯೋ ಅಥವಾ ನೃತ್ಯವೋ ನಡೆಯುತ್ತಲೇ ಇದ್ದಿತು. ಮಲ್ಲಿಗೆಗೆ ರಾಜಯೋಗ್ಯವಾದ ಬಿಡಾರವು ಏರ್ಪಡಿಸಲ್ಪಟ್ಟಿದ್ದಿತು. ಅರಮನೆಯಿಂದ ಉಪಾಜುಮೆಯು ಬರುತ್ತಿದ್ದಿತು. ರಾಜನು ಪ್ರತಿಯೊಂದು ಕಛೇರಿಯಲ್ಲಿಯೂ ನವ ದುಕೂಲಾಭರಣಗಳನ್ನು ಮಲ್ಲಿಗೆಗೆ ಪುರಸ್ಕಾರವಾಗಿ ಕೊಡುತ್ತಿದ್ದನು. ಅರಮನೆಯಲ್ಲಿಯೂ ನಗರದ ಪೇಟೆಗಳಲ್ಲಿಯೂ ಮಹಾರಾಜರು ಮಲ್ಲಿಗೆಯಲ್ಲಿ ಅನುರಕ್ತರಾಗಿದ್ದಾರೆಂದು ವದಂತಿಯು ಹಬ್ಬಿತು. ಇದಕ್ಕೆಲ್ಲಾ ಸಿಂಗರಾರ್ಯನೇ ಕಾರಣಕರ್ತನೆಂದು ದೊಡ್ಡ ದೊಡ್ಡ ವಿದ್ವನ್ಮಂಡಲಿಗಳಲ್ಲಿ ಗುಸುಗುಂಪಲು ಹತ್ತಿದ್ದಿತು ಮಹಾರಾಜರಿಗೆ ಈ ವರ್ತಮಾನಗಳೊಂದೂ ತಿಳಿದಿರಲಿಲ್ಲ. ಸಿಂಗರಾರ್ಯನಿಗೆ ಮಾತ್ರ ಇದು ತಿಳಿದಿದ್ದಿತು. ಅವನು ಸಮಯವರಿತು ಮಹಾರಾಜರ ಸನ್ನಿಧಾನದಲ್ಲಿ ಮಲ್ಲಿಗೆಗೆ ಬಹುಮಾನವನ್ನು ಕೊಟ್ಟು ಅವಳನ್ನು ಕಳುಹಿಸಿಬಿಡಬೇಕೆಂದು ಅರುಹಿದನು.

ಮಹಾರಾಜನು ಏನೊಂದುತ್ತರವನ್ನೂ ಕೊಡಲಿಲ್ಲ. ಮೌನದಿಂದಿದ್ದನು. ಸಿಂಗರಾರ್ಯನಿಗೆ ಈ ಮೌನವು ಅರ್ಥವಾಗಲಿಲ್ಲ. ಏನು ಮಾಡಬೇಕೆಂಬುದನ್ನು ಅರಿಯದಾದನು

ಮಲ್ಲಿಗೆಯು ಒಂದುಬಾರಿ ಮಂತ್ರಿದರ್ಶನ ಮಾಡಬೇಕೆಂದು

ಆತುರಳಾಗಿದ್ದಳು. ಎಷ್ಟೋಬಾರಿ ತನಗೆ ಆಪ್ತವಾದ ಮೃದಂಗದ ನಾರಣಪ್ಪನ ಮೂಲಕವಾಗಿ ಮಂತ್ರಿಗೆ ಹೇಳಿಕಳುಹಿಸಿದಳು. ಅವಳ ಪ್ರಾರ್ಥನೆಗಳೊಂದೂ ಫಲಕಾರಿಯಾಗಲಿಲ್ಲ. ಮಂತ್ರಿಯು ಒಂದುದಿನ ಅನ್ಯಮನಸ್ಕನಾಗಿ ರಾಜಕಾರ್ಯಾಸಕ್ತನಾಗಿ ಆಲೋಚನೆ ಮಾಡುತ್ತಾ ಕುಳಿತಿದ್ದಾಗ, ಆಪ್ತ ಮುತ್ಸದ್ದಿಯು ಬಂದು ಮಲ್ಲಿಗೆಯು ದರ್ಶನಾಕಾಂಕ್ಷಿತಳಾಗಿ ಕಾದಿದ್ದಾಳೆಂದ, ಅರಿಕೆ ಮಾಡಿದನು. ಪಂಡಿತನು ಆಶ್ಚರ್ಯಚಕಿತನಾಗಿ ತಲೆಯೆತ್ತಿ ನೋಡಿ, "ಮಲ್ಲಿಗೆಯು ಬಂದಿದ್ದಾಳೆಯೋ? ಆ ಅರಮನೆಯ ನರ್ತಕಿ ಮಲ್ಲಿಗೆಯೋ?" ಎಂದು ಪ್ರಶ್ನೆ ಮಾಡಿದನು ಮುತ್ಸದ್ದಿಯು "ಹೌದು ಮಹಾಸ್ವಾಮಿ!" ಎಂದು ಹೇಳಿ ತಲೆ ಬಾಗಿದನು ಮಂತ್ರಿಗೆ ಬಹಳ ಆಲೋಚನೆಗೆ ಇಟ್ಟುಕೊಂಡಿತು. ಅರಮನೆಯಲ್ಲಿ ಪುರಸ್ಕೃತಳಾದ ವಿದ್ಯಾವತಿಯನ್ನು ನಿರಾಕರಿಸುವುದು ನ್ಯಾಯವಲ್ಲ ಎಂದು ಮಂತ್ರಿಯು ಆಲೋಚಿಸಿದನು. ಅವಳನ್ನು ನಿರಾಕರಣೆ ಮಾಡುವುದರಿಂದ ಮಹಾರಾಜರಿಗೆ ಅವಮಾನ ಮಾಡಿದಂತಾಗುತ್ತದೆ ಎಂದು ಶಂಕಿತನಾದನು. ಒಳಗೆ ಕರೆತರುವಂತೆ ಮುತ್ಸದ್ದಿಗೆ ಅಪ್ಪಣೆ ಮಾಡಿದನು.

ಮಲ್ಲಿಗೆಯು ಏಕಾಕಿನಿಯಾಗಿ ದಿವಾನ್ ಖಾನೆಯನ್ನು ಪ್ರವೇಶ ಮಾಡಿದಳು. ದೊಡ್ಡದಾದ ಚಿನ್ನದ ಹರಿವಾಣದಲ್ಲಿ ಫಲಗಳನ್ನು ಪುಷ್ಪ ಹಾರವನ್ನು ಇಟ್ಟುಕೊಂಡು ಆ ತಟ್ಟೆಯನ್ನು ಎರಡು ಕೈಗಳಲ್ಲಿಯೂ ಹಿಡಿದುಕೊಂಡು ದಿವಾನ್ ಖಾನೆಯನ್ನು ಪ್ರವೇಶಿಸಿದಳು. ಪಂಡಿತನ ದೃಷ್ಟಿಯು ಮಲ್ಲಿಗೆಯ ಮೇಲೆ ಬಿದ್ದಿತು. ಅವನು ಮಲ್ಲಿಗೆಯನ್ನು ದೃಷ್ಟಿಸಿ ನೋಡಿದನು. ಒಮ್ಮೆ ಅವಾದ ಮಸ್ತಕವಾಗಿ ನೋಡಿದನು. ಮನಸ್ಸು ಮತ್ತೊಮ್ಮೆ ನೋಡಬೇಕೆಂದು ಕುತೂಹಲವನ್ನುಂಟುಮಾಡಿತು. ಪುನಃ ನಿರೀಕ್ಷಿಸಿದನು. ಇವಳು ಲಾವಣ್ಯವತಿಯಹುದು. ವಿದ್ವಾಂಸರನ್ನೂ ಕೂಡಾ ಆಕರ್ಷಿಸುವಂಥಾ ರೂಪಲಾವಣ್ಯಗಳಿವೆ. ಅದು ಇವಳ ಸಂಗೀತಕ್ಕೆ ಮೆರಗುಕೊಟ್ಟಿದೆ. ಅರಮನೆಯ ವಿದ್ವಾಂಸರೆಲ್ಲರೂ ಇವಳ

ಕಲೆಯಲ್ಲಿ ಮೋಹಿತರಾಗಿದ್ದಾರೆ. ಚಿಕ್ಕಪ್ಪಾಜಿಯು ಸಂಗೀತದಲ್ಲಿ ಮುಳುಗಿದ್ದಾನೆ. ಈ ಸಂಗೀತಗಾರಳಿಗೆ ಅರಮನೆಯಿಂದ ಅಮೂಲ್ಯಾಭರಣಗಳನ್ನೂ ಧನಕನಕಗಳನ್ನೂ ಕೊಟ್ಟಿದ್ದಾರೆ ನಮ್ಮ ಶ್ರೀರಂಗಪಟ್ಟಣವು ಇವಳ ಸಂಗೀತದಿಂದ ಅಭಿಭೂತವಾಗಿದೆ ಎಂದು ಮನಸ್ಸಿನಲ್ಲಿಯೇ ಆಲೋಚಿಸಿದನು. ಇಷ್ಟರಲ್ಲಿ ಮಲ್ಲಿಗೆಯು ಹರಿವಾಣವನ್ನು ಮಂತ್ರಿಯ ಮುಂದಿಟ್ಟು ಅಭಿವಾದನ ಮಾಡಿ ಎದ್ದುನಿಂತು ಕೈಮುಗಿದಳು. ಪಂಡಿತನು ಮರ್ಯಾದೆಯಿಂದ, "ವಿದುಷಿ ! ನೀನು ಬಂದುದು ಬಲು ಸಂತೋಷ ಇಲ್ಲಿಯವರೆಗೆ ಬಂದ ಕಾರ್ಯವೇನು ?" ಎಂದು ಕೇಳಿದನು. ಆಸನವನ್ನು ತೋರಿಸಿ ಕುಳಿತುಕೊಳ್ಳುವಂತೆ ಸೂಚಿಸಿದನು.

ಮಲ್ಲಿಗೆಯು ಮರ್ಯಾದೆಯಿಂದ ಆಸನದ ಮೇಲೆ ಕುಳಿತಳು. "ಮಂತ್ರಿಗಳೇ ! ನಾನು ಕಳೆದವರ್ಷ ಈ ರಾಜಧಾನಿಗೆ ಬಂದು ನನ್ನ ಕಲಾನೈಪುಣ್ಯವನ್ನು ತೋರಿದೆನು. ಮಹಾಪ್ರಭುಗಳವರೂ, ಆಸ್ಥಾನ ವಿದ್ವಾಂಸರುಗಳೂ ಬಹಳ ಸಂತೋಷಪಟ್ಟರು ಮಾನ ಮರ್ಯಾದೆಗಳು ದೊರೆತವು. ಆದರೆ ನನ್ನ ಕಲಾ ಪಾಂಡಿತ್ಯವನ್ನು ತಮ್ಮ ಸನ್ನಿಧಾನದಲ್ಲಿ ಪ್ರದರ್ಶನ ಮಾಡಲು ಅವಕಾಶವಾಗಲಿಲ್ಲ. ಈ ಬಾರಿ ಇಲ್ಲಿಗೆ ಬಂದು ಎರಡು ತಿಂಗಳುಗಳಾದವು. ತಮ್ಮ ದರ್ಶನ ಲಾಭವಾಗಲಿಲ್ಲ. ಆದರಿಂದ ಕಾತರಳಾಗಿ ಇಲ್ಲಿಗೆ ಬಂದಿದ್ದೇನೆ" ಎಂದು ಹೇಳಿದಳು. ಪಂಡಿತನು ಮಂದಹಾಸವನ್ನು ವ್ಯಕ್ತಪಡಿಸುತ್ತಾ, "ಸಂಗೀತದಲ್ಲಿ ನನಗಷ್ಟು ಅಭಿರುಚಿಯಿಲ್ಲ" ಎಂದು ಉತ್ತರವಿತ್ತನು.

ಮಲ್ಲಿಗೆಯ ಮುಖವು ಬೆಳ್ಳಗಾಯಿತು. "ಮಂತ್ರಿಗಳೇ ! ತಾವು ನಾನಾ ದೇಶಗಳನ್ನು ಸಂಚಾರ ಮಾಡಿದ್ದೀರೆಂದು ಕೇಳಿದ್ದೇನೆ. ಬಲುದೊಡ್ಡ ವಿದ್ವಾಂಸರೆಂದು ತಿಳಿದುಕೊಂಡಿದ್ದೇನೆ. ತಮಗೆ ಸಂಗೀತದಲ್ಲಿ ಅಭಿರುಚಿಯಿಲ್ಲವೆಂದು ಕೇಳಲು ನನಗೆ ಆಶ್ಚರ್ಯವಾಗಿದೆ. ಈ ಮಾತನ್ನು ನಾನೆಂದಿಗೂ ನಂಬುವುದಿಲ್ಲ. ಒಂದುದಿನ ತಮ್ಮ ಸನ್ನಿಧಾನ

ದಲ್ಲಿ ನನ್ನ ಪಾಂಡಿತ್ಯವನ್ನು ಪ್ರದರ್ಶನ ಮಾಡಲಾಗದಿದ್ದರೆ ನಾನು ಕಲಿತ ವಿದ್ಯವೆಲ್ಲವೂ ವ್ಯರ್ಥವೆಂದೇ ಭಾವಿಸುತ್ತೇನೆ."

"ವಿದುಷಿ ! ನಿನ್ನ ಕಲೆಯು ಏಕವ್ಯರ್ಥವಾದೀತು. ಅದು ಪಂಡಿತರಿಗೂ ಪಾಮರರಿಗೂ ಮನರಂಜಕವಾಗಿದೆಯೆಂದು ನಾನು ಕೇಳಿದ್ದೇನೆ. ಮಹಾರಾಜರು ಒಪ್ಪಿದ್ದಾರೆಂದಮೇಲೆ ನಿನ್ನ ವಿದ್ವತ್ತಿಗೆ ಬೇರೆ ಪ್ರಮಾಣವು ಅವಶ್ಯಕವೇ ಇಲ್ಲ." ಎಂದನು

ಮಲ್ಲಿಗೆಯು, "ತಾವು ಅಭಿಮಾನದಿಂದ ನುಡಿಯುವ ಮಾತುಗಳೆಲ್ಲವೂ ನನಗೆ ಸಂತೋಷವನ್ನುಂಟುಮಾಡುತ್ತಿವೆ. ಆದರೆ ತಾವೇಕೆ ನನ್ನ ಸಂಗೀತವನ್ನು ಕೇಳಬಾರದು ?"

"ನನ್ನಂತಹ ರಾಜಕಾರಿಣಿಗಳು ಸುಖಭೋಗಗಳಲ್ಲಿ ಆಸಕ್ತರಾಗಬಾರದು. ಸಂಗೀತವನ್ನು ವಿದ್ಯೆಯೆಂದು ಕರೆಯುತ್ತಾರೆ. ನಿಜವಾಗಿಯೂ ಅದೊಂದು ಕಲೆ. ಕಲೆಯು ಮಾನವನ ಮನಸ್ಸಿಗೆ ಸುಖವನ್ನುಂಟುಮಾಡುತ್ತದೆ. ಆದರೆ ಅದು ಬುದ್ಧಿಯನ್ನು ಪ್ರಚೋದಿಸುವುದಿಲ್ಲ. ಜ್ಞಾನವನ್ನು ಪ್ರಕಾಶನ ಮಾಡುವುದಿಲ್ಲ. ಕಲೆಯಿಂದ ಸುಖಾನುಭವ ಮಾಡಿದ ಮನಸ್ಸು ಪುನಃ ಪುನಃ ಅದನ್ನೇ ಬಯಸುತ್ತದೆ. ಅದೂ ಒಂದು ವ್ಯಸನ. ರಾಜನು ಗಾನಸುಖದಲ್ಲಿ ಮುಳುಗಿರುವಾಗ ಮಂತ್ರಿಯೂ ಮನಸ್ಸಿನ ಆನಂದಕ್ಕೆ ಬಗ್ಗಿ ಪ್ರಮತ್ತನಾದರೆ ರಾಜ್ಯಕ್ಕೆ ಕ್ಷೇಮವಾಗದು. ನಾನು ಬ್ರಹ್ಮಚಾರಿಯಾಗಿದ್ದೇನೆ. ಯಾವ ವ್ಯಸನಗಳನ್ನೂ ಹಚ್ಚಿಕೊಂಡಿಲ್ಲ ರಾಜರ ಕ್ಷೇಮ, ಪ್ರಜೆಗಳ ಕ್ಷೇಮ, ರಾಜ್ಯದ ಕ್ಷೇಮಚಿಂತನೆಯಲ್ಲಿಯೇ ನಾನು ಸರ್ವದಾ ಮುಳುಗಿದ್ದೇನೆ. ನಿನ್ನ ಸಂಗೀತವನ್ನು ಕೇಳುತ್ತಾ ಕಾಲ ಕಳೆಯಲು ನನಗೆಲ್ಲಿ ಅವಕಾಶವಿದೆ? ಅದರಲ್ಲಿಯೂ ನೀನು ತರುಣಿ! ಲಾವಣ್ಯವತಿ! ಕಲಾವತಿ! ನಿನ್ನ ಸಂಸರ್ಗವನ್ನು ನಾನು ಸರ್ವಥಾ ಒಪ್ಪುವುದಿಲ್ಲ. ಆದುದರಿಂದಲೇ ನೀನೆಷ್ಟುಬಾರಿ ಪ್ರಾರ್ಥಿಸಿದಾಗ್ಯೂ ನಾನು ನಿನ್ನ ಭೇಟಿಗೆ ಒಪ್ಪಲಿಲ್ಲ. ಇಂದು ನೀನೇ ನನ್ನ ಗೃಹಕ್ಕೆ ಬಂದಿರುವೆ. ಆಸ್ಥಾನ

ದಲ್ಲಿ ಮರ್ಯಾದೆ ಪಡೆದ ವಿದುಷಿಯನ್ನು ನಮ್ಮ ಮನೆಗೆ ಬಂದಾಗಲೂ ನೋಡುವುದಿಲ್ಲನೆಂದು ಹೇಳವುದು ಶಾಠ್ಯ ! ಆದುದರಿಂದ ಇಂದು ನಿನಗೆ ದರ್ಶನಕೊಟ್ಟಿದ್ದೇನೆ. ನಾಲ್ಕು ಮಾತುಗಳನ್ನಾಡಲು ಅವಕಾಶ ಕೊಟ್ಟಿದ್ದೇನೆ."

"ಪಂಡಿತರೇ ತಮ್ಮ ಮಾತುಗಳು ಚುಚ್ಚುವಂತಿದ್ದರೂ ಸತ್ಯ ವಾದವುಗಳಾಗಿವೆ. ನಾನು ತಮ್ಮ ನಿರಾಕರಣೆಯಿಂದ ಎಂದೂ ಪರಾಭವ ವನ್ನು ಹೊಂದಿಲ್ಲ. ತಮ್ಮ ಹೆಸರನ್ನೂ ಪಾಂಡಿತ್ಯವನ್ನೂ ಕೇಳಿ ನಾನು ಒಂದುಬಾರಿ ತಮ್ಮ ಅನುಗ್ರಹಕ್ಕೆ ಪಾತ್ರಳಾದರೆ, ಕೃತಾರ್ಥಳಾಗುವೆ ನೆಂದು ಭಾವಿಸಿದ್ದೆ. ಈಗಲೂ ಅದೇ ಭಾವನೆ. ಕಲೆಯಿಂದ ಮನಸ್ಸು ಸೋಲುವುದೆಂಬುದನ್ನೂ ಸ್ತ್ರೀಸಂಸರ್ಗದಿಂದ ರಾಜಕಾರಿಣಿಯು ಕರ್ತವ್ಯ ಭ್ರಷ್ಟನಾಗುವನೆಂದೂ ನಾನೆಂದಿಗೂ ನಂಬುವುದಿಲ್ಲ. ತಮ್ಮ ವಿದ್ವತ್ತಿಯ ಪೂರ್ಣತೆಗೆ ಇವೆರಡೂ ಅನನುಭವದ ದೋಷಗಳೆಂದೇ ನನ್ನ ನಂಬಿಕೆ. ತಮ್ಮ ಮನವನ್ನು ಒಲಿಸುವವರೆಗೆ ನಾನು ಈ ನಗರವನ್ನು ಬಿಟ್ಟು ಹೋಗುವುದಿಲ್ಲ "

ಪಂಡಿತನು ನಕ್ಕು, "ಮಲ್ಲಿಗೆ ! ಶಪಥ ಮಾಡಿರುವೆಯಾ ? ಹಠ ತೊಟ್ಟಿರುವೆಯಾ?" ಎಂದು ಕೇಳಿದನು.

ಪುನಃ "ಅಯ್ಯೋ ಹುಚ್ಚಳೇ, ನಾನೊಬ್ಬ ಬಡವ. ರಾಜರ ಪರಮಾನುಗ್ರಹಕ್ಕೆ ಪಾತ್ರಳಾಗಿರುವ ನಿನಗೆ ನನ್ನ ಗೊಡವೆ ಏಕ ! ಈ ಪ್ರತಿಜ್ಞೆಯೇಕೆ ? ಈ ಮನಸ್ಸನ್ನು ದೇವರಲ್ಲಿಟ್ಟು ಪ್ರತಿಜ್ಞೆಮಾಡು. ದೇವರು ಸತ್ಯವಾಗಿದ್ದರೆ ನಿನಗೆ ಒಲಿಯುವನು." ಎಂದು ಹೇಳಿದನು.

ಮಲ್ಲಿಗೆಯು "ಪಂಡಿತ ! ನೀನೇ ನನ್ನ ದೇವರು. ದೇವರಿದ್ದಾ ನೆಯೋ ಇಲ್ಲವೋ ನಾನರಿಯೆ. ದೇವರು ಸತ್ಯವಾಗಿದ್ದರೆ ಅದು ನಿನ್ನಲ್ಲಿ ನಿನ್ನ ಸ್ವರೂಪದಲ್ಲಿ " ಎಂದು ಹೇಳಿ ಮಲ್ಲಿಗೆಯೂ ನಮಸ್ಕರಿಸಿ ಹೊರಡ ಲನುವಾದಳು. ಪಂಡಿತನು ನಕ್ಕು, ಹರಸಿ "ಹೋಗಿಬಾ ಮಲ್ಲಿಗೆ !" ಎಂದನು. ಮಲ್ಲಿಗೆಯು "ಬಂದೇ ಬರುತ್ತೇನೆ, ಮತ್ತೆ ಮತ್ತೆ ತಮ್ಮ

ದರ್ಶನಕ್ಕೆ ಬರುವುದೇ ನನಗೊಂದು ಸೌಭಾಗ್ಯ" ಎಂದು ಹೇಳಿ ಮಲ್ಲಿಗೆಯು ದಿವಾನ್ ಖಾನೆಯನ್ನು ದಾಟಿ ಹೊರಬಾಗಿಲನ್ನು ಅತಿಕ್ರಮಿಸಿ ರಾಜಮಾರ್ಗದಲ್ಲಿ ತಾನಿದ್ದ ಬಿಡಾರಕ್ಕೆ ತೆರಳಿದಳು. ರಾಜಮಾರ್ಗ ದಲ್ಲಿದ್ದ ಪುರಜನರೆಲ್ಲರೂ ಮಂತ್ರಿಯ ಮನೆಯಿಂದ ಮಲ್ಲಿಗೆಯು ಸಂಭ್ರಮದಿಂದ ಹೋಗುತ್ತಿರುವುದನ್ನು ನೋಡಿ ಬೆರಗಾದರು.

ಪಂಡಿತನು ಮಲ್ಲಿಗೆಯ ಮಾತುಗಳಿಗೆ ಸಮಯೋಚಿತವಾದ ಉತ್ತರಗಳನ್ನೇನೋ ಕೊಟ್ಟನು. ಆದರೆ ಅವಳು ಮಂತ್ರಿಯ ಸೌಧದಲ್ಲಿ ದಿವಾನ್ ಖಾನೆಯಲ್ಲಿ ಕುಳಿತಿದ್ದಷ್ಟು ಹೊತ್ತು ಅಮೃತದ ಪ್ರವಾಹವು ಹರಿಯುತ್ತಿದ್ದಂತೆ ಪಂಡಿತನಿಗೆ ಬೋಧೆಯಾಗುತ್ತಿತ್ತು. ಅಪ್ರಶಾಂತ ಪ್ರವಾಹದಲ್ಲಿ ಮಲ್ಲಿಗೆಯ ಮುಖಪದ್ಮವು ನರ್ತನಮಾಡುವಂತಿದ್ದಿತು. ಆ ಪ್ರವಾಹದಲ್ಲಿ ಅಲಂಕಾರವಾಗಿ ಚಲಿಸುವ ಮೀನುಗಳಂತೆ ಆ ಕಣ್ಣು ಗಳು ಕಾಂತಿಯನ್ನು ಬೀರುತ್ತಿದ್ದಿತು. ಮಲ್ಲಿಗೆಯ ಮಾತು ಮಾತಿ ನಲ್ಲಿಯೂ ಅವ್ಯಕ್ತವಾದ ಸಂಗೀತದ ಲಹರಿಯು ಏಳುತ್ತಿರುವಂತೆ, ಪಂಡಿತನಿಗೆ ಭೋಧೆಯಾಗುತ್ತಿದ್ದಿತು. ಅವಳುಟ್ಟಿದ್ದ ಶ್ವೇತವಸನವು ಪುಳಿನರಾಶಿಯಂತೆ, ಪ್ರಕಾಶಿಸುತ್ತಿದ್ದಿತು ಬೆನ್ನಿನ ಮೇಲೆ ಹಾರುತ್ತಿ ರುವ ಕೇಶಧಾಮವು ಪುಳಿನರಾಶಿಯಮೇಲೆ ನಲಿಯುವ ನವಿಲಿನ ಪುಚ್ಛದಂತೆ ಭಾಸವಾಗುತ್ತಿದ್ದಿತು. ಅವಳು ನಡೆದು ಹೋಗುವಾಗ ಒಂದು ಅನ್ಯಾದೃಶವಾದ ವೈಯ್ಯಾರವು ಕಾಣುತ್ತಿದ್ದಿತು. ಪಂಡಿತನು ಮಲ್ಲಿಗೆಯನ್ನು ಮಾತುಗಳಿಂದ ನಿರಾಕರಿಸಿದನೆಂಬುದು ನಿಜ. ಆದರೆ ಮನಸ್ಸಿನಿಂದ ಸಾವಿರಬಾರಿ ಪುರಸ್ಕರಿಸಿದ್ದನೆಂಬುದು ಅವನಿಗೆ ಅಗೋ ಚರವಾಗಿದ್ದಿತು. ಮಲ್ಲಿಗೆಯು ಹೊರಟುಹೋದಮೇಲೆ ಪಂಡಿತನಿಗೆ ಆ ಭವನವೆಲ್ಲವೂ ಬರಿದಾದಂತೆ ಭಾಸವಾಯಿತು. ನಾನೇಕೆ ಈ ರಮಣಿಯನ್ನು ಕಳಿಸಿಬಿಟ್ಟೆ? ಅವಳೇಕೆ ಹೊರಟುಹೋದಳು? ಎಂಬ ದ್ವಂದ್ವವು ಮಿಡಿಯುತ್ತಿದ್ದಿತು. ಪಂಡಿತನು ತನ್ನ ಅವಸ್ಥೆಯನ್ನು ನೋಡಿ ತಾನೇ ಮನದಲ್ಲಿ ನಾಚಿದನು. ಈ ಮಲ್ಲಿಗೆಯ ದರ್ಶನ ಸಲ್ಲಾಪ

ಗಳು ಮೇನಕೆಯು ವಿಶ್ವಾಮಿತ್ರನ ಮುಂದೆ ತೋರಿದ ಭಾವಾವೇಶಕ್ಕಿಂತಲೂ ಅತಿಶಯವಾದುದೆಂದು ಪಂಡಿತನು ಭಾವಿಸಿದನು. ಇದು ಒಂದು ದೇವರವಾಯೆ! ಎಂತಹ ಮನಸ್ಸಾದರೂ ಮರುಳಾಗುತ್ತದೆ. ಬ್ರಹ್ಮದೇವನ ನಿರ್ಮಾಣದ ಮಹಿಮೆಗೆ ಸ್ತ್ರೀ ನಿರ್ಮಾಣವು ಸಾಕ್ಷಿ. ಅದರಲ್ಲಿಯೂ ಮಲ್ಲಿಗೆಯ ಸೃಷ್ಟಿಯು ಪ್ರತ್ಯಕ್ಷ ಸಾಕ್ಷಿ ಎಂದುಕೊಂಡನು. ನನಗೇಕೆ ಈ ಹಂಬಲ ಎಂದು ನಿರ್ವಿಣ್ಣನಾದನು.

೮

ಚಿಕ್ಕದೇವರಾಜನು ವೀರ ಪುರುಷ! ಹಾಗೆಯೇ ಕಲಾಪ್ರೇಮಿ. ರಸಿಕ! ಅವನು ಸರ್ವದಾ ಮಲ್ಲಿಗೆಯ ಸಂಗೀತದಲ್ಲಿ ಆಸಕ್ತನಾಗಿದ್ದಾನೆಂದು ಪರಿಜನರು ಕೂಡಾ ಪಿಸುಮಾತುಗಳನ್ನಾಡಿಕೊಳ್ಳುತ್ತಿದ್ದರು. ರಾಜಕಾರಣದಲ್ಲಿ ಅಲಕ್ಷ್ಯದಿಂದಿರಲಿಲ್ಲ. ರಾಜ್ಯಭಾರವು ಪ್ರಶಸ್ತವಾಗಿಯೇ ನಡೆಯುತ್ತಿದ್ದಿತು. ಚನ್ನಪಟ್ಟಣದ ಜಗದೇಕರಾಯನು ವಿರೋಧವನ್ನು ಬೆಳಸುತ್ತಿದ್ದನು. ಎಂದಾವರೊಂದುದಿನ ಜಗದೇಕರಾಯನೊಡನೆ ಯುದ್ಧವು ಪ್ರಾಪ್ತವಾಗಿಯೇ ಆಗುವುದೆಂದು ರಾಜನು ತಿಳಿದಿದ್ದನು. ಅದೊಂದು ಮಹತ್ಕಾರ್ಯವೆಂದು ಅವನೆಂದೂ ಭಾವಿಸಿರಲಿಲ್ಲ. ಆದರೆ ನಿಷ್ಕಾರಣವಾಗಿ ಜಗದೇಕರಾಯನ ಮೇಲೆ ಯುದ್ಧ ಮಾಡುವುದು ಲಕ್ಷಣವಲ್ಲವೆಂದು ಅವನು ಭಾವಿಸುತ್ತಿದ್ದನು. ಈ ಸಮಯದಲ್ಲಿ ಮೈಸೂರಿನ ರಾಜ್ಯವಿಸ್ತಾರವು ಬಹುಮಟ್ಟಿಗೆ ಆಗಿದ್ದಿತು. ಮಂತ್ರಿಯ ಪ್ರಾಬಲ್ಯವು ಸಾಧಾರಣವಾದುದಾಗಿರಲಿಲ್ಲ. ರಾಜ್ಯಭಾರದಲ್ಲಿ ಮಂತ್ರಿಯು ಬಹಳ ವ್ಯವಸ್ಥೆಗಳನ್ನು ಏರ್ಪಡಿಸಿದ್ದನು. ಯಾರೂ ಕೊಂಕು ಹೇಳುವಂತಿರಲಿಲ್ಲ. ಪ್ರಜೆಗಳೆಲ್ಲರಿಗೂ ನ್ಯಾಯವು ದೊರೆಯುವು

ದೆಂದು ಸಂಪೂರ್ಣ ನಂಬಿಗೆಯಿದ್ದಿತು. ರಾಜಭಂಡಾರದ ಐಶ್ವರ್ಯವು ನೂರುಮಡಿಯಾಗಿ ತುಂಬಿದ್ದಿತು. ಮಂತ್ರಿಯಮೇಲೆ ಯಾವ ದೋಷಗಳನ್ನೂ ಹೇಳುವಂತಿರಲಿಲ್ಲ. ಆದರೆ ಆಚಾರಪರರಾದ ವಿದ್ವಾಂಸರುಗಳು ಪಂಡಿತಾರಾಧ್ಯನು ನಾಸ್ತಿಕ ಎಂದು ಹೆಸರಿಟ್ಟಿದ್ದರು. ಆರಾಧ್ಯನು .ಶಾಸ್ತ್ರಾಧ್ಯಯನ ಮಾಡಿದ್ದರೂ ಯಾರೊಡನೆಯೂ ಶಾಸ್ತ್ರಾರ್ಥಗಳನ್ನು ಚರ್ಚೆಮಾಡುತ್ತಿರಲಿಲ್ಲ. ಆ ಕಾಲದಲ್ಲಿ ವಿದ್ವಾಂಸರುಗಳು ಶಾಸ್ತ್ರಾರ್ಥಮಾಡುವುದು ವಿಶೇಷ ವಾಡಿಕೆಯಾಗಿದ್ದಿತು. ರಾಜರ ಸಮ್ಮುಖದಲ್ಲಿ ಶಾಸ್ತ್ರಾರ್ಥನಡೆಯುವುದು ವಿದ್ವಾಂಸರಿಗೆ ಬಹುಮಾನಾಸ್ಪದವಾದ ಸಂಪ್ರದಾಯವಾಗಿದ್ದಿತು. ಆರಾಧ್ಯನು ಅಂತಹ ಶಾಸ್ತ್ರಾರ್ಥಗಳಿಗೆ ಎಂದೂ ಬರುತ್ತಿರಲಿಲ್ಲ. ಆದರೆ ವಿದ್ವಾಂಸರುಗಳನ್ನು ಕಂಡರೆ ತಾತ್ಸಾರ ಭಾವವನ್ನು ತೋರುತ್ತಲೂ ಇರಲಿಲ್ಲ. ವಿದ್ವಾಂಸರುಗಳನ್ನು ಎದುರಿಗೆ ಕಂಡಾಗ ಬಹಳ ಗೌರವದಿಂದ ಮನ್ನಣೆ ಮಾಡುತ್ತಿದ್ದನು. ಯಾವ ದೇವಾಲಯಗಳಿಗೂ ಮಂತ್ರಿಯು ಎಂದೂ ಹೋಗುತ್ತಿರಲಿಲ್ಲ. ಉತ್ಸವಗಳಲ್ಲಿ ಭಾಗವಹಿಸುತ್ತಿರಲಿಲ್ಲ. ಆದರೆ ಗುಡಿ ಗೋಪುರಗಳನ್ನು ಕಟ್ಟುವುದಕ್ಕೂ ಛತ್ರ, ಅತಿಥಿ ಶಾಲೆಗಳಿಗೂ ಹೇರಳವಾಗಿ ಹಣವನ್ನು ಕೊಡುತ್ತಿದ್ದನು. ಇದೆಲ್ಲಾ ರಾಜರ ಹೆಸರಿನಲ್ಲಿ ನಡೆಯುತ್ತಿದ್ದಿತು. ವಿದ್ವಾಂಸರಾಗಲೀ ಆಚಾರವಂತರಾಗಲೀ ಹಿಂದುಗಡೆ ನಾಸ್ತಿಕನೆಂದು ತೆಗಳಿದರೂ ಎದುರಿಗೆ ಬಂದಾಗ ಆರಾಧ್ಯನ ಮಾತು–ಕತೆ, ನಡೆವಳಿಕೆಗಳನ್ನು ನೋಡಿ ಮೆಚ್ಚುಗೆಯಿಂದ ಹಿಂತಿರುಗುತ್ತಿದ್ದರು.

ಮಲ್ಲಿಗೆಯ ವಿದ್ಯಾಪ್ರಭಾವವೂ ಕಲಾನೈಪುಣ್ಯವೂ ವಿದ್ವಸ್ಮಂಡಲಿಯಲ್ಲಿ ಅಪಾರ ಗೌರವವನ್ನು ಗಳಿಸಿದ್ದವು. ಮಲ್ಲಿಗೆಯು ಇತ್ತೀಚೆಗೆ ಮಂತ್ರಿಸೌಧಕ್ಕೆ ವಿಶೇಷವಾಗಿ ಹೋಗಿಬರುತ್ತಾಳೆಂಬುದು ರಾಜಧಾನಿಯಲ್ಲೆಲ್ಲಾ ಆಡಿಕೆಯ ಮಾತಾಗಿ ಪರಿಣಮಿಸಿತು. ಪಂಡಿತನ ಸಂಯಮ, ಮಲ್ಲಿಗೆಯ ಭಕ್ತಿ ಇದನ್ನೆಲ್ಲಾ ಎಂಥಾ ವಿದ್ವಾಂಸರಾದರೂ ಗಣನೆಗೆ ತಂದುಕೊಳ್ಳುತ್ತಿರಲಿಲ್ಲ. ಮಲ್ಲಿಗೆಯ ಪ್ರಭಾವವು ಮಹಾರಾಜರಲ್ಲಿಯೂ

ಬೆಳೆದಿದೆ. ಮಹಾರಾಜರು, ಮಲ್ಲಿಗೆಯನ್ನು ಬಂಗಾರದವಳಾಗಿ ಪರಿಗ್ರಹಿಸುವರೆಂಬ ವದಂತಿಯು ಹಬ್ಬಿದೆ. ಮಲ್ಲಿಗೆಯು ಮಹಾ ರಾಜರ ಬಂಗಾರದವಳಾಗುವುದಾದರೆ ನಿಶ್ಯಂಕೆಯಿಂದ ಅವಳು ಮಂತ್ರಿ ಸೌಧಕ್ಕೆ ಹೋಗಿಬರುವುದು ವಿಶೇಷ ಶಂಕಾಸ್ಪದವಾಗಿ ಪರಿಣಮಿಸಿತು. ಜನರ ಈ ಕಲ್ಪನೆ-ಭಾವನೆಗಳು ಮಹಾರಾಜರಿಗೂ ಅಪ್ರತ್ಯಕ್ಷವಾಗಿ ಗೋಚರವಾಗದೆ ಹೋಗಲಿಲ್ಲ. ಮಲ್ಲಿಗೆಯಮೇಲೆ ಅವರಿಗಿದ್ದ ಅವ್ಯಕ್ತ ವಾದ ಪ್ರೇಮವನ್ನು ಅವರು ಈ ಜನವದಂತಿಯಿಂದ ಹೊಸದಾಗಿ ಅರ್ಥಮಾಡಿಕೊಂಡರು. ಜನರು ಕಟ್ಟುವುದು ಸರಿಯಾಗಿಯೇ ಇದೆ. ಮಲ್ಲಿಗೆಯು ರಾಜ ಪರಿಗ್ರಾಹ್ಯಳೇ ಅಹುದು ! ಎಂದು ಮಹಾರಾಜನು ಅನೇಕ ಬಾರಿ ಅಂದುಕೊಂಡನು. ಈ ಪರಿಸ್ಥಿತಿಯು ಮಂತ್ರಿಗೂ ಹೊಳೆಯದೇ ಹೋಗಲಿಲ್ಲ. ಪಂಡಿತನು ಆ ವಿಷಯವಾಗಿ ಹೆಚ್ಚು ಆಲೋಚಿಸತೊಡಗಿದನು. ಮಲ್ಲಿಗೆಯು ಮಹಾರಾಜರ ಬಂಗಾರದವ ಳಾಗುವಳೇ ? ಹಾಗಾದರೆ ರಾಜ್ಯಕ್ಕೇನೂ ಕೆಡಕಿಲ್ಲವೇ ? ಎಂದು ಆಲೋಚಿಸತೊಡಗಿದನು. ರೂಪ ಯೌವನಸಂಪನ್ನೆಯೂ ಕಲಾ ವತಿಯೂ ಆದ ಮಲ್ಲಿಗೆಯು ಬಂಗಾರದವಳಾದರೂ ಆಗಬಹುದು ಅದು ರಾಜರ ಇಷ್ಟ. ಆದರೆ ರಾಜ್ಯದಮೇಲೆ ಅವಳಿಂದ ಯಾವ ಹಾನಿಯೂ ಆಗದಂತೆ ನೋಡಿಕೊಳ್ಳುವುದು ನನ್ನ ಭಾಗದ ಹೊಣೆ ! ಎಂದು ಕೊಳ್ಳುತ್ತಿದ್ದನು.

ಮಲ್ಲಿಗೆಯು ವಿಶೇಷವಾಗಿ ಮಂತ್ರಿಸೌಧಕ್ಕೆ ಬಂದು ಹೋಗು ತ್ತಿದ್ದರೂ ಅವಳೊಂದುಬಾರಿಯಾದರೂ ಯಾವ ರಾಜಕೀಯವನ್ನೂ ಎತ್ತಿ ಮಾತನಾಡುತ್ತಿರಲಿಲ್ಲ. ಹಣದಾಸೆಯನ್ನೂ ತೋರಿಸುತ್ತಿರಲಿಲ್ಲ. ಆದರೆ ಮಂತ್ರಿಯ ಅಂತರಂಗವು ಮಲ್ಲಿಗೆಯ ಮನೋಭಿಪ್ರಾಯವನ್ನು ಅರಿಯಲಾರದಷ್ಟು ನಿಸ್ಸತ್ವವಾಗಿರಲಿಲ್ಲ. ಅವಳು ತನ್ನಲ್ಲಿ ಪ್ರಣಯಾ ಕಾಂಕ್ಷಿಣಿಯೆಂದು ಅವನಿಗೆಷ್ಟೋಬಾರಿ ಹೊಳೆದಿದ್ದಿತು. ಅವಳಿಗೆ ಪ್ರಣಯ ಭಿಕ್ಷೆಯನ್ನು ನೀಡಲು ತಾನು ಅನರ್ಹನಾಗಿದ್ದೇನೆಂದು ಅವನು ಭಾವಿಸು

ತ್ತಿದ್ದನು ಈ ಮಧ್ಯೆ ಅವನ ಮನವು ಡೋಲಾಯಮಾನವಾಗಿದ್ದಿತು. ಇದೇನು ಮಲ್ಲಿಗೆಯು ನನ್ನಲ್ಲಿ ಪ್ರಣಯಾಕಾಂಕ್ಷಿಣಿಯಾಗಿದ್ದರೆ, ಇವಳು ಚಿಕ್ಕಪ್ಪಾಜಿಯ ಬಂಗಾರದವಳಾಗುವಳೆಂಬ ಪ್ರವಾದದ ಅರ್ಥವೇನು? ರಾಜಪರಿವಾರದಲ್ಲಿ ಯಾರೋ ಕುಹಕಿಗಳು ನನಗೂ ಚಿಕ್ಕಪ್ಪಾಜಿಗೂ ವೈಮನಸ್ಯವನ್ನು ತಂದಿಡಲು ಈ ಮೋಹಿನಿಯನ್ನು ಮಧ್ಯದಲ್ಲಿ ತಂದು ನಿಲ್ಲಿಸಿರಬಹುದೇ? ಹಾಗಾದರೇನುಮಾಡಬೇಕು? ರಾಜನು ಈ ಮಾಯಾಜಾಲದಿಂದ ಮೋಸ ಹೋಗಬಹುದು ಇದಕ್ಕೇನು ಮಾಡ ಬೇಕು? ರಾಜನೂ ನಾನೂ ಪರಮಾಪ್ತಮಿತ್ರರಾಗಿದ್ದೇವೆ ನಾನೇ ಈ ವಿಷಯವನ್ನು ರಾಜನೊಡನೆ ಪ್ರಸ್ತಾಪಿಸಿಬಿಡಲೇ? ಹಾಗೆ ಮಾಡು ವುದು ನನ್ನ ಬುದ್ಧಿಗೆ ಕುಂದಕ! ಒಂದು ಹೆಣ್ಣಿನ ವಿಚಾರದಲ್ಲಿ ನಾನಾಗಿ ಹೋಗಿ ಮಾತನಾಡುವುದೆಂದರೇನು? ನಾನು ನಿರಪರಾಧಿಯೆಂದು ಹೋಗಿ ಹೇಳಿಕೊಳ್ಳುವುದು ಎಷ್ಟೊಂದು ಹೀನಾಯ! ರಾಜನಾದರೂ ಮಲ್ಲಿಗೆಯಲ್ಲಿ ಅತ್ಯಂತ ಅಭಿನಿವೇಶನವುಳ್ಳವನೆಂದು ನಾನೇ ಊಹೆ ಕಟ್ಟಿಕೊಂಡು ಅವನೊಡನೆ ಪ್ರಸ್ತಾಪಮಾಡಿದರೆ ಅವನೇನೆಂದು ಕೊಂಡಾನು? ನನ್ನನ್ನು ಅಲ್ಪಮನುಷ್ಯನೆಂದುಕೊಳ್ಳಲಾರನೇ? ನಾನು ಮಲ್ಲಿಗೆಯೊಡನೆ ಈ ವಿಷಯವನ್ನು ಪ್ರಸ್ತಾವಮಾಡುವುದೆಂತು? ಇದ ನ್ನೆಲ್ಲಾ ಅವಳೇನು ಬಲ್ಲಳು. ಕುಹಕಿಗಳ ಪ್ರೇರಣೆಯಿಂದ ಅವಳು ಕುತಂತ್ರಮಾಡುತ್ತಿದ್ದಾಳೆಂದು ನನಗಂತೂ ತೋರುವುದೇ ಇಲ್ಲ. ಅವಳ ಮುಖದಲ್ಲಿ ಎಂದೂ ನಾನು ಮಾಲಿನ್ಯದ ಛಾಯೆಯನ್ನೇ ಕಂಡಿಲ್ಲ. ಮನಸ್ಸಿನಲ್ಲಿ ಕುತಂತ್ರವಿದ್ದರೆ, ಮುಖದಲ್ಲಿ ಮಾಲಿನ್ಯವಿಲ್ಲದೇ ಎಂದೆಂ ದಿಗೂ ಹೋಗುವುದಿಲ್ಲ. ಇದೆಲ್ಲಾ ಹಾಗೆಯೇ ಇರಲಿ ನಾನೇಕೆ ಈ ಮಲ್ಲಿಗೆಯನ್ನು ಇಷ್ಟು ಆತ್ಮೀಯಳಂತೆ ನೋಡುತ್ತೇನೆಂಬುದನ್ನು ನಾನೇ ಅರಿಯದವನಾಗಿದ್ದೇನೆ. ಈ ರಹಸ್ಯವು ಅಲ್ಲಿ ನಿರ್ಭೇದ್ಯವಾಗಿದೆ ಎಂದುಕೊಳ್ಳುತ್ತಿದ್ದನು.

ಮಲ್ಲಿಗೆಯು ಮಂತ್ರಿಸೌಧಕ್ಕೆ ಬಂದಳು. ಅವಳು ಯಥಾಪ್ರಕಾರ

ಮಂತ್ರಿಯನ್ನು ಕಂಡು ಅಭಿವಾದನಮಾಡಿದಳು. ಇಂದು ಮಂತ್ರಿಯ ಮುಖಲಕ್ಷಣದಲ್ಲಿ ಏನೋ ವೈಲಕ್ಷಣವಿದ್ದಿತು. ಪಂಡಿತನು ಮಂದಹಾಸ ವನ್ನು ಬೀರಿ, "ಮಲ್ಲಿಗೆ! ನೀನು ಈಚೆಗೆ ಕೆಲವು ದಿವಸಗಳಿಂದ ಇತ್ತ ಕಡೆ ಬರಲೇಇಲ್ಲ. ಇನ್ನು ನೇಲೆ ನೀನು ಇಲ್ಲಿಗೆ ಬರಲಾರೆಯೆಂದೇ ಭಾವಿಸಿದೆ" ಎಂದು ಹೇಳಿದನು.

ಮಲ್ಲಿಗೆಗೆ ಆಶ್ಚರ್ಯವಾಯಿತು. "ಪಂಡಿತರೇ! ಅರಮನೆಯಲ್ಲಿ ಹತ್ತು ಹದಿನೈದು ದಿವಸಗಳಿಂದಲೂ ವಿರಾಮವಿಲ್ಲದೇ ಸಂಗೀತ ನಾಟ್ಯ ಗಳು ನಡೆಯುತ್ತಿವೆ. ಆದುದರಿಂದ ನಿಮ್ಮ ಸನ್ನಿಧಾನಕ್ಕೆ ಬರಲು ಅವಕಾಶವಾಗಲಿಲ್ಲ" ಎಂದು ಉತ್ತರವಿತ್ತಳು.

"ಮಲ್ಲಿಗೆ! ಮಹಾರಾಜರು ಪ್ರಸನ್ನರಾಗಿರುವಂತಿದೆ" ಎಂದು ಹಾಸ್ಯಗರ್ಭಿತವಾಗಿ ನುಡಿದನು.

"ಅಹುದು ಮಂತ್ರಿಗಳೇ! ಮಹಾಪ್ರಭುಗಳು ಬಹಳ ಕೃಪೆ ಮಾಡಿದ್ದಾರೆ. ಆದುದರಿಂದಲೇ ನನ್ನ ವೈದುಷ್ಯವು ಇಷ್ಟು ಪ್ರಕಾಶ ವನ್ನು ಪಡೆದಿದೆ" ಎಂದು ಹೇಳಿದಳು.

ಪಂಡಿತನು, "ಸಂತೋಷ!" ಎಂದುಹೇಳಿ ತಲೆದೂಗಿದನು. ಮತ್ತೆ, "ಮಲ್ಲಗೆ! ನೀನು ರಾಜರ ಬಂಗಾರದವಳಾಗುವೆಯೆಂದು ಕೇಳಿದ್ದೇನೆ. ಇನ್ನುಮೇಲೆ ನೀನು ಅರಮನೆಯಲ್ಲಿಯೇ ಅಂತಃಪುರದಲ್ಲಿ ಇರಬೇಕಾಗುವುದೊ ಏನೋ?" ಎಂದನು.

ಮಲ್ಲಿಗೆಯ ಶರೀರವು ಚಕಿತವಾಯಿತು. "ಪಂಡಿತರೇ! ಈ ವದಂತಿಯೇನೋ ಊರೆಲ್ಲಾ ಹರಡಿದೆ. ನಿಮ್ಮ ಬಾಯಿಯಲ್ಲಿಯೂ ಕೇಳುತ್ತಿದ್ದೇನೆ. ಆದರೆ ಮಹಾರಾಜರವರಲ್ಲಿ ಅಂತಹ ಶೃಂಗಾರ ಚೇಷ್ಟೆಗಳನ್ನೇನೋ ನಾನು ಕಂಡಿಲ್ಲ. ಇದೇಕೆ ಜನರು ಮರುಳಾಗಿ ಹೀಗೆ ಕೂಗುತ್ತಾರೆಯೋ ದೇವರೊಬ್ಬನೇ ಬಲ್ಲ" ಎಂದು ಹೇಳಿ ದಳು.

ಪಂಡಿತನು, "ಮಲ್ಲಿಗೆ! ಜನರ ಸ್ವಭಾವವೇ ಹಾಗೆ. ದೇವರೆಲ್ಲಿ

ಬಂದ ಮಹಾರಾಜರ ಮನಸ್ಸು ಹೇಗಿದೆಯೋ ಅದನ್ನು ಬಲ್ಲವರಾರು? ನಿನ್ನ ಮನವು ಹೇಗಿದೆ" ಎಂದು ಕೇಳಿದನು.

"ಪ್ರಭುವೇ! ನನ್ನ ಮನವೇ? ನನ್ನ ಮನವನ್ನು ನೀವಿನ್ನೂ ಅರಿತಿಲ್ಲವೇ? ನಾನು ಆಮರಣಾಂತ ತಮ್ಮ ದಾಸಿಯಾಗಿರಬೇಕೆಂದು ಸಂಕಲ್ಪ ಮಾಡಿದ್ದೇನೆ" ಎಂದಳು.

ಪಂಡಿತನು ನಕ್ಕು "ಸರಿ! ಮಲ್ಲಿಗೆ ನಿನ್ನ ಸಂಕಲ್ಪವೇನೋ ಉದಾತ್ತವಾದುದು. ಆದರೆ ಈ ನಿನ್ನ ಸಂಗೀತ ನರ್ತನಗಳಿಗೆ ತಿಲಾಂಜಲಿಯನ್ನು ಕೊಟ್ಟುಬಿಡುವೆಯಾ?"

"ಪಂಡಿತರೇ! ವಿದ್ಯೆಯನ್ನೇಕೆ ಪರಿತ್ಯಜಿಸಬೇಕು? ನೀವು ವಿದ್ಯಾವತಿಯನ್ನು ದೂರಗೈಯ್ಯುವಿರಾ? ನನ್ನ ವಿದ್ಯೆ, ಕಲೆ, ಲಾವಣ್ಯಗಳನ್ನೆಲ್ಲಾ ನಿನುಗೆ ಅರ್ಪಿಸುವೆನು" ಎಂದು ಹೇಳಿದಳು. ಪಂಡಿತನು, "ರಮಣಿ! ಒಳ್ಳೆಯ ಯೋಚನೆ. ಆದರೆ ಮಹಾರಾಜರು ಕುಪಿತರಾಗಿ ನಮ್ಮಿಬ್ಬರನ್ನೂ ದೇಶಾಂತರಕ್ಕಟ್ಟುವರು."

"ಪ್ರಭುವೇ! ಮಹಾರಾಜರು ನಿಮ್ಮ ಆಬಾಲ್ಯ ಸ್ನೇಹವನ್ನು ನನ್ನ ಕಲಾನೈಪುಣ್ಯವನ್ನು ತಿರಸ್ಕರಿಸಿ ದೇಶಾಂತರಕ್ಕಟ್ಟಿದರೆ, ಈ ಜಗತ್ತು ಅವರನ್ನು ಮಹಾಪುರುಷರೆಂದು ಕರೆದೀತೆ? ತಾವು ಎಲ್ಲಿಗೆ ಹೋದರೂ ಪೂಜ್ಯತೆಯನ್ನು ಸಂಪಾದಿಸಬಲ್ಲಿರಿ. ನಾನು ತಮ್ಮ ಅನುವರ್ತಿನಿಯಾಗಿ ಎಲ್ಲಿದ್ದರೂ ನನ್ನ ಪುಣ್ಯವೆಂದು ಭಾವಿಸುತ್ತೇನೆ" ಎಂದಳು.

ಪಂಡಿತನು ನಕ್ಕು, "ಮಲ್ಲಿಗೆ! ಒಳ್ಳೆಯಕಲ್ಪನೆ. ಒಳ್ಳೆಯ ಯೋಚನೆ. ಆದರೆ ನಾನು ಮದುವೆಯಾಗುವುದಿಲ್ಲ" ಎಂದನು.

ಮಲ್ಲಿಗೆಯು ಮುಖವನ್ನು ತಗ್ಗಿಸಿ "ಪ್ರಭೂ ನಾನು ಕುಲಹೀನಳೆಂದು ತಮ್ಮ ಮನವು ಹಿಂಜರಿಯುವುದೇನು?"

ಪಂಡಿತನು ನಕ್ಕು "ಮಲ್ಲಿಗೆ! ನಿನ್ನ ಕುಲದ ಯೋಚನೆಯು ನನಗಾವಾಗಲೂ ಬಂದೇ ಇಲ್ಲ ನೀನು ನನಗಿಂತಲೂ ಉತ್ತಮಳೆಂದು ನನ್ನ

ಭಾವನೆ. ನಿನ್ನ ವಿದ್ಯೆ, ನಿನ್ನ ಅಪಾಯಕವೃತ್ತಿ ಇವುಗಳನ್ನು ನೆನೆದಾಗಲೆಲ್ಲಾ ನೀನು ದೇವಕನ್ಯೆಯೆಂದು ನನಗೆ ಭಾಸವಾಗುತ್ತದೆ. ಆದರೆ ನಾನು ಬ್ರಹ್ಮಚಾರಿ! ನನ್ನ ಬ್ರಹ್ಮಚರ್ಯವ್ರತವು ಆಡಂಬರವಲ್ಲ. ನಾನೇ ನನ್ನನ್ನು ಪರಿಶೋಧನೆಮಾಡಿಕೊಳ್ಳುತ್ತಿದ್ದೇನೆ. ನನ್ನ ವ್ರತದಲ್ಲಿ ಇಂದು ವಿಜಯಿಯೆಂದು ನಂಬುತ್ತೇನೆ. ನಿನ್ನಂಥಾ ರೂಪಲಾವಣ್ಯಭರಿತಳಾದ ವಿದ್ಯಾವತಿಯು ಪ್ರಾರ್ಥನೆ ಮಾಡುವಾಗ ನನ್ನ ಮನಸ್ಸಿನ ಪರೀಕ್ಷೆಯು ಸಂಪೂರ್ಣವಾದಂತಾಯಿತು. ನಾನು ಆಮರಣಾಂತ ಬ್ರಹ್ಮಚರ್ಯದಿಂದ ಈ ಜೀವನವನ್ನು ಸಾರ್ಥಕಗೊಳಿಸುವುದಾಗಿ ಸಂಕಲ್ಪಿಸಿದ್ದೇನೆ" ಎಂದನು.

ಮಲ್ಲಿಗೆಯ ಶರೀರವೆಲ್ಲವೂ ಕಂಪಿಸಲಾರಂಭಿಸಿತು ಮಾತುಗಳು ಹೊರಡದಾದವು ಆವಳು ಕೈಜೋಡಿಸಿ "ಪಂಡಿತನೇ ನಿನ್ನ ಬ್ರಹ್ಮಚರ್ಯದ ರಹಸ್ಯವೇನು? ಬ್ರಹ್ಮಚರ್ಯದಿಂದ ಪಡೆಯುವ ಪುಣ್ಯವನ್ನು ಗೃಹಸ್ಥಧರ್ಮದಿಂದ ಪಡೆಯಲಾರೆಯಾ? ಗೃಹಸ್ಥಧರ್ಮವು ನೀಚಧರ್ಮವೇ?" ಎಂದು ಕೇಳಿದಳು.

"ಅಲ್ಲ! ಮಲ್ಲಿಗೆ 'ಧನ್ಯೋ ಗೃಹಸ್ಥಾಶ್ರಮಃ' ಎಂದು ಶಾಸ್ತ್ರಪುರಾಣಾದಿಗಳು ಸಾರಿ ಹೇಳುತ್ತಿವೆ. ನನಗೆ ಅಂತಹ ಶಕ್ತಿಯಿಲ್ಲ ನಾನೂ ರಾಜನೂ ಬಾಲ್ಯಸ್ನೇಹಿತರು ಕಷ್ಟಸುಖಗಳಲ್ಲಿ ಸಮಭಾಗಿಗಳಾಗಿದ್ದೇವೆ. ಹಿಂದೊಂದುಬಾರಿ ನಮ್ಮ ಪ್ರವಾಸದಲ್ಲಿ ಸ್ನೇಹಿತನಾದ ಚಿಕ್ಕಪ್ಪಾಜಿಗೆ ಪ್ರಮಾಣಮಾಡಿ ಕೊಟ್ಟಿದ್ದೇನೆ. ನಾನು ಯಾವಾಗಲೂ ಪ್ರಮತ್ತನಾಗದೇ ಆ ಪ್ರಮಾಣವಚನವನ್ನು ಪಾಲನೆಮಾಡುತ್ತಾ ಬಂದಿದ್ದೇನೆ. ಈ ರಾಜ್ಯದಲ್ಲಿ ನ್ಯಾಯ, ಧರ್ಮಗಳನ್ನು ಪಾಲನೆಮಾಡಲು ನಾನು ಶಕ್ತನಾಗಿರುವ ರಹಸ್ಯವೇ ಅದು. ಇಷ್ಟೊಂದು ಲಕ್ಷಾಂತರ ಪ್ರಜೆಗಳ ಕ್ಷೇಮಕ್ಕಾಗಿ ನಾನು ಬ್ರಹ್ಮಚರ್ಯಪಾಲನೆ ಮಾಡುತ್ತಿದ್ದೇನೆ. ನಿನ್ನೊಬ್ಬಳ ಆಕಾಂಕ್ಷೆಗಾಗಿ, ನಮ್ಮಿಬ್ಬರ ಸುಖಕ್ಕಾಗಿ ನಾನು ನನ್ನ ಸಂಕಲ್ಪ ವಿಮುಖನಾಗಲಾರೆ. ಈ ರಾಜ್ಯದಮೇಲಿರುವ ಪ್ರೇಮವನ್ನು ರೂಪಾಂ

ತರಗೊಳಿಸಲು ಅಶಕ್ತನಾಗಿದ್ದೇನೆ. ನೀನೂ ನನ್ನ ಈ ಸೇವಾಧರ್ಮದ ತಪಸ್ಸನ್ನು ಭಂಗಗೊಳಿಸಲು ಎಂದೆಂದಿಗೂ ಪ್ರಯತ್ನಿಸಬೇಡ. ನಾನೂ ನಿನ್ನ ಸುಗುಣಗಳನ್ನು ಮೆಚ್ಚಿದ್ದೇನೆ. ವಿದ್ಯಾಪ್ರೌಢಿಮೆಯನ್ನು ಶ್ಲಾಘಿಸುತ್ತೇನೆ" ಎಂದು ಹೇಳಿದನು.

ಮಲ್ಲಿಗೆಯ ಕಣ್ಣುಗಳಲ್ಲಿ ನೀರು ಹರಿಯಲಾರಂಭಿಸಿತು. ಸ್ಖಲಿತ ವಾಣಿಯಿಂದ "ಪ್ರಭುವೇ ! ನೀನು ನನ್ನ ಪ್ರಾರ್ಥನೆಯನ್ನು ಮನ್ನಿಸಲಾರೆಯಾ ? ನಾನೆಂದೆಂದಿಗೂ ನಿನ್ನವಳಾಗಲಾರೆನೇ ?" ಎಂದು ಅಳಲಾರಂಭಿಸಿದಳು.

ಪಂಡಿತನು "ಮಲ್ಲಿಗೆ ! ನೀನು ಎಂದೆಂದಿಗೂ ನನ್ನವಳೇ ಹೌದು. ನೀನು ನನ್ನ ಸಹೋದರಿ. ನಿನ್ನ ವಿದ್ಯೆ ಕಲೆಗಳಿಗೆ ದಾಸಿಯಾಗಿರು, ನಾನು ನಿನ್ನನ್ನು ಯಾವಾಗಲೂ ನನ್ನವಳೆಂದೇ ಭಾವಿಸುತ್ತೇನೆ" ಎಂದು ಹೇಳಿದನು.

ಮಲ್ಲಿಗೆಯು ಎದ್ದಳು. ಮೈ ನಡುಗುತ್ತಿತ್ತು. ದುಃಖವು ಹರಿಯುತ್ತಿದ್ದಿತು. ಎರಡು ಹೆಜ್ಜೆಗಳನ್ನು ಇಡುವಷ್ಟರಲ್ಲಿ ಕಂಪಿತಳಾಗಿ ಕೆಳಗೆ ಬೀಳುವುದರಲ್ಲಿದ್ದಳು. ಪಂಡಿತನು ಗಾಬರಿಯಿಂದ ಜಗ್ಗನೆದ್ದು ಮಲ್ಲಿಗೆಯನ್ನು ಹಿಡಿದುಕೊಂಡನು. ಹಾಗೆಯೇ ಎತ್ತಿ ಆಸನದಮೇಲೆ ಕುಳ್ಳಿರಿಸಿದನು. ಮಲ್ಲಿಗೆಗೆ ಅರ್ಧಜ್ಞಾನಾವಸ್ಥೆಯಾಗಿದ್ದಿತು. ಪಂಡಿತನು ಮಲ್ಲಿಗೆ ! ಮಲ್ಲಿಗೆ ! ಎಂದು ಉಸುರಿದನು. ಆ ಸ್ಪರ್ಶದಿಂದ ಆ ಮಧುರ ವಚನಗಳಿಂದ ಮಲ್ಲಿಗೆಯು ಉತ್ತೇಜಿತಳಾಗಿ ಕಣ್ಣು ತೆರೆದು ನೋಡಿದಳು ಆ ಬಿರುಗಣ್ಣಿನ ನೋಟದಲ್ಲಿ ನಿರಾಶಾಭಾವನೆಯು ತುಂಬಿದ್ದಿತು. ಅವಳ ಭಾಗಕ್ಕೆ ಜಗತ್ತೆಲ್ಲವೂ ಶೂನ್ಯವಾಗಿದ್ದಿತು. ಪಂಡಿತನ ಹೃದಯದಲ್ಲಿ ಕರುಣಾರಸವು ಉಕ್ಕಿಬರುತ್ತಿದ್ದಿತು. 'ಪುಟಪಾಕ ಪ್ರತೀಕಾಶೋ ರಾಮಸ್ಯಕರುಣೋರಸಃ' ಎಂಬ ಭವಭೂತಿಯ ವಚನವು ಪಂಡಿತನ ಮನಸ್ಸಿಗೆ ನೆನಪಾಯಿತು.

೬

ಮಲ್ಲಿಗೆಯು ಈಗ ಚಿಕ್ಕಪ್ಪಾಜಿಯ ಆಸ್ಥಾನದಲ್ಲಿ ಗಾಯಕಳಾಗಿ ನರ್ತಕಿಯಾಗಿ ಇದ್ದಾಗ್ಗೂ ವಿಶೇಷವಾಗಿ ಚಿಕ್ಕಪ್ಪಾಜಿಯ ಆದರೆಯನ್ನು ಹೊಂದಿದ್ದಳು. ರಾಜನಿಗೆ ಸಂಗೀತಗಾರರಲ್ಲಿ ಇರುವ ಭಾವನೆಗಿಂತಲೂ ಅತಿಶಯವಾದ ಭಾವನೆಯು ಮಲ್ಲಿಗೆಯ ವಿಷಯದಲ್ಲಿ ಅಂಕುರಿಸಿದ್ದಿತು. ಅದನ್ನು ಪ್ರೇಮವೆಂದು ಅವನು ಅನುಭವ ಮಾಡಿದ್ದನೋ ಇಲ್ಲವೋ ಹೇಳಲಾಗುವುದಿಲ್ಲ ಆದರೆ ಯಾವಾಗಲೂ ಚಿಕ್ಕಪ್ಪಾಜಿಗೆ ಮಲ್ಲಿಗೆಯ ಹಂಬಲವೇ ಆಗಿದ್ದಿತು ವಿದ್ವತ್‌ಸಭೆಯಲ್ಲಿ ಮಲ್ಲಿಗೆಯು ಹಾಡುವ ಕಛೇರಿಗಳು ತಪ್ಪಿಹೋಗಿ ರಾಜನ ಏಕಾಂತದಲ್ಲಿ ಮಲ್ಲಿಗೆಯ ಹಾಡು ಗಾರಿಕೆಯು ಅತಿಶಯವಾಗಿದ್ದಿತು. ರಾಜನು ಮಲ್ಲಿಗೆಯಲ್ಲಿ ಸರ್ವದಾ ಆಸಕ್ತನಾಗಿದ್ದನು. ಆ ಸ್ತ್ರೀಯಳನ್ನು ಪರಿಗ್ರಹಿಸಬೇಕಾದರೆ ಲೋಕ ಸಮ್ಮತವಾಗಿ ಹೇಗೆ ಪರಿಗ್ರಹಿಸಬೇಕು? ಎಂಬ ಆಲೋಚನೆಯು ಎಷ್ಟೋಬಾರಿ ಚಿಕ್ಕಪ್ಪಾಜಿಯ ಮನಸನ್ನು ಆವರಿಸಿದ್ದಿತು. ವಿವಾಹ ಮಾಡಿಕೊಂಡು ಮಲ್ಲಿಗೆಯನ್ನು ರಾಣೀವಾಸಕ್ಕೆ ಸೇರಿಸಿಕೊಳ್ಳುವುದು ಶಾಸ್ತ್ರ ಸಂಪ್ರದಾಯಗಳಿಗೆ ವಿರೋಧವೆಂದು ಚಿಕ್ಕಪ್ಪಾಜಿಯು ನಿಶ್ಚಯಿಸಿ ಕೊಂಡಿದ್ದನು. ಮಲ್ಲಿಗೆಯನ್ನು ಗಾಂಧರ್ವವಿಧಿಯಿಂದ ವರಿಸಿ ಬಂಗಾರವನಳಾಗಿ ಅರಮನೆಯಲ್ಲಿ ಇಟ್ಟುಕೊಳ್ಳುವುದೇ ಮೇಲೆಂದು ಅಂದುಕೊಂಡಿದ್ದನು. ಒಬ್ಬಿಬ್ಬರು ಆಪ್ತರಲ್ಲಿ ಈ ಮನೋಗತವನ್ನು ವ್ಯಕ್ತಪಡಿಸಿದ್ದನು. ರಾಣೀವಾಸದವರು ಖಿನ್ನರಾಗುವರೆಂದು ಮನವು ಮರುಕಗೊಳ್ಳುತ್ತಿದ್ದಿತು. 'ರಾಜಾನೋ ಬಹು ವಲ್ಲಭಾಃ' ಎಂಬ ಮಹಾಕವಿಯ ವಚನವನ್ನು ಎಷ್ಟೋಭಾರಿ ಪಠಿಸಿ ಮನಸ್ಸಿಗೆ ಧೈರ್ಯ ತಂದುಕೊಂಡು ಸುಖಿಯಾಗುತ್ತಿದ್ದನು. ಮಲ್ಲಿಗೆಯು ಅರಮನೆಗೆ ಬಂದು ರಾಜನ ಅಂತರಂಗಗೃಹದಲ್ಲಿ ಎಷ್ಟೋಬಾರಿ ಸಂಗೀತವನ್ನು

ಹಾಡಿ ರಾಜನೊಡನೆ, ಮಾತುಕಥೆಗಳನ್ನಾಡುತ್ತಾ ಇದ್ದಳು. ಆ ಮಾತು ಗಳೂ ಚಿಕ್ಕಪ್ಪಾಜಿಗೆ ಸಂಗೀತದಂತೆಯೇ ಭೋಧೆಯಾಗುತ್ತಿದ್ದಿತು. ರಾಜನಲ್ಲಿ ವಿಶೇಷ ಸಲಿಗೆಯಿದ್ದರೂ ಮಲ್ಲಿಗೆಯು ಒಂದು ಬಾರಿಯಾ ದರೂ ಪ್ರಣಯಭಾವವನ್ನು ವ್ಯಕ್ತಪಡಿಸುತ್ತಿರಲಿಲ್ಲ. ಆದರೆ ಮಲ್ಲಿಗೆಯು ಗೀತಗೋವಿಂದದ ಶ್ಲೋಕಗಳನ್ನೂ, ಕೃಷ್ಣಕರ್ಣಾಮೃತದ ಶ್ಲೋಕ ಗಳನ್ನೂ ಭಾವಪೂರ್ಣವಾಗಿ ಪಠಿಸುವಾಗ ಚಿಕ್ಕಪ್ಪಾಜಿಯು ಆ ಭಾವ ಪ್ರದರ್ಶನವು ತನಗಾಗಿಯೇ ಉದ್ಭವಿಸಿ ಬಂದುದೆಂದು ಭಾವಿಸಿ ವಿಹ್ವಲ ನಾಗುತ್ತಿದ್ದನು

ಇಂದು ಮಲ್ಲಿಗೆಯು ರಾಜನ ಸಮ್ಮುಖಕ್ಕೆ ಬಂದು ಅಭಿವಂದನ ಮಾಡಿದಾಗ ರಾಜನು ಮಲ್ಲಿಗೆಯ ಮುಖವನ್ನು ದೃಷ್ಟಿಸಿ ನೋಡಿದನು. ಆ ಮುಖವು ಮಲಿನಛಾಯೆಯಿಂದ ಮುಸುಕಿದ್ದಿತು. ನೇತ್ರಯುಗ್ಮವು ಕಾಂತಿಹೀನವಾಗಿದ್ದಿತು. ಕಪೋಲಗಳು ಬಿಳಿಯ ಛಾಯೆಯನ್ನು ಹೊಂದಿದ್ದವು. ರಾಜನು "ಮಲ್ಲಿಗೆ! ಬಾ! ಕುಳಿತುಕೋ. ಇಂದೇಕೆ ಇಷ್ಟು ತೇಜೋಹೀನಳಾಗಿರುವೆ. ಇಷ್ಟು ಹೊತ್ತಾಗಿ ಬಂದುದೇಕೆ?" ಎಂದು ಆದರದಿಂದ ಪ್ರಶ್ನೆಮಾಡಿದನು.

ಮಲ್ಲಿಗೆಯು ಮೃದು ನುಡಿಗಳಿಂದ "ಮಹಾರಾಜರೇ! ಕ್ಷಮಿಸ ಬೇಕು. ನನ್ನ ತಾಯಿಯು ರುಗ್ಣಶಯ್ಯೆಯಲ್ಲಿದ್ದಾಳೆ. ಅವಳು ಗರಳಪುರಿ ಕ್ಷೇತ್ರಕ್ಕೆ ಹೋಗಬೇಕೆಂದು ಹಠ ಹಿಡಿದಿದ್ದಾಳೆ" ಎಂದು ತಿಳಿಸಿದಳು.

ರಾಜನು "ಮಲ್ಲಿಗೆ! ಈ ಶ್ರೀರಂಗನಾಥನ ಕ್ಷೇತ್ರವೇನು ಸಾಮಾನ್ಯವಾದುದೇ? ಕಾವೇರಿಯು ದಕ್ಷಿಣದಲ್ಲಿ ಗಂಗೆಯ ಸಮಾನ ವಲ್ಲವೇ? ಈ ರಾಜಧಾನಿಯಲ್ಲಿ ಹೆಸರುವಾಸಿ ಪಡೆದ ವೈದ್ಯರಿದ್ದಾರೆ. ಬೇಕಾದ ಔಷಧೋಪಚಾರಗಳನ್ನು ಇಲ್ಲಿಯೇ ನಡೆಸಬಹುದು. ನೀನೇಕೆ ರಾಜಧಾನಿಯನ್ನು ಬಿಟ್ಟುಹೋಗಬೇಕು?" ಎಂದನು.

ಮಲ್ಲಿಗೆಯು "ಮಹಾಪ್ರಭುಗಳೇ! ಶ್ರೀರಂಗನಾಥನಿಗಿಂತಲೂ

ತಮ್ಮ ಸನ್ನಿಧಾನವು ಮಿಗಿಲಾದುದೆಂದೇ ನನ್ನ ನಂಬುಗೆ. ಆದರೆ ನನ್ನ ತಾಯಿಗೆ ಹುಟ್ಟಿಬೆಳೆದ ಮನೆಯನ್ನು ನೋಡಬೇಕೆಂಬ ಆಶೆ. ಬಂಧು ಜನರ ಸಮಾಗಮದ ಅಪೇಕ್ಷೆ. ಶಿವಕ್ಷೇತ್ರದಲ್ಲಿ ಮೊದಲಿನಿಂದಲೂ ಭಕ್ತಿಯನ್ನಿಟ್ಟುಕೊಂಡು ಅಲ್ಲಿಯೇ ಆತ್ಮಾರ್ಪಣ ಮಾಡಬೇಕೆಂಬ ಸಂಕಲ್ಪ. ಆ ತಾಯಿಯ ಸಂಕಲ್ಪವನ್ನು ನೆರವೇರಿಸುವುದಕ್ಕಿಂತಲೂ ಈ ಜನ್ಮದಲ್ಲಿ ನನಗೆ ಅತಿಶಯ ಪುಣ್ಯಕಾರ್ಯವು ಮತ್ತಾವುದಿದೆ ? ತಾವು ಅಪ್ಪಣೆಕೊಟ್ಟರೆ, ತಾಯಿಯನ್ನು ಕರೆದೊಯ್ದು ಸಂತೈಸಿ ಹಿಂತಿರುಗಿ ಸನ್ನಿಧಾನಕ್ಕೆ ಬರುತ್ತೇನೆ" ಎಂದು ಹೇಳಿದಳು.

ರಾಜನು "ಮಲ್ಲಿಗೆ ! ನನ್ನ ಅಂತರಂಗವನ್ನು ಬಿಚ್ಚಿ ಹೇಳುತ್ತೇನೆ. ಕೇಳು ! ನಿನ್ನ ಸಂಗೀತವನ್ನು ಕೇಳದಿದ್ದರೆ, ನನಗೆ ಅಂದೆಲ್ಲವೂ ಉಪವಾಸದಂತೆ ಭಾಸವಾಗುತ್ತದೆ. ನಿನ್ನ ಮುಖವನ್ನು ಕಾಣದಿದ್ದರೆ, ಈ ಜಗತ್ತೆಲ್ಲವೂ ಶೂನ್ಯವೆಂದು ಭೋಧೆಯಾಗುತ್ತದೆ. ನಾನು ನಿನ್ನನ್ನು ಸಾಮಾನ್ಯ ಗಾಯಕಿ, ನರ್ತಕಿ ಎಂದು ಭಾವಿಸಿಲ್ಲ. ನನ್ನ ಮನದ ರನ್ನೆಯೆಂದು ಭಾವಿಸಿದ್ದೇನೆ. ನಿನ್ನನ್ನು ನಮ್ಮರಮನೆಯಲ್ಲಿಯೇ ವಿಶ್ವಾಸ ಗೌರವಗಳಿಂದ ಇಟ್ಟುಕೊಳ್ಳಬೇಕೆಂದು ಆಶೆಯಾಗಿದೆ. ನೀನು ಬೇಗ ರಾಜಧಾನಿಗೆ ಹಿಂತಿರುಗಿ ಬಂದುಬಿಡು" ಎಂದುಹೇಳಿ ಮಲ್ಲಿಗೆಯನ್ನು ಕಳುಹಿಸಿಕೊಟ್ಟನು.

ಮಾರನೆಯದಿನ ಪ್ರಾತಃಕಾಲ ಮಲ್ಲಿಗೆಯು ಬಂಡಿಯಲ್ಲಿ ಕುಳಿತು ತಾಯಿಯೊಡನೆ ಮೈಸೂರಿಗೆ ಹಿಂತಿರುಗಿದಳು. ರಾಜನು ವಿಶೇಷ ಧನಕನಕಗಳನ್ನು ಮಲ್ಲಿಗೆಗೆ ಕಳುಹಿಸಿಕೊಟ್ಟು ರಾಜಭಟರನ್ನು ಕಾವಲಿಗೆ ನೇಮಿಸಿ ಮಲ್ಲಿಗೆಯನ್ನು ಮನೆಗೆ ತಲುಪಿಸಿ ಬರಬೇಕೆಂದು ಅಪ್ಪಣೆಮಾಡಿ ಕಳುಹಿಸಿದನು.

ಮಲ್ಲಿಗೆಯು ಮೈಸೂರಿಗೆ ತನ್ನ ಮನೆಗೆ ಬಂದು ತಲುಪಿದಳು. ಅವಳ ತಾಯಿಯು ರೋಗಗ್ರಸ್ತಳಾಗಿದ್ದುದು ನಿಜ. ವೈದ್ಯರನ್ನು ಕರೆಯಿಸಿ ಔಷಧೋಪಚಾರಗಳನ್ನು ಮಾಡಿಸತೊಡಗಿದಳು. ತಾಯಿಯನ್ನು

ವಿಶೇಷವಾಗಿ ಉಪಚರಿಸುತ್ತಿದ್ದಳು. ಹಗಲಿರುಳೂ ತಾಯಿಯ ಸಮೀಪ ದಲ್ಲಿಯೇ ಇರುತ್ತಿದ್ದಳು. ಅವಳ ತಾಯಿಯ ವ್ಯಾಧಿಯು ದಿನದಿನಕ್ಕೆ ಪ್ರಬಲವಾಗುತ್ತಲೇ ಇದ್ದಿತು. ವಿಶ್ವೇಶ್ವರನು ಪ್ರತಿದಿನವೂ ಬಂದು ಮಲ್ಲಿಗೆಯ ತಾಯಿಯನ್ನು ವಿಚಾರಿಸಿಕೊಂಡು ಹೋಗುತ್ತಿದ್ದನು. ತಾಯಿಯ ವ್ಯಾಧಿಯು ಪ್ರಬಲಿಸಿದಂತೆಲ್ಲಾ ಮಲ್ಲಿಗೆಯು ಕಂಗೆಟ್ಟು ತೇಜೋವಿಹೀನಳಾಗಿ ಕಾಣುತ್ತಿದ್ದಳು. ಶ್ರೀರಂಗಪಟ್ಟಣದಲ್ಲಿ ಅವಳು ಸುಮಾರು ಐದಾರು ತಿಂಗಳುಗಳು ಕಳೆದಿದ್ದಳು. ವಿಶ್ವೇಶ್ವರನು ಆ ಆರುತಿಂಗಳ ಕಾಲವೂ ಅವಳ ಚಿಂತೆಯಲ್ಲಿಯೇ ಹಗಲು ರಾತ್ರಿ ಕಳೆಯು ತ್ತಿದ್ದನು. ಅವನು ಶ್ರೀರಂಗಪಟ್ಟಣದಿಂದ ಹಬ್ಬಬಂದಿದ್ದ ಅನೇಕ ಕಥೆಗಳನ್ನು ಕೇಳಿ ಖಿನ್ನನಾಗಿದ್ದನು. ಒಂದುಬಾರಿ ಏಕಾಂತದಲ್ಲಿ ಮಲ್ಲಿಗೆಯನ್ನು ಕೇಳಿ ತನ್ನ ಭವಿಷ್ಯವನ್ನು ಇತ್ಯರ್ಥಪಡಿಸಿಕೊಳ್ಳ ಬೇಕೆಂದು ತವಕಪಡುತ್ತಿದ್ದನು ಮಲ್ಲಿಗೆಗೆ ಯಾವಾಗಲೂ ತಾಯಿಯ ಸೇವೆ! ಸದಾ ಖಿನ್ನಳಾಗಿಯೇ ಇರುತ್ತಿದ್ದಳು ಆದಾಗ್ಯೂ ಮಲ್ಲಿಯ ಮನೆಯಲ್ಲಿ ಐಶ್ವರ್ಯವು ತಾಂಡವಾಡುತ್ತಿದ್ದಿತು. ವಿಶ್ವೇಶ್ವರನು ಮಲ್ಲಿಗೆಯ ಮನೆಗೆ ಬಂದಾಗಲೆಲ್ಲಾ ಮಲ್ಲಿಗೆಯು ಭಕ್ತಿಯಿಂದಲೇ ನಡೆದುಕೊಳ್ಳುತ್ತಿದ್ದಳು. ಅವಳ ಗುರುಭಕ್ತಿಯಲ್ಲಿ ಯಾವ ಕುಂದಕವೂ ಕಾಣುತ್ತಿರಲಿಲ್ಲ. ವಿಶ್ವೇಶ್ವರನ ಮನವು ಅದರಿಂದ ಕುಣಿಯುತ್ತಿರಲಿಲ್ಲ. ಅವನಿಗೆ ಬೇಕಾಗಿದ್ದುದು ಮಲ್ಲಿಗೆಯ ಪ್ರೇಮ. ಅವನು ಈ ಪ್ರೇಮ ಪಿಪಾಸೆಯಿಂದ ಬಾಡಿಹೋಗಿದ್ದನು. ಒಂದು ದಿನ ಸಂಧ್ಯಾಕಾಲದಲ್ಲಿ ವಿಶ್ವೇಶ್ವರನು ಮಲ್ಲಿಗೆಯ ಮನೆಗೆ ಬಂದು ದರ್ಶನವಿತ್ತನು. ಅಂದು ಮಲ್ಲಿಗೆಯ ತಾಯಿಯ ಅವಸ್ಥೆಯು ತೀರ ದಾರುಣವಾಗಿದ್ದಿತು. ಅವನು ಮಲ್ಲಿಗೆಯ ಖೇದವನ್ನು ನೋಡಿ ಸಹಿಸಲಾರದೇ ಉಪ್ಪರಿಗೆಯಮೇಲೆ ಹೋಗಿ ಲೋಡುದಿಂಬುಗಳನ್ನು ಒರಗಿಕೊಂಡು ಅರ್ಧಶಾಯಿತಾವಸ್ಥೆ ಯಲ್ಲಿ ಮಲಗಿಕೊಂಡನು. ಎದುರಿಗಿದ್ದ ತಂಬೂರಿಯಮೇಲೆ ಅವನ ದೃಷ್ಟಿಯು ಬಿದ್ದಿತು. ಅವನು ಎದ್ದು ತಂಬೂರಿಯನ್ನು ತೆಗೆದುಕೊಂಡು

ಬಂದು ಆ ತಂಬೂರಿಯನ್ನು ತೊಡೆಯಮೇಲಿಟ್ಟುಕೊಂಡು ಕುಳಿತನು. ಅವನ ಮನದಲ್ಲಿ ರಾಗದ ಲಹರಿಯೆದ್ದಿತು. ಮುಕ್ತಕಂಠದಿಂದ ಹಾಡ ತೊಡಗಿದನು. ತೊಡೆಯಮೇಲ್ಲಿದ್ದ ತಂಬೂರಿಯು ಮಲ್ಲಿಗೆಯೆಂದು ಅವನಿಗೆ ಬೋಧೆಯಾಗುತ್ತಿದ್ದಿತು. ಅವನು ಹಾಡುತ್ತ ಹಾಡುತ್ತ ಆ ರಾಗಾವೇಶದಲ್ಲಿ ಪ್ರೇಮೋನ್ಮಾದದಲ್ಲಿ ಮೈಮರೆತಿದ್ದನು. ಸಂಗೀತದ ಅಲೆಗಳು ಆ ಉಪ್ಪರಿಗೆಯನ್ನೆಲ್ಲಾ ತುಂಬಿದ್ದುವು. ಕೆಳಗೆ ರತ್ನಶಯ್ಯೆ ಯಲ್ಲಿ ಮಲಗಿದ್ದ ಮಲ್ಲಿಗೆಯ ತಾಯಿಗೆ ಕಣ್ಣಿಗೆ ಜೋಂಪು ಹತ್ತಿದ್ದಿತು. ಮಲ್ಲಿಗೆಯ ಕಿವಿಗಳಲ್ಲಿ ವಿಶ್ವೇಶ್ವರನ ಸಂಗೀತವು ಹೊಕ್ಕು ಅವಳನ್ನು ಉಪ್ಪರಿಗೆಯಮೇಲೆ ಆಕರ್ಷಿಸಿದ್ದಿತು. ಮಲ್ಲಿಗೆಯು ಮೇಲಕ್ಕೆಬಂದು ವಿಶ್ವೇಶ್ವರನ ಮುಂದೆ ಕೀಲುಬೊಂಬೆಯಂತೆ ಕುಳಿತುಬಿಟ್ಟಿದ್ದಳು ಅವಳು ಆ ಸಂಗೀತದಲ್ಲಿ ತನ್ಮಯಳಾಗಿದ್ದಳು ವಿಶ್ವೇಶ್ವರನು ಸಂಗೀತ ವನ್ನು ಮುಗಿಸಿ ಕಣ್ತೆರೆದು ಎದುರಿಗೆ ಕುಳಿತಿದ್ದ ದಿವ್ಯಸುಂದರಮೂರ್ತಿ ಯನ್ನು ನೋಡಿದನು.

"ಮಲ್ಲಿಗೆ! ನೀನಾವಾಗ ಇಲ್ಲಿಗೆಬಂದೆ?" ಎಂದು ಕೇಳಿದನು.

ಮಲ್ಲಿಗೆಯು "ಗುರುದೇವಾ! ಯಾವಾಗ ಬಂದೆನೋ ನಾನರಿಯೆ ನಾನು ನಿಮ್ಮ ಗಾನದಲ್ಲಿ ಮುಳುಗಿದ್ದೆ. ಇಂತಹ ಅದ್ಭುತ ಗಾನವನ್ನು ನಾನೆಂದೂ ನಿಮ್ಮ ಬಾಯಿಯಿಂದ ಕೇಳಿಲ್ಲ. ಇಂದು ನಿಮಗಿಷ್ಟು ಆನಂದಕ್ಕೆ ಕಾರಣವೇನು?" ಎಂದು ಪ್ರಶ್ನೆಮಾಡಿದಳು.

ವಿಶ್ವೇಶ್ವರನು "ದೇವಿ! ನನ್ನ ಸಂಗೀತವು ಹೇಗಿದ್ದಿತೋ ನಾನ ರಿಯೆ! ಆದರೆ ಇಂದು ಆ ಸಂಗೀತದ ಪೂರ್ಣಾನಂದವು ನನ್ನ ಮನ ಸನ್ನು ಆವರಿಸಿದ್ದಿತೆಂಬುದು ನಿಜ. ನಾನು ಇನ್ನು ಮೇಲೆ ಈ ತಂಬೂರಿಯನ್ನು ಹಿಡಿಯುವುದಿಲ್ಲವೆಂದು ಶಪಥ ಮಾಡಿದ್ದೇನೆ. ನೋಡು! ರಮಣಿ ನನ್ನ ವೀಣೆಯತಂತಿಯು ನೀನು. ನೀನು ಕೈತಪ್ಪಿಹೋಗಿರುವೆ ನಿನ್ನ ಆಶೆಯನ್ನು ತೊರೆಯಲು ನಾನೆಷ್ಟು ಪ್ರಯತ್ನಪಟ್ಟೆ. ನಿನ್ನ ಸಾನ್ನಿಧ್ಯದಲ್ಲಿದ್ದು ಈ ದುರ್ದಮನೀಯವಾದ ಮನವನ್ನು ಶಮನಗೊಳಿಸ

ಲಾರೆ. ಇನ್ನು ಈ ಊರನ್ನು ಪರಿತ್ಯಜಿಸುತ್ತೇನೆ. ಕಾಷಾಯವನ್ನು ಧರಿಸಿ ದೇಶದೇಶಗಳಲ್ಲಿ ಅಲೆಯುತ್ತೇನೆ. ನೀನೊಮ್ಮೆ ಕಡೆಯಬಾರಿ ನಿನ್ನ ಆಲಿಂಗನವನ್ನು ಕರುಣಿಸು. ಈ ಜನ್ಮದಲ್ಲಿ ಇದೇ ಕಡೆಯಸುಖ. ಆ ಸುಖವನ್ನು ಆಮರಣಾಂತ ಮನದಲ್ಲಿ ನೆನಪಿಟ್ಟಿರುತ್ತೇನೆ" ಎಂದು ಹೇಳಿ ಮಲ್ಲಿಗೆಯನ್ನು ಎರಡು ಕೈಗಳಿಂದಲೂ ಬಿಗಿದು ಆಲಿಂಗಿಸಿ ಗಲ್ಲವನ್ನೆತ್ತಿ ಮುಖವನ್ನು ಚುಂಬಿಸಿದನು. ಕೆಳಗೆ ಮಲ್ಲಿಗೆಯ ತಾಯಿಯು ವ್ಯಾಧಿಯಿಂದ ಸಂಕಟಪಡುವ ಆರ್ತಧ್ವನಿಯು ಕೇಳಿ ಬಂದಿತು. ಇಬ್ಬರೂ ಭಯಂಕಿತವಾಗಿ ಬಾಹುಬಂಧನವನ್ನು ಬಿಟ್ಟು ಕೆಳಗೆ ಹೋಗಿ ಮಲ್ಲಿಗೆಯ ತಾಯಿಯ ಹಾಸಿಗೆಯ ಬಳಿಯಲ್ಲಿ ನಿಂತರು. ಮಲ್ಲಿಗೆಯ ತಾಯಿಯು ಕ್ಷಣಕ್ಷಣಕ್ಕೂ ಯಾತನೆಯಿಂದ ಮುಲುಕುತ್ತಿದ್ದಳು. ವಿಶ್ವೇಶ್ವರನು ಯಾವಾಗ ಅಲ್ಲಿಂದ ಹೊರಟು ಹೋದನೋ ಮಲ್ಲಿಗೆಯು ಅರಿಯಲಿಲ್ಲ. ಅವಳು ತಾಯಿಯ ಹಾಸಿಗೆಯ ಪಕ್ಕದಲ್ಲಿಯೇ ಕುಳಿತು ಕೃಶವಾದ ತಾಯಿಯ ಕೈಕಾಲುಗಳನ್ನು ಸವರುತ್ತಾ ಸಂತೈಸುತ್ತಿದ್ದಳು

ಹಾಗೆಯೇ ಬೆಳಗಾಯಿತು. ಮಲ್ಲಿಗೆಯು ಎದ್ದುಹೋಗಿ ಸ್ನಾನಾದಿಗಳನ್ನು ತೀರಿಸಿ ದೇವರ ಮುಂದೆ ದೀಪವನ್ನು ಹಚ್ಚಿಟ್ಟು ಪುಷ್ಪಗಳನ್ನು ಕೈಯಲ್ಲಿ ತೆಗೆದುಕೊಂಡು ಹೋಗಿ ತಂಬೂರಿಯ ಮೇಲೆ ಅಲಂಕರಿಸಿದಳು. ಆ ತಂಬೂರಿಯ ಕೊನೆಯಲ್ಲಿ ಒಂದು ಪತ್ರವು ಸಿಕ್ಕಿಸಲ್ಪಟ್ಟಿದ್ದಿತು. ಅವಸರಅವಸರವಾಗಿ ಮಲ್ಲಿಗೆಯು ಆ ಪತ್ರವನ್ನು ಬಿಚ್ಚಿ ಓದಿದಳು. ಆ ಪತ್ರಿಕೆಯ ಪರಿಯು ಹೀಗಿದ್ದಿತು.

ಪ್ರಾಣಾಧಿಕೆ ! ಮಲ್ಲಿಗೆ !

ನಾನು ಯಾವ ಮಾತುಗಳನ್ನು ಬಾಯಿನಲ್ಲಿ ಆಡಲಾರದೆ ಮನದಲ್ಲಿಯೇ ಮರುಗುತ್ತಿದ್ದೆನೋ ಅದನ್ನು ಇಲ್ಲಿ ಬರೆದಿಟ್ಟಿದ್ದೇನೆ. ನಾನು ನಿನಗೆ ಸಂಗೀತ ಕಲೆಯನ್ನು ಕಲಿಸಿದ ವಿದ್ಯಾಗುರು

ವೆಂಬುದು ನಿಜ! ಸಂಗೀತವಿದ್ಯೆಯನ್ನು ಮಾತ್ರವೇ ಅಲ್ಲದೆ ಕಾವ್ಯ ನಾಟಕಾಲಂಕಾರಗಳನ್ನೂ ನಿನಗೆ ಕಲಿಸಿದೆ. ವಿದ್ಯಾ ಗುರುವಿನೊಡನೆ ಪ್ರೇಮದ ಭೋಗಗಳನ್ನು ಅನುಭವಿಸ ಬಾರದೆಂದು ನಿನ್ನ ಮನಸ್ಸಿನಲ್ಲಿದ್ದ ಶಂಕೆಯನ್ನು ನಿವಾರಿಸಲು ನಾನೆಷ್ಟೋ ಸಾಹಸಮಾಡಿದೆ. ವತ್ಸರಾಜನು ವಾಸವದತ್ತೆಯ ಗುರುವಲ್ಲವೇ? ಅದೇ ನನ್ನ ಆದರ್ಶ. ನಿನ್ನ ಆದರ್ಶವು ಯಾವುದೋ ನಾನರಿಯೆ. ಬಹುಕಾಲ ಬಯಸಿ ಹಾರೈಸಿ ನಿನ್ನ ಪ್ರೇಮಸುಖವನ್ನು ನಾನು ಪಡೆದೆ. ನೀನು ನನ್ನೊಡನೆಯೇ ಸರ್ವದಾ ಇರಬೇಕೆಂದು ನನ್ನ ಆಶೆಯಿತ್ತು. ಅದಕ್ಕೆ ವಿಘ್ನ ವಾಗಿದ್ದವಳು ನಿನ್ನತಾಯಿ. ಅವಳಮೇಲೆ ನನಗೆಷ್ಟು ಕ್ರೋಧ ದ್ವೇಷಗಳಿದ್ದುವೋ ಅದನ್ನು ನಾನು ಬಣ್ಣಿಸಲಾರೆ ನಿನ್ನ ತಾಯಿಯು ನಿನ್ನನ್ನು ಪ್ರೇರಿಸಿ ಶ್ರೀರಂಗಪಟ್ಟಣಕ್ಕೆ ಕರೆ ದೊಯ್ದಳು. ಅಲ್ಲಿಯ ಕಥೆಯನ್ನು ನಾನು ಚಿತ್ರಿಸಲಾರೆ. ನೀನು ರಾಜನ ಬಂಗಾರವವಕ್ಷಿಯಾಗಿದ್ದೆಯೆಂದು ಜನರು ಪ್ರತ್ಯಕ್ಷವಾಗಿ ಹೇಳಿಕೊಳ್ಳುತ್ತಾರೆ. ಮಂತ್ರಿ ಪಂಡಿತಾರಾಧ್ಯನ ಪ್ರೇಯಸಿಯಾಗಿದ್ದೆ ಎಂದು ಕೇಳಿದ್ದೇನೆ. ನೀನು ಕುಲದಲ್ಲಿ ವೇಶ್ಯೆ. ಪಲವಾರು ನಾಯಕರನ್ನು ನೀನು ಸೇರಿದರೆ ನಿನ್ನ ಕುಲಧರ್ಮಕ್ಕೆ ಕುಂದಿಲ್ಲ. ಆದರೆ ನಾನು ಮನವಲ್ಲಿ ಬಯಸಿ ಯೋಚಿಸಿ ಪಡೆದ ವಸ್ತುವು ವೇಶ್ಯೆಯಲ್ಲ. ನೀನು ಕಲಿತ ವಿದ್ಯೆಯೂ ವೇಶ್ಯೆಯ ವಿದ್ಯೆಯಲ್ಲ. ನೀನು ನನಗಿತ್ತ ಪ್ರೇಮ ಪುರಸ್ಕಾರವು ವೇಶ್ಯೆಯ ಚಂಚಲ ಪುರಸ್ಕಾರವಲ್ಲ ಮಹಾ ವಿಷ್ಣುವಿನ ಹೃದಯದಲ್ಲಿರುವ ಕೌಸ್ತುಭಮಣಿಯಂತೆ ನಿನ್ನನ್ನು ಹೃದಯಸೇವಿಯಾಗಿ ಪರಿಗ್ರಹಿಸಿದೆ. ನೀನು ಲಕ್ಷ್ಮಿಯಂತೆ ಚಂಚಲಳಾದೆ. ನಿನ್ನನ್ನು ಪರಿಗ್ರಹಿಸುವಾಗ ಎಂತಹ ತಪಸ್ಸು ಮಾಡಿದೆನೋ ನಿನ್ನನ್ನು ವಿಸರ್ಜನೆ ಮಾಡುವಾಗಲೂ ಅಷ್ಟೇ

ಕಠೋರ ಪ್ರತಿಜ್ಞೆಯನ್ನು ಮಾಡಿದ್ದೇನೆ. ಇದೋ ಇಂದೇ ಕಡೆಯದರ್ಶನ. ಇನ್ನು ನೀನು ನನ್ನನ್ನು ಈ ಜಗತ್ತಿನಲ್ಲಿ ನೋಡ ಲಾರೆ. ಆದರೆ ನನ್ನ ಹೃದಯದ ಜೀವರತ್ನವನ್ನು ಕಿತ್ತುಕೊಂಡ ರಾಜನನ್ನೂ, ಮಂತ್ರಿಯನ್ನೂ ಸೇಡುತೀರಿಸಿಕೊಳ್ಳದೇ ಬಿಡ ಲಾರೆ. ನನ್ನ ಜೀವನದ ಕಡೆಯ ಹಂತವು ಪ್ರತೀಕಾರ. ದೇವಿ, ನೀನು ನನ್ನಿಂದ ಮುಕ್ತಳಾಗಿರುವೆ.

ಇತಿ ವಿಶ್ವೇಶ್ವರ.

ಮಲ್ಲಿಗೆಯು ಕಾಗದವನ್ನು ಆತುರವಾಗಿ ಓದಿದಳು. ಆ ಕಾಗದ ದಲ್ಲಿದ್ದ ವಿಷಯಗಳನ್ನು ಪರ್ಯಾಲೋಚನೆ ಮಾಡಲು ಅವಳಿಗೆ ವ್ಯವ ಧಾನವಿರಲಿಲ್ಲ. ವಿಶ್ವೇಶ್ವರನ ಅಸಮಾಧಾನದ ಸ್ಥಿತಿಯು ಅವಳಿಗೆ ಮೊದಲೇ ಗೋಚರವಾಗಿದ್ದಿತು. ವಿಶ್ವೇಶ್ವರನಲ್ಲಿ ಅವಳಿಗೆ ವಿಶೇಷ ಭಕ್ತಿಯಿದ್ದಿತು. ಆದರೆ ಎಂದೂ ಅವಳು ಅವನನ್ನು ಪ್ರೇಮಾವೇಷ ಪೂರಿತಳಾಗಿ ನೋಡಿಯೇ ಇರಲಿಲ್ಲ. ಆದುದರಿಂದ ಪ್ರೇಮಭಂಗವು ಆದಂತೆ ಆಗಲಿಲ್ಲ. ಅವಳು ತಾಯಿಯ ಅಸ್ವಾಸ್ಥ್ಯದಲ್ಲಿ ವ್ಯಗ್ರಚಿತ್ತ ಳಾಗಿದ್ದಳು. ವಿಶ್ವೇಶ್ವರನ ಕಾಗದವನ್ನು ಮಡಿಸಿ ಒಂದು ಸಂದೂಕ ದಲ್ಲಿಟ್ಟು ಕೆಳಗಿಳಿದು, ತಾಯಿಯ ಹಾಸಿಗೆಯ ಸಮೀಪದಲ್ಲಿ ಬಂದು ಕುಳಿತಳು. ಅಷ್ಟು ಹೊತ್ತಿಗೆ ವೈದ್ಯರು ಬಂದು ರೋಗಿಯನ್ನು ನೋಡಿ ಔಷಧಿಗಳನ್ನು ಕೊಟ್ಟರು ಮಲ್ಲಿಗೆಯ ತಾಯಿಯು ಆ ಔಷಧವನ್ನು ಸೇವಿಸುತ್ತಾ, "ಮಗಳೇ! ಈ ಔಷಧಿಗಳಿಂದ ನನಗೇನು ಫಲ ? ನಾನು ಇಹಲೋಕದ ಆಶೆಯನ್ನು ಸಂಪೂರ್ಣವಾಗಿ ತ್ಯಜಿಸಿದ್ದೇನೆ. ನನ್ನ ಕಡೆಯ ಆಶೆಯೆಂದರೆ ಗರಳಪುರಿಯಲ್ಲಿ ಹೋಗಿ ಆ ಪರದೇವನ ಸನ್ನಿಧಿ ಯಲ್ಲಿ ಪ್ರಾಣವನ್ನೊಪ್ಪಿಸಬೇಕೆಂಬುದೇ ಆಗಿದೆ. ಆ ಕೋರಿಕೆಯನ್ನು ಈಡೇರಿಸಿಕೊಡಲಾರೆಯಾ ?" ಎಂದು ದೈನ್ಯದಿಂದ ಕೇಳಿಕೊಂಡಳು. ಮಲ್ಲಿಗೆಯ ಕಣ್ಣುಗಳಲ್ಲಿ ಕಂಬನಿದುಂಬಿತು. ವೈದ್ಯರು ಮಲ್ಲಿಗೆಯನ್ನು

ಸಮಾಧಾನಗೊಳಿಸುತ್ತಾ, "ಅಮ್ಮಣ್ಣಿ! ಆ ವೃದ್ಧೆಯು ಹೇಳುವ ಮಾತು
ಗಳು ಸರಿಯಾಗಿವೆ. ನೀನು ಈಕೆಯನ್ನು ಗರಳಪುರಿಗೆ ಕರೆದೊಯ್ದರೆ
ಈಕೆಯ ಜೀವನವು ಸಾರ್ಥಕವಾದಂತಾಗುತ್ತದೆ" ಎಂದು ಹೇಳಿದರು.

ಮಲ್ಲಿಗೆಯು "ಪಂಡಿತರೇ! ಗರಳಪುರಿಗೆ ಈಕೆಯನ್ನು ಕರದೊ
ಯ್ಯುವುದು ಕಷ್ಟವೇನೂ ಇಲ್ಲ. ಆದರೆ ನನಗಿರುವ ಸರ್ವಸ್ವವೆಂದರೆ
ಈ ತಾಯಿ. ತಾವು ನಂಜನಗೂಡಿನಲ್ಲಿಯೇ ಇದ್ದು ಈ ತಾಯಿಗೆ
ಔಷಧಿಗಳನ್ನು ಕೊಟ್ಟು ಗುಣಪಡಿಸಬೇಕೆಂದು ನನ್ನ ಪ್ರಾರ್ಥನೆಯಿದೆ.
ತಮಗೆ ಬೇಕಾದಷ್ಟು ದ್ರವ್ಯವನ್ನು ಕೊಡುತ್ತೇನೆ" ಎಂದು ಕಣ್ಣೀರಿ
ಡುತ್ತಾ ಪ್ರಾರ್ಥಿಸಿದಳು. ವೈದ್ಯರು ಗರಳಪುರಿಗೆ ಹೊರಡಲು ಒಪ್ಪಿ
ಕೊಂಡರು. ಅವರು ಈ ರೋಗಿಯನ್ನು ಡೋಲಿಯಲ್ಲಿ ಕರೆದೊಯ್ಯ
ಬೇಕೆಂದೂ ಗಾಡಿಯಮೇಲೆ ಕರೆದೊಯ್ಯುವುದು ಅಸಾಧ್ಯವೆಂದೂ ತಿಳಿ
ಸಿದರು. ಅದಕ್ಕೆ ತಕ್ಕ ಏರ್ಪಾಡುಗಳೆಲ್ಲಾ ಒಂದೇ ದಿನದಲ್ಲಿ ಸಿದ್ಧ
ವಾಯಿತು. ಮಲ್ಲಿಗೆಯು ಮನೆಯ ಕಾವಲಿಗೆ ತಕ್ಕ ಜನರನ್ನು ಏರ್ಪ
ಡಿಸಿ, ಹಣಕಾಸುಗಳನ್ನು ಬೇಕಾದ ಸಾಮಾನು ಸರಂಜಾಮುಗಳನ್ನು
ಗಾಡಿಗಳಲ್ಲಿ ಸಾಗಿಸಿಕೊಂಡು ಹೊರಟಳು. ವೈದ್ಯರು ಕುಟುಂಬ
ಸಮೇತ ಗರಳಪುರಿಗೆ ಪ್ರಯಾಣಮಾಡಿದರು.

ಗರಳಪುರಿಯಲ್ಲಿ ದೇವಾಲಯದ ಸಮೀಪದಲ್ಲಿ ಕೌಂಡಿನ ಎಂಬ
ಒಂದು ಪರ್ವತ ಝರಿಯು ಹರಿಯುತ್ತದೆ ಆ ಝರಿಯ ಪಕ್ಕದಲ್ಲಿ
ಒಂದು ಛತ್ರವಿದ್ದಿತು ಆ ಛತ್ರವು ಒಬ್ಬ ಮಹಂತಯ್ಯನ ಅಧಿಕಾರ
ದಲ್ಲಿದ್ದಿತು. ಆ ಮಹಂತನನ್ನು ಕೇಳಿಕೊಂಡು ಅಲ್ಲಿ ಮಲ್ಲಿಗೆಯು
ವಸತಿಯನ್ನೇರ್ಪಡಿಸಿಕೊಂಡಳು. ಸಮೀಪದಲ್ಲಿಯೇ ಅಗ್ರಹಾರ
ವಿದ್ದಿತು. ಅಲ್ಲಿ ಒಬ್ಬ ಬ್ರಾಹ್ಮಣರ ಮನೆಯಲ್ಲಿ ವೈದ್ಯರಿಗೆ ಆವಾಸ
ವನ್ನು ಏರ್ಪಡಿಸಿದಳು. ನಾಲ್ಕಾರು ದಿನಗಳಲ್ಲಿ ಮಲ್ಲಿಗೆಯ ತಾಯಿಗೆ
ಸ್ವಲ್ಪ ಗುಣಮುಖವಾದಂತೆ ಕಂಡಿತು. ವೈದ್ಯರ ಸಂತೋಷ ಮತ್ತು
ಹೆಮ್ಮೆಗಳಿಗೆ ಪಾರವೇ ಇಲ್ಲ. ಮಲ್ಲಿಗೆಗೂ ಪರಮಾನಂದವಾಯಿತು.

ಮಲ್ಲಿಗೆಯ ತಾಯಿಯು ದೇವಾಲಯಕ್ಕೆ ಕರೆದುಕೊಂಡು ಹೋಗಿ ಈಶ್ವರನ ದರ್ಶನಮಾಡಿಸಬೇಕೆಂದು ಹಠಹಿಡಿದಳು ವೈದ್ಯರು ಇನ್ನೊಂದುವಾರ ಕಳೆದಮೇಲೆ ದೇವಾಲಯಕ್ಕೆ ಕರೆದೊಯ್ಯಬಹುದೆಂದು ಹೇಳಿದರು. ವೃದ್ಧೆಯು ಒಪ್ಪಲಿಲ್ಲ. ಹಠಮಾಡಿದಳು. ಕೊನೆಗೆ ಸಮೀಪದಲ್ಲಿದ್ದ ತಮ್ಮಡಿಗಳು ರೋಗಿಗೆ ಏನೂ ಶ್ರಮವಾಗದಂತೆ ತಾವು ದೇವರ ದರ್ಶನ ಮಾಡಿಸಿಕೊಂಡು ಬರುವುದಾಗಿ ಧೈರ್ಯಹೇಳಿದರು. ತಾವು ಇಂತಹ ಎಷ್ಟೋ ರೋಗಿಗಳನ್ನು ದೇವಾಲಯಕ್ಕೆ ಕರೆದೊಯ್ದಿರುವುದಾಗಿಯೂ ಭವರೋಗ ವೈದ್ಯನಾದ ನಂಜುಂಡನ ದರ್ಶನದಿಂದಲೇ ಎಷ್ಟೋ ರೋಗಿಗಳ ರೋಗ ಪರಿಹಾರವಾಗಿದೆಯೆಂದೂ ಭಗವಂತನ ಮಹಿಮೆಯನ್ನು ಕೊಂಡಾಡಿದರು. ಬಹು ಪ್ರಯಾಸದಿಂದ ಆ ವೃದ್ಧೆಗೆ ಸ್ನಾನಮಾಡಿಸಿ ದೇವತಾ ದರ್ಶನಕ್ಕೆ ಆ ತಮ್ಮಡಿಗಳು ಕರೆದೊಯ್ದರು. ಅವರಿಗೆ ಕೈತುಂಬಾ ದಾನ ದಕ್ಷಿಣೆಗಳು ಸಿಕ್ಕವು. ವೃದ್ಧೆಯು ಆನಂದದಿಂದ ಹಿಗ್ಗಿಹೋದಳು. ಇದೇ ನನ್ನ ಕಡೆಯ ಇಷ್ಟಾರ್ಥ ಎಂದು ಹೇಳುತ್ತಾ ಸಂತೋಷದಿಂದ ಹಿಗ್ಗಿದಳು. ತಮ್ಮಡಿಗಳು ವೃದ್ಧೆಯನ್ನು ಹಿಂದಕ್ಕೆ ಕರೆತಂದು ಹಾಸಿಗೆಯಲ್ಲಿ ಮಲಗಿಸಿದರು.

ಮಧ್ಯಾಹ್ನದ ಹೊತ್ತಿಗೆ ಜ್ವರವೇಗವು ಮಿತಿಮೀರಿತು. ವೈದ್ಯರು ಸಮೀಪದಲ್ಲಿಯೇ ಕುಳಿತು ನಾಡಿಗಳನ್ನು ಹಿಡಿದು ನೋಡುತ್ತಿದ್ದರು. ಸಂಧ್ಯಾಕಾಲದ ಹೊತ್ತಿಗೆ ಸನ್ನಿಯು ಮುಚ್ಚಿಕೊಂಡಿತು. ಮುದುಕಿಯು ದೀಪಹಚ್ಚುವ ಸಮಯದಲ್ಲಿ ಮಗಳನ್ನು ಸಮೀಪಕ್ಕೆ ಕರೆದು ಅವಳ ಬಲಗೈಯನ್ನು ತೆಗೆದು ಹಣೆಗೆ ಒತ್ತಿಕೊಂಡು “ ಮಗಳೇ ! ನಮ್ಮ ಕುಲವು ಹೀನಕುಲ. ನಾವು ಪಾಪಕರ್ಮಗಳಲ್ಲಿಯೇ ಹುಟ್ಟಿ ಬೆಳೆದಿದ್ದೇವೆ. ನೀನು ದೇವರನ್ನು ನಂಬು. ಐಶ್ವರ್ಯ, ಚಿನ್ನ-ಬೆಳ್ಳಿಗಳನ್ನು ನಂಬಬೇಡ. ಈ ಜೀವನದಲ್ಲಿ ಅವೆಲ್ಲವೂ ನಿಸ್ಸಾರವಾದವುಗಳು. ಭಗವದ್ಭಕ್ತಿಯೊಂದೇ ಸಾರಭೂತವಾದುದು ” ಎಂದು ಹೇಳಿ ಕಣ್ಣುಮುಚ್ಚಿದಳು. ವೈದ್ಯರು ಸಮೀಪದಲ್ಲಿಯೇ ಕುಳಿತಿದ್ದರು.

ತಮ್ಮಡಿಗಳೂ ಮಹಂತರೂ ಭಗವಂತನೇ ಅವಳ ಬಾಯಿಯಲ್ಲಿ ನುಡಿಸಿ ದ್ದಾನೆಂದು ಪ್ರಶಂಸೆ ಮಾಡಿದರು. ಜ್ವರವೇಗವು ಮತ್ತೂ ಪ್ರಬಲ ವಾಯಿತು. ವೈದ್ಯರು ಒಂದೆರಡು ಕುಪ್ಪಿಗೆಯ ಮಾತ್ರೆಗಳನ್ನು ತೇದು ಕುಡಿಸಿದರು. ಇದು ಕೊನೆಯ ಔಷಧ ಈ ಔಷಧದಿಂದ ಗುಣ ವಾಗಲೇಬೇಕು. ಇಲ್ಲದಿದ್ದರೆ ಇದೇ ಕೊನೆ ಎಂದು ಖಡಾಖಂಡಿತವಾಗಿ ಹೇಳಿ ತಮ್ಮ ಬಿಡಾರಕ್ಕೆ ಹೊರಟುಹೋದರು. ಮಲ್ಲಿಗೆಯು ತಾಯಿಯ ಸಮೀಪದಲ್ಲಿಯೇ ಉಪಚರಿಸುತ್ತಾ ಕುಳಿತಿದ್ದಳು. ರಾತ್ರಿಯೆಲ್ಲಾ ಬಹುಕಷ್ಟದಿಂದ ಕಳೆಯಿತು. ಬೆಳಗಿನ ಝಾವದಲ್ಲಿ ಉತ್ಕ್ರಮಣ ಕಾಲವು ಪ್ರಾಪ್ತವಾಯಿತು. ತಮ್ಮಡಿಗಳು ಗಂಗಾಜಲವನ್ನು, ಈಶ್ವರನ ತೀರ್ಥವನ್ನು ತಂದುಕೊಟ್ಟರು. ಮಲ್ಲಿಗೆಯು ತಾಯಿಯ ಬಾಯಿಗೆ ಆ ಗಂಗಾತೀರ್ಥವನ್ನು ಬಿಟ್ಟಳು. ಪ್ರಾಣವು ಹಾರಿಹೋಯಿತು. ಮಹಂತನು ಬಂದು ಆ ವೃದ್ಧೆಗೆ ಮುಕ್ತಿಯೇ ಲಭಿಸಿತೆಂದು ಹೇಳಿದನು. ಪ್ರಾತಃಕಾಲ ಸೂರ್ಯೋದಯವಾದಮೇಲೆ ಆ ಕಳೇಬರಕ್ಕೆ ತಮ್ಮಡಿ ಗಳು ಸಂಸ್ಕಾರಗಳನ್ನೆಲ್ಲಾ ಮಾಡಿಸಿದರು.

ಮಲ್ಲಿಗೆಯು ತಾನು ತಂದಿದ್ದ ಹಣವನ್ನೆಲ್ಲಾ ಧಾರಾಳವಾಗಿ ಖರ್ಚುಮಾಡಿ ತಾಯಿಯ ಸಂಸ್ಕಾರಗಳನ್ನು ಪೂರೈಸಿದಳು. ಜಂಗಮರಿ ಗೆಲ್ಲಾ ಭೋಜನಮಾಡಿಸಿದಳು. ಮಹಂತನಿಗ ದಕ್ಷಿಣೆಯನ್ನರ್ಪಿಸಿ ದಳು. ಅಲ್ಲಿಂದ ಮೈಸೂರಿಗೆ ತನ್ನ ಮನೆಗೆ ಹಿಂತಿರುಗಿದಳು.

ಮಲ್ಲಿಗೆಯು ಈಗ ಏಕಾಕಿನಿ. ಅವಳಿಗೆ ಪ್ರತಿದಿನವೂ ಊಟ ಮಾಡುವಾಗ ಮಲಗುವಾಗ ಮನೆಯಲ್ಲಿ ಓಡಾಡುವಾಗ ತಾಯಿಯ ನೆನಪು ಬರುತ್ತಿದ್ದಿತು ಒಂದೊಂದು ಬಾರಿ ಒಬ್ಬಳೇ ಕುಳಿತು ಕಣ್ಣೀರಿಡುತ್ತಿದ್ದಳು. ಮಹಡಿಯ ಮೇಲೆ ಹೋಗಿ ತಂಬೂರಿಯನ್ನು ತೆಗೆದುಕೊಂಡು ತಂತಿಯನ್ನು ಮಿಾಟಿ ರಾಗಾಲಾಪನೆ ಮಾಡಹೊರಟಾಗ ಗುರುವಿನ ನೆನಪು ಬರುತ್ತಿದ್ದಿತು. ವಿಶ್ವೇಶ್ವರನಲ್ಲಿ ತಾನು ಅಪರಾಧವನ್ನು ಮಾಡಿದೆನೇ ? ಎಂದುಕೊಳ್ಳುತ್ತಿದ್ದಳು ಅವನ ಕಾಗದದ ವಾಕ್ಯಗಳು ಎದುರಿನಲ್ಲಿ ಕೆತ್ತಿದಂತೆ ಭಾಸವಾಗುತ್ತಿದ್ದವು. ಹಾಗೆಯೇ ಸಮಾಧಾನ ಮಾಡಿಕೊಂಡು ಸಂಗೀತವನ್ನು ಹಾಡಿ ಮುಗಿಸುತ್ತಿದ್ದಳು. ತಾಳವು ತಪ್ಪುತ್ತದೆ. ಗಾನವು ರಸಭರಿತವಾಗಿಲ್ಲ ಎಂದು ತಾನೇ ನಾಚುತ್ತಿದ್ದಳು. ಗುರುವಿನ ಶಾಪ ಎಂದು ಭಾವಿಸಿಕೊಂಡು ನಿಟ್ಟುಸಿರು ಬಿಡುತ್ತಿದ್ದಳು. ಇವಳಿಗೆ ಏಕಾಂತವಾಸವು ಬೇಸರಿಕೆಯನ್ನುಂಟು ಮಾಡುತ್ತಿದ್ದಿತು. ಪಕ್ಕದ ಮನೆಯಲ್ಲಿ ಚಾಮುಂಡಿ ಎಂಬುವಳೊಬ್ಬ ಬಾಲ್ಯಸ್ನೇಹಿತಳಿದ್ದಳು. ತಾಯಿಯಿದ್ದಾಗ ಅವಳ ಸ್ನೇಹವು ತಾಯಿಗೆ ಪ್ರಿಯವಾಗಿರಲಿಲ್ಲ. ತಾಯಿಯ ಮರಣಾನಂತರ ಮಲ್ಲಿಗೆಯು ಚಾಮುಂಡಿಯ ಸ್ನೇಹವನ್ನು ಹೆಚ್ಚು ಹೆಚ್ಚಾಗಿ ಬೆಳೆಸಿದ್ದಳು. ಚಾಮುಂಡಿಯು ಪ್ರತಿದಿನವೂ ರಾತ್ರಿ ಮಲ್ಲಿಗೆಯ ಜೊತೆಯಲ್ಲಿ ಮಲಗುವುದಕ್ಕೆ ಬರುತ್ತಿದ್ದಳು. ಅವಳೊಡನೆ ತನ್ನ ಕಥೆಗಳನ್ನೆಲ್ಲಾ ಸ್ವಲ್ಪಸ್ವಲ್ಪವಾಗಿ ಹೇಳಿದ್ದಳು. ಒಂದುದಿನ ರಾತ್ರಿ ಬಹಳ ಹೊತ್ತಾಗಿದ್ದರೂ ಚಾಮುಂಡಿಯು ಮಲಗುವುದಕ್ಕೆ ಬಂದಿರಲಿಲ್ಲ. ಮಲ್ಲಿಗೆಗೆ ನಿದ್ರೆಹತ್ತಲಿಲ್ಲ. ಹಾಸಿಗೆಯಮೇಲೆ ಮಲಗಿಕೊಂಡೇ ಎಚ್ಚರವಾಗಿದ್ದಳು. ಅವಳಿಗೆ ಶ್ರೀರಂಗಪಟ್ಟಣದಲ್ಲಿ ತನ್ನ ಕಛೇರಿಗಳು ನಡೆದದ್ದು, ವಿದ್ವಾಂಸರ

ಪ್ರಶಂಸೆ, ರಾಜನ ಅಭಿಮಾನ ಎಲ್ಲವೂ ನೆನಪಿಗೆ ಬರುತ್ತಿದ್ದವು. ಅಷ್ಟರಲ್ಲಿ ಚಾಮುಂಡಿಯು ಬಂದು ಬೀದಿಯ ಬಾಗಿಲು ತಟ್ಟಿದಳು. ಕೆಳಗೆ ಹಜಾರದಲ್ಲಿ ಮಲಗಿದ್ದ ಪರಿಚಾರಿಕೆಯು ಎದ್ದು ಬಾಗಿಲು ತೆರೆದಳು. ಚಾಮುಂಡಿಯು ಕಾಲುಸಪ್ಪಳವಾಗದೇ ಮಹಡಿಯ ಮೆಟ್ಟಲುಗಳನ್ನು ಹತ್ತಿ ಹಜಾರಕ್ಕೆ ಬಂದು ಮಲ್ಲಿಗೆಯು ಮಲಗಿರುವುದನ್ನು ನೋಡಿದಳು. ದೀಪಸ್ತಂಭದಲ್ಲಿ ದೀಪವು ಉರಿಯುತ್ತಲೇ ಇದ್ದಿತು. ಸಮೀಪಕ್ಕೆ ಬಂದು ಬಗ್ಗಿ ನೋಡಿದಳು. ಮಲ್ಲಿಗೆಯು ಕಣ್ಣು ತೆರೆದುಕೊಂಡೇ ಇದ್ದಳು. ಆಗ ಚಾಮುಂಡಿಯು "ತಂಗಿ ! ನೀನೇಕೆ ನಿದ್ದೆಮಾಡಲಿಲ್ಲ ?" ಎಂದು ಪ್ರಶ್ನೆ ಮಾಡಿದಳು.

ಮಲ್ಲಿಗೆಯು " ನೋಡು ಚಾಮುಂಡಿ ! ನೀನು ಎಷ್ಟು ಹೊತ್ತಾದರೂ ಬರಲೇ ಇಲ್ಲ. ನನಗೆ ಏಕಾಕಿನಿಯಾಗಿ ನಿದ್ರಿಸಲು ಭಯ. ಆಮೇಲೆ ಹಾಗೆಯೇ ರಾಜಧಾನಿಯ ಕಡೆಗೆ ಮನಸ್ಸು ಹೋಯಿತು. ಆ ಆಲೋಚನೆಗಳಲ್ಲಿ ಆ ಸುಖಸ್ವಪ್ನಗಳಲ್ಲಿ ಎಷ್ಟು ರಾತ್ರಿಯು ಕಳೆಯಿತೋ ಅರಿವಿಲ್ಲದವಳಾಗಿದ್ದೇನೆ " ಎಂದು ಹೇಳಿದಳು.

ಚಾಮುಂಡಿಯು, " ತಾಯಿ ! ಇಂದು ಕೃಷ್ಣನ ಉತ್ಸವ. ಆ ಉತ್ಸವವನ್ನು ನೋಡುವುದಕ್ಕೆ ಹೋದೆ. ಹೊತ್ತಾಗಿ ಹೋಯಿತು. ಈಗ ರಾತ್ರಿ ಬಹಳ ವೇಳೆಯಾಗಿದೆ ಮಲಗಿಕೋ ನಿದ್ರಿಸೋಣ " ಎಂದು ಹೇಳಿ ತನ್ನ ಹಾಸಿಗೆಯನ್ನು ಬಿಚ್ಚಿಕೊಂಡು ಮಲಗಿದಳು. ಪುನಃ ಮಲ್ಲಿಗೆಯು ಮಾತಿಗೆ ಮೊದಲು ಮಾಡಿದಳು. " ಕೇಳು ಚಾಮುಂಡಿ. ನನಗೆ ಈ ಊರು ರುಚಿಸುತ್ತಿಲ್ಲ. ನಮ್ಮ ತಾಯಿಯಿರುವವರೆಗೆ ಈ ಊರು ಈ ಮನೆ ಬಹಳ ಪ್ರಿಯವಾಗಿದ್ದುವು. ಈಗ ಇಲ್ಲಿರಲು ಮನವಿಲ್ಲ. ಮತ್ತೆಲ್ಲಿಗಾದರೂ ಹೋಗಬೇಕೆಂದು ಯೋಚನೆ ಮಾಡುತ್ತಿದ್ದೇನೆ. ನೀನೇನು ಹೇಳುವೆ ?" ಎಂದು ಕೇಳಿದಳು.

" ತಂಗಿ ! ಮಲ್ಲಿಗೆ, ಅದುಸರಿ. ನೀನೆಲ್ಲಿಗೆ ಹೋಗುವೆ. ರಾಜಧಾನಿಗೆ ಹೋಗುವೆಯಾ ?" ಎಂದು ಪ್ರಶ್ನೆಮಾಡಿದಳು.

"ಅಹುದು! ರಾಜಧಾನಿಗೇ ಹೋಗಬೇಕೆಂದಿದ್ದೇನೆ. ನೀನೂ ಬರುವಿಯಷ್ಟೆ?" ಎಂದಳು.

ಚಾಮುಂಡಿಯು "ತಂಗಿ! ಸರಿಯಾಗಿಯೇ ಆಲೋಚನೆ ಮಾಡಿರುವೆ. ಮಹಾರಾಜರ ಅನುಗ್ರಹವು ನಿನ್ನಮೇಲೆ ಅತಿಶಯವಾಗಿದೆಯೆಂದು ಕೇಳಿದ್ದೇನೆ. ಹೆಂಗಸು ಎಷ್ಟೇ ಲಾವಣ್ಯವತಿಯಾಗಿರಲೀ ವಿದ್ಯಾವತಿಯಾಗಿರಲಿ ಐಶ್ವರ್ಯವಿರಲಿ ಪುರುಷನ ಆಶ್ರಯವಿಲ್ಲದಿದ್ದರೆ, ಎಲ್ಲವೂ ವ್ಯರ್ಥ: ನಿನಗೆ ಮಹಾರಾಜನ ಆಶ್ರಯವೇ ದೊರೆತಿರುವಾಗ ಯಾವುದಕ್ಕೆ ತಾನೇ ಕಡಿಮೆಯಾದೀತು?" ಎಂದಳು.

ಮಲ್ಲಿಗೆಯು, "ನಾನು ವಿದ್ಯವನ್ನು ಕಲಿತಿದ್ದೇನೆ. ಮಹಾರಾಜನು ವಿದ್ಯಾಪಕ್ಷಪಾತಿ. ಮಹಾರಾಜನ ಆದರ ವಿಶ್ವಾಸಗಳು ನನಗಿದೆಯೆಂಬುದು ನಿಜ. ಆದರೆ ರಾಜಾಸ್ಥಾನಕ್ಕೆ ಕರೆಬಾರವೇ ಹೋಗುವುದು ಮರ್ಯಾದೆಯಲ್ಲವೆಂದು ಸಂಕೋಚಪಡುತ್ತೇನೆ."

ಚಾಮುಂಡಿಯು ಆತುರವಾಗಿ "ತಂಗಿ! ಮಲ್ಲಿಗೆ, ನಾನೊಂದು ರಹಸ್ಯವನ್ನು ನಿನ್ನೊಡನೆ ಕೇಳಬೇಕೆಂದು ಬಹುದಿವಸದಿಂದ ಆಶೆಪಡುತ್ತಿದ್ದೇನೆ. ನೀನೇನೆಂದುಕೊಳ್ಳುವೆಯೋ ಎಂದು ಭಯಪಟ್ಟು ನನ್ನ ಆಸೆಯನ್ನು ಎಷ್ಟೋಬಾರಿ ನಾನೇ ನುಂಗಿಕೊಂಡಿದ್ದೇನೆ" ಎಂದಳು.

"ಕೇಳಕ್ಕಾ! ನನ್ನಲ್ಲಿ ಅಂತರಂಗವೇನಿದೆ? ಕೇಳು!" ಎಂದು ಮಲ್ಲಿಗೆಯು ಹೇಳಿದಳು.

ಚಾಮುಂಡಿಯು ನಾಲಿಗೆಯ ಕೊನೆಯಿಂದ ತುಟಿಗಳನ್ನು ಒರೆಸಿಕೊಳ್ಳುತ್ತಾ "ತಂಗಿ! ನಿನ್ನನ್ನು ಮಹಾರಾಜರು ಬಂಗಾರದಪತ್ನಿಯಾಗಿ ಸ್ವೀಕರಿಸುವರೆಂಬ ವದಂತಿಯಿದೆ ನೀನು ಬಂಗಾರದವಳೇ ಆಗಿಬಿಟ್ಟೆಯೆಂದೇ ಇಲ್ಲಿ ಜನರಾಡಿಕೊಳ್ಳುತ್ತಿದ್ದರು. ಅದೇಕೆ ತಪ್ಪಿಹೋಯಿತು?"

ಮಲ್ಲಿಗೆಯ ಮುಖವು ಕೆಂಪಾಯಿತು. "ಬಂಗಾರದ ಪತ್ನಿಯಾಗುವುದನ್ನು ನಾನರಿಯೆ. ಏಕೆ ತಪ್ಪಿಹೋಯಿತೋ ಅದೂ ಗೊತ್ತಿಲ್ಲ.

ನಾನೆಂದೂ ರಾಜನ ಪತ್ನಿಯಾಗಬೇಕೆಂದು ಬಯಸಿದವಳಲ್ಲ" ಎಂದಳು.

"ಮತ್ತೇಕೆ ಜನರು ಹಾಗೆ ಆಡಲಾರಂಭಿಸಿದರು ?" ಎಂದು ಚಾಮುಂಡಿಯು ಕೇಳಿದಳು

"ಅದು ಜನರ ಸ್ವಭಾವ. ಮಹಾರಾಜನು ನನ್ನಲ್ಲಿ ತೋರಿದ ಆದರ ವಿಶ್ವಾಸಗಳನ್ನು ನೋಡಿ ಭ್ರಾಂತರಾದ ಜನರು ಕಟ್ಟಿದ ಕಲ್ಪನಾ ಕಥೆಗಳು" ಎಂದಳು.

ಚಾಮುಂಡಿಯು "ಹಾಗಾದರೆ ಆ ವಾರ್ತೆಗಳು ನಿನ್ನ ಮನ ನೋಯಿಸುವುದೇನು ?" ಎಂದಳು.

"ಇಲ್ಲ ! ಆವೆಂದಿಗೂ ನನ್ನ ಮನವನ್ನು ಚುಚ್ಚಲಿಲ್ಲ. ರಾಜನ ಆದರವು ನನ್ನನ್ನು ಸುಖಿಯಾಗಿಯೇ ಮಾಡಿದ್ದಿತು. ಆ ಮಹಾನು ಭಾವನಾದ ರಾಜನ ಮಾತುಕತೆಗಳೂ ನನ್ನನ್ನು ಯಾವಾಗಲೂ ಆಕ ರ್ಷಿಸುತ್ತಿದ್ದವು. ಈಗಲೂ ಆಕರ್ಷಿಸುತ್ತಿವೆ. ಅಷ್ಟು ಮಾತ್ರದಿಂದ ನಾನು ಬಂಗಾರದವಳಾಗಬೇಕೆಂಬ ಕಲ್ಪನೆಯೇನೂ ಇಲ್ಲ" ಎಂದು ಹೇಳಿದಳು.

ಮಾತು ಮುಗಿಯಿತು. ಚಾಮುಂಡಿಯು, "ತಂಗಿ ಮತ್ತೊಂದು ಮಾತನ್ನು ಕೇಳಬೇಕೆನ್ನಿಸುತ್ತದೆ."

"ಕೇಳಕ್ಕಾ ಕೇಳು. ನಿನ್ನ ಮಾತುಗಳು ಎಷ್ಟೋ ಪ್ರಿಯ ವಾಗಿರುತ್ತದೆ. ನೀನು ಯಾವಾಗಲೂ ಪ್ರಿಯವಾದಿನಿ. ಚಾಮುಂಡಿ ಯೆಂಬ ಕರ್ಕಶವಾದ ಹೆಸರನ್ನು ತೆಗೆದು ಪ್ರಿಯಂವದೆಯೆಂಬ ಹೆಸರಿಟ್ಟರೆ ನಿನಗೆ ಒಪ್ಪುತ್ತದೆ."

"ಹೌದು ತಂಗಿ ! ಪ್ರಿಯಂವದೆಯೆಂಬ ಕೋಮಲವಾದ ಹೆಸ ರನ್ನು ಕಾಳಿದಾಸನು ಎಂದು ನಿರ್ಮಿಸಿದನೋ ಅಂದಿನಿಂದ ಈ ಜಗತ್ತಿ ನಲ್ಲಿ ಎಷ್ಟೋ ಮಂದಿ ಪ್ರಿಯಂವದೆಯರೂ ಶಕುಂತಲೆಯರೂ ಆಗಿ ಹೋಗಿದ್ದಾರೆ. ಶಕುಂತಲೆಯ ಕಥೆಯನ್ನು ಆ ಮಹಾಕವಿಯು ಪೂರ್ತಿ

ಯಾಗಿ ಅಮೃತವಾಣಿಯಿಂದ ಕಟ್ಟಿದ್ದಾನೆ ಆದರೆ ಪ್ರಿಯಂವದೆಯ ಕಥೆಯು ಅಗೋಚರವಾಗಿ ಕಣ್ವಋಷಿಯ ಆಶ್ರಮದಲ್ಲಿಯೇ ಮುಪ್ಪಾಗಿ ಬೂದಿಯಾಗಿ ಹೋಗಿದೆ. ನಾನು ಪ್ರಿಯಂವದೆಯಾದರೆ ನೀನು ಶಕುಂತಲೆಯಾಗುವೆ. ಶಕುಂತಲೆಯ ರೂಪುಲಾವಣ್ಯ ಹಾವಭಾವ ಗಳನ್ನು ಕವಿಯು ಹೇಗೆ ಬಣ್ಣಿಸಿದ್ದಾನೆಯೋ ಅದೆಲ್ಲಾ ನಿನ್ನಲ್ಲಿ ಸಂಪೂರ್ಣವಾಗಿವೆ. ಆದರೆ ಈ ನಮ್ಮ ಶಕುಂತಲೆಗೆ ದುಷ್ಯಂತನೇ ಹುಟ್ಟಲ್ಲವೇನು? ಅದೇ ನಾನು ಕೇಳಬೇಕೆಂದಿರುವ ಮಾತು" ಎಂದು ಚಾಮುಂಡಿಯು ನಕ್ಕಳು.

ಮಲ್ಲಿಗೆಯ ಮನವು ವಿಕಸಿತವಾಯಿತು. "ದುಷ್ಯಂತನೊಬ್ಬ ನಿದ್ದಿದ್ದರೆ ಅವನು ನಿನ್ನ ಮುಂದೆಯೇ ಇರುತ್ತಿರಲಿಲ್ಲವೇನು? ನನ್ನನ್ನೇಕೆ ಕೇಳಬೇಕು ?" ಎಂದು ನಾಚಿಕೆಯಿಂದ ಉತ್ತರವಿತ್ತಳು.

"ಅದಲ್ಲ ತಂಗಿ, ನಿನ್ನ ರೂಪುಲಾವಣ್ಯಗಳ ಜೊತೆಗೆ ಯೌವನವು ಹೆಪ್ಪುಗಟ್ಟಿದಂತೆ ನಿನ್ನ ಸಕಲ ಅವಯವಗಳಲ್ಲಿಯೂ ಚಿಮ್ಮುತ್ತಿದೆ. ನೀನೊಬ್ಬ ಪುರುಷನನ್ನು ಎಂದೂ ಒಲಿಯಲಿಲ್ಲವೇನು ?" ಎಂದು ಕೇಳಿದಳು.

ಮಲ್ಲಿಗೆಯು ಕ್ಷಣಹೊತ್ತು ಸುಮ್ಮನಿದ್ದು, "ಹೆಣ್ಣಿನ ಮನವು ಒಲಿಯದೇ ಉಂಟೇ ? ನನ್ನ ಮನವೂ ಒಲಿದಿದೆ ಒಲಿದು, ಬೇಸತ್ತು ಬೆಂಡಾಗಿದೆ. ನಿರಾಶೆಯಿಂದ ಮರುಭೂಮಿಯಂತಾಗಿದೆ. ಆ ಮರು ಭೂಮಿಯ ಮೇಲೆಯೂ ನೀನು ನನ್ನ ರೂಪುಲಾವಣ್ಯಗಳನ್ನು ಯೌವನದ ಪ್ರಗಲ್ಭಚಿನ್ಹೆಗಳನ್ನು ಕಾಣುತ್ತಿದ್ದರೆ ಅದು ಮರೀಚಿಕೆ ಯಂತೆ ಭ್ರಾಂತಿವಿಲಾಸವು ಮಾತ್ರ" ಎಂದು ಗದ್ಗದ ಧ್ವನಿಯಿಂದ ನುಡಿದಳು.

ಚಾಮುಂಡಿಯು ಮಾತನ್ನು ನಿಲ್ಲಿಸಲಿಲ್ಲ. "ಆ ಪುಣ್ಯಾತ್ಮ ನಾರು ಹೇಳುವೆಯಾ ತಂಗಿ! ನೀನು ಬಯಸಿದರೂ ವರಿಸಲಾರದ ಮಹಾಪುರುಷನಾರು? ಹೇಳು ನೋಡೋಣ."

" ಇಲ್ಲ ! ನಾನು ಹೇಳಲಾರೆ. ಅದು ನನ್ನ ಮನಸ್ಸಿನಲ್ಲಿಯೇ ಹುಟ್ಟಿದ ಆಸೆ. ನಿರಾಶೆಯಾದುದು ಆ ಹಾಳು ಮನಸ್ಸಿನಲ್ಲಿಯೇ ! ಅದೂ ಮನದಲ್ಲಿಯೇ ಮುಳುಗಿ ಹೋಗಬೇಕು. ಅದನ್ನು ಕೇಳಬೇಡ. ಅದರಿಂದ ನನಗೆ ಸುಖವಿಲ್ಲ. ನಿನಗೆ ಲಾಭವಿಲ್ಲ " ಎಂದು ನಿಟ್ಟುಸಿರು ಬಿಟ್ಟಳು.

ಚಾಮುಂಡಿಯು " ತಂಗಿ ! ಅವನು ಸಂನ್ಯಾಸಿಯೇನು ? ನಿನ್ನ ಕುಲವನ್ನು ನೋಡಿ ಮದುವೆಯಾಗಲು ಹಿಂತಿರುಗಿದ ಪಾಷಂಡಿಯೇನು?"

" ಎರಡೂ ಅಲ್ಲ. ಕುಲವೇನು ಮಾಡೀತು ಅದು ನನ್ನ ಕರ್ಮ. ಅವನು ಆಜನ್ಮಬ್ರಹ್ಮಚಾರಿಯಂತೆ. ಆಮರಣಾಂತ ಬ್ರಹ್ಮಚರ್ಯವನ್ನು ಸಂಕಲ್ಪಿಸಿದ್ದಾನಂತೆ "

" ಓಹೋ ! ಶುಕಮುನೀಶ್ವರನಲ್ಲಿ ರಂಭೆಯು ಮೋಸ ಹೋದಂತೆ ನೀನು ಒಬ್ಬ ಬ್ರಹ್ಮಚಾರಿಯಲ್ಲಿ ಮೋಸಹೋದಿಯೇನು ? ಮತ್ತೆ ಮತ್ತೆ ಆ ಬ್ರಹ್ಮಚಾರಿಯನ್ನು ಪ್ರಸನ್ನನನ್ನಾಗಿ ಮಾಡಿಕೊಳ್ಳಲು ಹಂಬಲಿಸುವೆಯೋ ?"

"ಆ ಬ್ರಹ್ಮಚಾರಿಯು ವಿಚಿತ್ರ ಬ್ರಹ್ಮಚಾರಿ. ಅವನೊಬ್ಬ ಜಗತ್ ಸಂಸಾರಿ. ಪ್ರಸನ್ನನಾಗಿ ಮಾಡಿಕೊಳ್ಳುವುದೇನು ? ಪ್ರಸನ್ನನಾಗಿಯೆ ಇದ್ದಾನೆ. ನಿನಗಿಂತಲೂ ಸುಲಭನಾಗಿದ್ದಾನೆ."

" ಆದರೆ ನೀನೇನು ಮಾಡಬೇಕೆಂದಿರುವೆ?"

" ನಾನು ಸಂನ್ಯಾಸಿನಿಯಾಗಬೇಕೆಂದಿದ್ದೇನೆ. ನಮ್ಮ ತಾಯಿಯು ಮರಣೋನ್ಮುಖಳಾಗಿದ್ದಾಗ ಹೇಳಿದ ಮಾತುಗಳ ಅರ್ಥವೂ ಅದೇ."

" ಸಂನ್ಯಾಸಿ ! ಸಂನ್ಯಾಸಿನಿ ! ಈ ರೂಪು ಲಾವಣ್ಯಗಳನ್ನು ಸಂನ್ಯಾಸವು ಮುಚ್ಚಿ ಬಿಡುವುದೇನು ? ' ಸಂನ್ಯಾಸ ಧರ್ಮವು ಈ ಯೌವನಕ್ಕೆ ಮುಸುಕು ಹಾಕುವುದೇನು ? ನಿನ್ನ ಕಲಾ ನೈಪುಣ್ಯವನ್ನು ಸಂನ್ಯಾಸ ಧರ್ಮವು ಮರೆಯಿಸಿಬಿಡುವುದೇನು ?' ಇದೆಲ್ಲಾ ಪರಸ್ಪರ ವಿರುದ್ಧಗಳಾಗಿವೆ. ನೀನು ಹಾಗೆಯೇ ಹುಚ್ಚು ಕಲ್ಪನೆಗಳನ್ನು ಹಚ್ಚಿ

ಕೊಂಡು ತೊಳಲುತ್ತಿದ್ದರೆ ರೂಪ! ಲಾವಣ್ಯ! ಯೌವನ! ಕಲಾ ನೈಪುಣ್ಯ, ಸಂನ್ಯಾಸ ಧರ್ಮ, ಇವುಗಳ ದ್ವಂದ್ವಯುದ್ಧವಾಗಿ ತುಚ್ಛಳಾಗಿ ಆತ್ಮಹತ್ಯವನ್ನು ಮಾಡಿಕೊಳ್ಳುವೆ. ನಿನ್ನ ಸಂನ್ಯಾಸ ವೆಂದರೇನೋ ನನಗೆ ಅರ್ಥವೇ ಆಗುವುದಿಲ್ಲ, ದೇವರೇ ಗತಿ" ಎಂದು ಹೇಳಿ ಚಾಮುಂಡಿಯು ದೀರ್ಘವಾದ ನಿಟ್ಟುಸಿರನ್ನು ಬಿಟ್ಟಳು.

ರಾತ್ರಿಯು ಸ್ವಲ್ಪವೇ ಉಳಿದಿದ್ದಿತು. ಇಬ್ಬರೂ ಮಲಗಿ ನಿದ್ರಿಸಿ ದರು. ಮಲ್ಲಿಗೆಗೆ ಒಂದು ಸ್ವಪ್ನವು ಬಿದ್ದಿತು. ಆ ಸ್ವಪ್ನದಲ್ಲಿ ಶ್ರೀಕಂಠೇಶ್ವರನು ಪ್ರತ್ಯಕ್ಷ ದರ್ಶನವಿತ್ತಂತೆ! ತನ್ನ ಪ್ರಿಯಮಾತೆಯು ದಿವ್ಯಶರೀರವನ್ನು ಧರಿಸಿ ಪ್ರತ್ಯಕ್ಷವಾಗಿ ಬಂದು ಕರೆಯುತ್ತಿರುವಂತೆ! ಗರಳಪುರಿಗೆ ಬಂದು ಸಂನ್ಯಾಸಧರ್ಮವನ್ನು ಸ್ವೀಕರಿಸು ಎಂದು ತಾಯಿಯು ಅಮೃತವಾಣಿಯಿಂದ ಕರೆಯುತ್ತಿರುವಂತೆ! ಜಟಾಜೂಟ ಭೂಷಿತನೂ ವಿಭೂತಿ ರುದ್ರಾಕ್ಷಿ ಮಾಲಾಲಂಕೃತನೂ, ತ್ರಿಶೂಲ ಧಾರಿಯೂ ಅದ ವೃದ್ಧ ಜಂಗಮನೊಬ್ಬನು ಮಲ್ಲಿಗೆಯನ್ನು ಆಶೀರ್ವದಿಸಿ ಶಿವದೀಕ್ಷೆಯನ್ನು ಕೊಟ್ಟಂತೆ! ಆ ಮಹಾಪುರುಷನನ್ನು ಹಿಂಬಾಲಿಸಿ ಮಲ್ಲಿಗೆಯು ಎಲ್ಲಿಯೋ ವನಮಧ್ಯದಲ್ಲಿ ಹೋದಂತೆ! ಆ ಜಂಗಮನು ಇದ್ದಕ್ಕಿದ್ದಂತೆ ಭೈರವಾಕಾರವನ್ನು ತಾಳಿ ಮಲ್ಲಿಗೆಯನ್ನು ಹಿಡಿದು ಮಹಂಕಾಳಿಗೆ ಬಲಿಕೊಟ್ಟಂತೆ! ಆಕಾಶದಿಂದ ದಿವ್ಯ ರೂಪಧಾರಿಣಿ ಯಾದ ಮಲ್ಲಿಗೆಯ ತಾಯಿಯು ಭೂಮಿಗಿಳಿದು ಬಂದು ಮಗಳನ್ನು ಆಲಿಂಗಿಸಿ ಸಂತೈಸಿ ಕೈಲಾಸಕ್ಕೆ ಕರೆದೊಯ್ಯುತ್ತಿದ್ದಂತೆ! ಕೈಲಾಸದಲ್ಲಿ ಶಿವನ ಮುಂದೆ ಮಲ್ಲಿಗೆಯು ದಿವ್ಯದೇಹಧಾರಿಣಿಯಾಗಿ ನರ್ತನ ಮಾಡುತ್ತಿರುವಂತೆ ಸ್ವಪ್ನವನ್ನು ಕಂಡಳು. ಥಟ್ಟನೆ ಗಾಬರಿಯಿಂದ ಎದ್ದು ಕುಳಿತಳು. ಉಷಃಕಾಲದ ಬೆಳಕು ಅಂಗಳದಲ್ಲಿ ಬೀಳುತ್ತಿದ್ದಿತು. ತಂಗಾಳಿಯು ಬೀಸುತ್ತಿದ್ದಿತು. ಕ್ಷಣಹೊತ್ತಿನಲ್ಲಿ ಚೈತನ್ಯವನ್ನು ಹೊಂದುಕೊಂಡು "ಸ್ವಪ್ನ-ಸ್ವಪ್ನ-ದಿವ್ಯವಾದ ಸ್ವಪ್ನ" ಎಂದು ಹೇಳಿ ದಳು. ಮೈ ರೋಮಾಂಚನವಾಗಿದ್ದಿತು. ಈ ಮಾತುಗಳನ್ನು ಕೇಳಿ

ಚಾಮುಂಡಿಯು ಎದ್ದು ಮಲ್ಲಿಗೆಯನ್ನು ಆಲಿಂಗಿಸಿದಳು. "ತಂಗಿ! ಸ್ವಪ್ನವನ್ನು ಕಂಡೆಯ? ದುಃಸ್ವಪ್ನವೇ?" ಎಂದು ಆತುರದಿಂದ ಪ್ರಶ್ನೆ ಮಾಡಿದಳು.

ಮಲ್ಲಿಗೆಯು "ಅಕ್ಕಾ! ಸ್ವಪ್ನವು ದುಃಸ್ವಪ್ನವೋ ಒಳ್ಳೆಯ ಸ್ವಪ್ನವೋ ನಾನು ಹೇಳಲಾರೆ. ನನ್ನ ಮರಣವನ್ನು ನಾನೇ ಕಣ್ಣಾರ ಕಂಡೆ. ನನ್ನ ತಾಯಿಯ ದಿವ್ಯರೂಪವನ್ನು ಕಂಡೆ. ಸಾಕ್ಷಾತ್ ಕೈಲಾಸನಾಥನ ಪ್ರತ್ಯಕ್ಷ ದರ್ಶನವನ್ನು ಕಂಡೆ. ಸ್ವಪ್ನವು ಅದ್ಭುತ ವಾದುದು. ಭಯಾನಕವಾದುದು. ಆದರೆ ಅಮೃತ ಮಯವಾದುದು. ಎಂದು ಹೇಳಿ ತನ್ನ ಸ್ವಪ್ನವನ್ನು ಆದ್ಯೋಪಾಂತವಾಗಿ ವಿವರಿಸಿದಳು. ಅವರಿಬ್ಬರೂ ಎದ್ದು ಪ್ರಾತಃ ಕೃತ್ಯಗಳಲ್ಲಿ ತೊಡಗಿದರು. ಚಾಮುಂಡಿಯು ತನ್ನ ಮನೆಗೆ ಹೊರಟು ಹೋದಳು.

## ೧೧

ಮಲ್ಲಿಗೆಯು ದೇವರಪೂಜೆಯನ್ನು ತೀರಿಸಿ ಹೊರಗೆ ಬರುವ ಹೊತ್ತಿಗೆ ನಂಜನಗೂಡಿನಲ್ಲಿ ತಾಯಿಯ ಮರಣಕಾಲದಲ್ಲಿ ಪರಿಚಿತ ನಾಗಿದ್ದ ಮಹಂತನು ಬಂದು ದರ್ಶನವಿತ್ತನು. ಮಲ್ಲಿಗೆಯು ನಮಸ್ಕರಿಸಿ ಆದರೋಪಚಾರಗಳನ್ನು ನೀಡಿದಳು. ಮಹಂತನನ್ನು ಆಸನದ ಮೇಲೆ ಕುಳ್ಳಿರಿಸಿ ಬಂದ ಕಾರ್ಯವನ್ನು ಪ್ರಶ್ನೆ ಮಾಡಿದಳು.

ಮಹಂತನು ಸಾತ್ವಿಕ ಸ್ವಭಾವದವನು. ಯಾವಾಗಲೂ ದಾನ ಧರ್ಮ ಪರೋಪಕಾರಗಳಲ್ಲಿ ನಿರತನು. ಅವನು ಬಾಲ್ಯದಿಂದಲೂ ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬಂದ ವೃದ್ಧನು. ಅವನು ಯಾರ ಮನೆಗಾದರೂ ಬಂದರೆ ದೇವರೇ ಬಂದಂತೆ ಭಾವನೆ ಮಾಡು

ತ್ತಿದ್ದರು. ಅವನು ಮಲ್ಲಿಗೆಯನ್ನು ಕುರಿತು ಮೃದುನುಡಿಗಳಿಂದ, "ಮಹಾತಾಯಿ ! ನಾನೊಂದು ಪುಣ್ಯಕಾರ್ಯಕ್ಕೆ ನಿನ್ನನ್ನು ಪ್ರೇರೇಪಣೆ ಮಾಡಲು ಬಂದಿದ್ದೇನೆ. ಪರಶಿವನು ಬುದ್ಧಿಕೊಟ್ಟದ್ದನ್ನು ಮಾಡ ಬಹುದು. ಈ ಮಾಘ ಮಾಸದಲ್ಲಿ ನಂಜನಗೂಡಿನಲ್ಲಿ ವರ್ಷೇ ವರ್ಷೇ ಪ್ರತಿದಿನವೂ ಗಣಾರಾಧನೆಯನ್ನು ನಡೆಯಿಸುವ ಸಂಪ್ರದಾಯವಿಟ್ಟು ಕೊಂಡಿದ್ದೇನೆ ಈಶ್ವರನ ಕೃಪೆಯಿಂದಲೂ ಭಕ್ತಾದಿಗಳ ಸಹಾಯ ದಿಂದಲೂ ಇಪ್ಪತ್ತು ವರ್ಷಗಳಿಂದಲೂ ನಡೆದು ಬರುತ್ತಿದೆ. ಅಕ್ಕಿ ಬೇಳೆ ತುಪ್ಪ ಬೆಲ್ಲ ಕಾಯಿಪಲ್ಯಗಳು ಎಲ್ಲವೂ ದಿನಕ್ಕೆ ಒಂದು ಗಾಡಿಯಷ್ಟು ಬೇಕಾಗುತ್ತದೆ. ನಂಜುಂಡನ ಸೇವಾದಿಗಳಿಗೆ ಪ್ರತಿದಿನವೂ ಹತ್ತಾರು ರೂಪಾಯಿಗಳು ಬೇಕಾಗುತ್ತವೆ. ಜಂಗಮರಿಗೆ ವಸ್ತ್ರಾದಿಗಳನ್ನು ಕೊಡುವ ಪದ್ಧತಿಯಿದೆ. ದೀನದರಿದ್ರರಿಗೆ ಅನ್ನದಾನ ಮಾಡಬೇಕು. ಇದು ಒಂದು ಮಂಡಲಕಾಲ ನಡೆಯತಕ್ಕ ಪದ್ಧತಿ. ನೀನು ನಿಮ್ಮ ತಾಯಿಯ ಪ್ರೀತ್ಯರ್ಥವಾಗಿ ಒಂದೆರಡು ದಿನಗಳ ಖರ್ಚನ್ನು ವಹಿಸ ಬಲ್ಲೆಯಾ ? ಶಿವನು ಬುದ್ಧಿಕೊಟ್ಟರೆ ನೋಡಮ್ಮಾ" ಎಂದು ಹೇಳಿ ದನು.

ಮಲ್ಲಿಗೆಯು ಆಲೋಚನೆ ಮಾಡಲೇ ಇಲ್ಲ. ಸಂತೋಷದಿಂದ "ಗುರುವೇ ! ಇಂತಹ ಪುಣ್ಯವು ಎಲ್ಲಿ ದೊರೆಯಬೇಕು. ಅಗತ್ಯವಾಗಿ ನಾನು ತಮ್ಮಪ್ಪಣೆಯಂತೆ ನಡೆದುಕೊಳ್ಳುತ್ತೇನೆ. ಪರಶಿವನ ಸೇವೆಯು ನಡೆಯಲಿ. ಜಂಗಮರ ಸೇವೆಯು ನಡೆಯಲಿ. ಮೊದಲನೆಯ ದಿನವೇ ಸಾಮಗ್ರಿಗಳನ್ನೂ ಹಣವನ್ನೂ ಕಳುಹಿಸಿಕೊಡುತ್ತೇನೆ" ಎಂದು ಹೇಳಿ ದಳು.

ಮಹಂತನಿಗೆ ಊಟ ಉಪಚಾರಗಳನ್ನು ಮಾಡಿಸಿ ಕಳುಹಿಸಿ ಕೊಟ್ಟಳು. ಈ ವೃತ್ತಾಂತವೆಲ್ಲವನ್ನೂ ಆದಿನ ರಾತ್ರಿ ಚಾಮುಂಡಿಗೆ ಅರುಹಿದಳು. ಚಾಮುಂಡಿಯು ಅದಕ್ಕೆ ವಿಶೇಷ ಉತ್ತೇಜನವನ್ನಿತ್ತು ಮಾತನಾಡಿದಳು. ಆರಾತ್ರಿ ಪರಶಿವನ ಮಹಿಮೆಯನ್ನು ಅವರಿಬ್ಬರೂ

ಕೊಂಡಾಡಿಕೊಂಡು ಮಲಗಿದರು.

ದಿನಗಳು ಕಳೆಯುತ್ತವೆ. ಅನೇಕ ಸಂಘಟನೆಗಳಾಗುತ್ತವೆ. ಮಾನವನ ಜೀವನದಲ್ಲಿ ಎಷ್ಟೋ ಪರಿವರ್ತನೆಗಳಾಗುತ್ತವೆ. ಅದರ ರಹಸ್ಯವನ್ನು ಮಾತ್ರ ಮಾನವರು ಅರಿಯರು . ಮಾನವರು ಮಾತ್ರ ಎಲ್ಲವೂ ತಮ್ಮದೇ ಎಂದು ಭಾವಿಸುತ್ತಾರೆ. ಸುಖಿಗಳು ಕಾಲವು ತಮ್ಮ ಅಧೀನವೆಂದುಕೊಂಡು ಕಾಲವನ್ನು ಕಳೆಯುತ್ತಾರೆ. ಕಷ್ಟ ಜೀವಿಗಳು ಕರ್ಮವನ್ನು ಬೈಯುತ್ತಾ ದುಃಖದಿಂದ ಕಾಲ ಕಳೆಯುತ್ತಾರೆ. ಕಾಲವು ಮಾತ್ರ ಎಲ್ಲವನ್ನೂ ಕಬಳಿಸುತ್ತದೆ. ಅದರ ಪ್ರತ್ಯಕ್ಷ ದರ್ಶನವು ಯಾರಿಗೂ ಆಗಿಲ್ಲ. ಕೃತ, ತ್ರೇತಾಯುಗದ ಪುರಾಣ ಪುರುಷರೂ ಅದರ ನಿಜ ಸ್ವರೂಪವನ್ನು ಕಂಡಿಲ್ಲ. ಕಲಿಯುಗದ ಕಲಿಪುರುಷನೂ ಅದರ ಮಹಾತ್ಮ್ಯವನ್ನು ಲೆಕ್ಕಿಸುವುದಿಲ್ಲ. ಕಾಲದ ಮೃದುಶಯ್ಯೆಯಲ್ಲಿ ಎಲ್ಲರೂ ಸುಪ್ತಾವಸ್ಥೆಯಲ್ಲಿಯೇ ಇರುತ್ತಾರೆ. ಕಾಲವು ಮಾತ್ರ ಸರ್ವದಾ ಜಾಗೃತವಾಗಿರುತ್ತದೆ. ಇದೇ ಕಾಲದ ಮಹಿಮೆ.

ಮಾಘಮಾಸವು ಬಂದಿತು. ಮಲ್ಲಿಗೆಯು ಸಂಭ್ರಮದಿಂದ ತನ್ನ ಸರ್ವಸ್ವವನ್ನೂ ಸಾಗಿಸಿಕೊಂಡು ಗರಳಪುರಿಗೆ ಹೊರಟಳು. ಜೊತೆಯಲ್ಲಿ ಚಾಮುಂಡಿಯನ್ನೂ ಒಬ್ಬಿಬ್ಬರು ಪರಿಚಾರಿಕೆಯರನ್ನೂ ಕರೆದೊಯ್ದಳು. ಅವಳು ಹೊರಡುವಾಗ ಅವಳ ಪ್ರಿಯವಾದ ತಂಬೂರಿಯನ್ನು ತೆಗೆದುಕೊಂಡು ಹೊರಟಳು. ನಂಜನಗೂಡಿಗೆ ಹೋಗಿ ಸೇರಿದಳು. ಯಾವ ಛತ್ರದಲ್ಲಿ ತನ್ನ ತಾಯಿಯ ಅವಸಾನವಾಗಿದ್ದಿತೋ ಅದೇ ಛತ್ರದಲ್ಲಿ ಹೋಗಿ ಬಿಡಾರಮಾಡಿದಳು. ಮಹಂತನನ್ನು ದರ್ಶನಮಾಡಿ "ನಾಳೆಯಿಂದ ಗಣಾರಾಧನೆಯು ನಡೆಯಲಿ. ಪರಶಿವನ ಸೇವೆಯು ನಡೆಯಲಿ" ಎಂದು ಪ್ರಾರ್ಥನೆ ಮಾಡಿದಳು. ಮಾರನೆಯ ದಿನವೇ ಭಗವಂತನ ವಿಶೇಷ ಪೂಜಾದಿಗಳಿಗೆ ಆರಂಭವಾಯಿತು. ಮಹಂತನ ಮಠದಲ್ಲಿ ಗಣಾರಾಧನೆಗೆ ಆರಂಭವಾಯಿತು. ದಿವ್ಯವಾದ ಭೋಜನ. ಪ್ರತಿದಿನವೂ ಹೀಗೆಯೇ ನಡೆಯಲಾರಂಭವಾಯಿತು. ಬಡಬಗ್ಗರಿಗೆ

ವಸ್ತ್ರಗಳನ್ನೂ ಕಂಬಳಿಗಳನ್ನೂ ತರಿಸಿ ದಾನಮಾಡಿದಳು. ತನ್ನ ಆಭರಣಗಳನ್ನೆಲ್ಲಾ ದೇವಾಲಯದಲ್ಲಿ ಪಾರ್ವತೀದೇವಿಗೆ ಒಪ್ಪಿಸಿದಳು. ಪ್ರತಿದಿನವೂ ದೇವರ ಉತ್ಸವವು ನಡೆಯುವಂತೆ ಏರ್ಪಡಿಸಿದಳು. ಬ್ರಾಹ್ಮಣರಿಗೆ ದಾನದಕ್ಷಿಣೆಗಳನ್ನು ಯಥೇಚ್ಛವಾಗಿ ಕೊಡಲಾರಂಭಿಸಿದಳು. ನಾನಾ ಸ್ಥಳಗಳಿಂದ ಜಂಗಮರು ಬಂದು ಅನ್ನ ವಸ್ತ್ರಗಳನ್ನು ಸ್ವೀಕರಿಸಿ ಮಲ್ಲಿಗೆಯನ್ನು ಹರಸಿ ಹೋಗುತ್ತಿದ್ದರು.

ಈ ಸಮಾಚಾರವು ರಾಜಧಾನಿಗೂ ಮುಟ್ಟಿತು. ಪುರಜನರೆಲ್ಲರೂ ನಾನಾವಿಧವಾಗಿ ಪ್ರಶಂಸಿಸುತ್ತಿದ್ದರು ಈ ಸಮಾಚಾರಗಳು ರಾಜನ ಕಿವಿಯವರೆಗೆ ಮುಟ್ಟಿದವು. ರಾಜನೂ ಬ್ರಾಹ್ಮಣರ ಮುಖೇನ ಈ ಪ್ರಶಂಸಾ ವಾಕ್ಯಗಳನ್ನು ಕೇಳಿ ಸಂತೋಷಿಸುತ್ತಿದ್ದನು.

ಒಂದುದಿನ ಜಂಗಮನೊಬ್ಬನು ಅರಮನೆಗೆ ಬಂದು ರಾಜನ ದರ್ಶನವನ್ನು ಅಪೇಕ್ಷಿಸಿದನು. ರಾಜನು ಆ ಜಂಗಮನನ್ನು ಅರಮನೆಯೊಳಗೆ ಬರಮಾಡಿಕೊಂಡನು. ಜಂಗಮನು ಯುವಾಪುರುಷ! ತೇಜಸ್ವಿಯಾಗಿದ್ದನು. ಪ್ರಕಾಶಮಾನವಾದ ಕಣ್ಣುಗಳು. ಕಾಷಾಯವನ್ನು ಆಪಾದಮಸ್ತಕವಾಗಿ ಧರಿಸಿದ್ದನು. ವಿಭೂತಿ ರುದ್ರಾಕ್ಷಿಗಳಿಂದ ಅಲಂಕೃತನಾಗಿದ್ದನು. ರಾಜನು ಆ ಜಂಗಮನನ್ನು ಕಾಣುತ್ತಲೇ ಭಕ್ತಿಯಿಂದ ಎದ್ದು ನಿಂತು ಗೌರವಿಸಿ ಆಸನದಲ್ಲಿ ಮಂಡಿಸುವಂತೆ ಸೂಚಿಸಿದನು. ಜಂಗಮನು ರಾಜನನ್ನು ಹರಸಿ, ಆಸನವನ್ನಲಂಕರಿಸಿದನು.

"ಶಿವಸ್ವರೂಪಿಯಾದ ಜಂಗಮದೇವ! ಎಲ್ಲಿಂದ ಬರುತ್ತಿರುವೆ. ಏನು ಕಾರ್ಯಾರ್ಥವಾಗಿ ಬಂದಿರುವೆ" ಎಂದು ರಾಜನು ಪ್ರಶ್ನಿಸಿದನು.

ಜಂಗಮನು, "ಮಹಾರಾಜನೇ ನಾನು ಗರಳಪುರಿಯಿಂದ ಬರುತ್ತಿರುವೆನು. ನಿನ್ನ ದರ್ಶನಮಾಡಿ ಹೋಗೋಣವೆಂದು ಬಂದಿದ್ದೇನೆ" ಎಂದು ಹೇಳಿದನು.

ಅರಸನು "ಜಂಗಮದೇವ! ಗರಳಪುರಿಯಲ್ಲೇನು ವಿಶೇಷ? ಅಲ್ಲಿ ಈ ವರ್ಷ ಗಣಾರಾಧನೆಗಳು ಅಭೂತಪೂರ್ವವಾಗಿ ನಡೆಯುತ್ತಿವೆ

ಯೆಂದು ಕೇಳಿದ್ದೇವೆ. ನಿಜವೇ ?" ಎಂದನು.

ಜಂಗಮನು "ಮಹಾರಾಜ! ನಿಜ! ಮೈಸೂರಿನ ವೇಶ್ಯೆಯೊಬ್ಬಳು ಹೇರಳವಾದ ದಾನ ಧರ್ಮಗಳನ್ನೂ ಅನ್ನದಾನಗಳನ್ನೂ ಮಾಡುತ್ತಿದ್ದಾಳೆ. ನಾನು ಅದರಲ್ಲೊಂದು ವಿಶೇಷವನ್ನು ಕಂಡು ಆಶ್ಚರ್ಯಪಟ್ಟಿದ್ದೇನೆ" ಎಂದು ಹೇಳಿದನು.

ಅರಸನು ಆತುರದಿಂದ "ಅಂತಹ ಆಶ್ಚರ್ಯವೇನು ?" ಎಂದನು.

"ಆ ವೇಶ್ಯೆಯು ತನ್ನ ಆಭರಣಗಳನ್ನೆಲ್ಲಾ ದೇವಿಗೆ ಅರ್ಪಣೆ ಮಾಡಿದ್ದಾಳೆ. ಧನವನ್ನೆಲ್ಲಾ ಗಣಾರಾಧನೆಗಳಿಗೂ ಬ್ರಾಹ್ಮಣರಿಗೆ ದಕ್ಷಿಣೆ ಕೊಡುವುದಕ್ಕೂ ವಿನಿಯೋಗಿಸುತ್ತಿದ್ದಾಳೆ" ಎಂದನು.

ರಾಜನು "ಪ್ರಶಂಸಾರ್ಹವಾದ ದಾನ. ದಾನಮಾಡಿದರೆ ಹಾಗೆ ಮಾಡಬೇಕು. ಸರ್ವಸ್ವ ದಾನಮಾಡುವುದರಿಂದಲೇ ಸದಾಶಿವನು ಪ್ರಸನ್ನನಾಗುತ್ತಾನೆ. ತಮ್ಮಂತಹ ವಿರಕ್ತರಿಗೆ ಅದರಲ್ಲಿ ಆಶ್ಚರ್ಯವೇನು ಕಂಡಿತು" ಎಂದು ಕೇಳಿದನು.

ಜಂಗಮನು ತಲೆಸವರಿಕೊಳ್ಳುತ್ತಾ "ಮಹಾರಾಜಾ, ಅದರಲ್ಲೊಂದು ಆಶ್ಚರ್ಯವಿದೆ. ಆ ವೇಶ್ಯೆಯು ಸಂನ್ಯಾಸಿನಿಯಾಗುತ್ತಾಳಂತೆ. ಅದಕ್ಕಾಗಿಯೇ ಸರ್ವಸ್ವವನ್ನೂ ದಾನಮಾಡುತ್ತಿದ್ದಾಳಂತೆ! ಅವಳು ಆ ಮಹಂತನ ಮಾಯೆಯಲ್ಲಿ ಸಿಲುಕಿದ್ದಾಳೆ ರೂಪಯೌವನ ಸಂಪನ್ನೆಯೂ ಕಲಾವತಿಯೂ ಆದ ಆ ತರುಣಿಯು ಸಂನ್ಯಾಸಿನಿಯಾಗುವುದೆಂದರೆ ನನಗೆ ಆಶ್ಚರ್ಯವಾಗುತ್ತದೆ. ನಿಮಗೂ ಆಶ್ಚರ್ಯವಲ್ಲವೇ ?" ಎಂದನು.

ರಾಜನು ತಲೆದೂಗಿ, "ಆಶ್ಚರ್ಯವೇ ಸರಿ! ಮಾಯೆಯಿಂದ ಅವಳನ್ನು ಸಂನ್ಯಾಸಿನಿಯಾಗಿ ಮಾಡಿದರೆ ಅದರಿಂದ ಮಹಂತನಿಗೆ ಆಗುವ ಪ್ರಯೋಜನವೇನಿದೆ? ನಮಗಾದರೂ ಅದರಿಂದ ನಷ್ಟವೇನು ?" ಎಂದನು.

ಜಂಗಮನು ಗಟ್ಟಿಯಾಗಿ ನಕ್ಕನು. "ರಾಜನೇ! ನಿನಗೆ

ಸಂಬಂಧವಿದೆ. ಆ ಮಲ್ಲಿಗೆಯು ನಿನ್ನ ಬಂಗಾರದಪತ್ನಿಯೆಂದು ಕೇಳಿದ್ದೇನೆ. ಅದನ್ನು ನಾನು ನಂಬಿದ್ದೇನೆ. ನಿನ್ನಿಂದ ಅವಳನ್ನು ಅಗಲಿಸುವುದಕ್ಕಾಗಿ ನಿಮ್ಮ ಆಸ್ಥಾನದಲ್ಲಿ ಪ್ರಬಲರಾದವರೇ ಯಾರೋ ಈ ಮಹಂತನನ್ನು ಪ್ರೇರೇಪಿಸಿದ್ದಾರೆ. ಒಂದು ಬಾರಿ ಅವಳು ಶಿವದೀಕ್ಷೆಯನ್ನು ಸ್ವೀಕರಿಸಿದರೆ ಆಮೇಲೆ ಅವಳನ್ನು ನೀನು ತರಲಾರೆ. ಒಂದು ಪಕ್ಷ ಬಲಾತ್ಕಾರದಿಂದ ಅವಳನ್ನು ಕರೆತಂದರೂ ಜಂಗಮರೆಲ್ಲರೂ ನಿನ್ನ ದ್ವೇಷಿಗಳಾಗುತ್ತಾರೆ. ಅದು ಶಿವಭಕ್ತರ ದ್ರೋಹ! ಅವರು ನಿನ್ನನ್ನು ಕ್ಷಮಿಸುವುದಿಲ್ಲ" ಎಂದು ಹೇಳಿದನು.

ರಾಜನು ಸ್ವಲ್ಪಹೊತ್ತು ಸುಮ್ಮನಿದ್ದು "ಜಂಗಮನೇ ಮಹಂತನಿಗಿಂತಲೂ ನೀನು ಮಾಯಾವಿಯೆಂದು ಕಾಣುತ್ತದೆ. ನಿನಗೆ ಇದೆಲ್ಲವೂ ಹೇಗೆ ಗೊತ್ತು. ನಿನ್ನ ಈ ವಿರಕ್ತವೇಷವು ಬೂಟಾಟಿಕೆಯೇನು? ನೀನು ತ್ರಿಕಾಲ ಜ್ಞಾನಿಯಂತೆ ಎಲ್ಲವನ್ನೂ ಹೇಳುತ್ತಿರುವೆ. ಇದನ್ನೆಲ್ಲಾ ನಿನಗಾರು ಹೇಳಿದರು? ಹೇಗೆ ತಿಳಿದೆ?"

ಜಂಗಮನು ಸ್ಥಿರಭಾವದಿಂದ ನಕ್ಕನು. "ನಾನು ವೇಷಧಾರಿಯಲ್ಲ. ಬೂಟಾಟಿಕೆಯಲ್ಲ. ಇದೆಲ್ಲವನ್ನೂ ಮಲ್ಲಿಗೆಯ ಬಾಯಿಂದಲೇ ನಾನು ಕೇಳಿದ್ದೇನೆ. ನಾನು ಅವಳ ವಿದ್ಯಾಗುರುವಾದ ವಿಶ್ವೇಶ್ವರ. ಬಹು ದಿನಗಳಿಂದಲೂ ನಾನು ವೇದಾಂತಿಯಾಗಿಯೇ ಇದ್ದೆ. ಸ್ಥಿರ ಮನಸ್ಸಿನಿಂದ ಈ ಆಶ್ರಮವನ್ನು ಪರಿಗ್ರಹಿಸಿದ್ದೇನೆ."

"ಓಹೋ! ನೀನು ಆ ವಿದ್ವಾಂಸನಾದ ವಿಶ್ವೇಶ್ವರನೇನು? ನೀನು ಬ್ರಾಹ್ಮಣನೆಂದು ಕೇಳಿದ್ದೇನೆ. ನೀನು ಈ ಶಿವಭಕ್ತ, ಜಂಗಮನಾದುದೇಕೆ?"

"ರಾಜನೇ ವಿರಕ್ತಧರ್ಮದಲ್ಲಿ ಜಾತಿಭೇದವೆಲ್ಲಿ ಬಂತು? ಸಾಧನ ಪಂಥವು ಯಾವರೀತಿಯದಾದರೆ ಅದೇ ಮೋಕ್ಷಮಾರ್ಗ. ನನ್ನ ಗುರುವು ಜಂಗಮನಾಗಿದ್ದನು ಅವನು ಯೋಗಸಿದ್ಧನು. ಅವನಲ್ಲಿ ನಾನು ದೀಕ್ಷೆಯನ್ನು ವಹಿಸಿದೆ. ಜಂಗಮನೆಂದರೇನು? ಬ್ರಾಹ್ಮಣ

ಸಂನ್ಯಾಸಿಯೆಂದರೇನು. ಇದು ಯೋಗದೀಕ್ಷೆ."

ರಾಜನು ಆಶ್ಚರ್ಯದಿಂದ "ಜಂಗಮನೇ ! ನೀನೇಕೆ ಸಂನ್ಯಾಸಿಯಾದೆ. ನಿನಗೆ ಸಂಸಾರ ಬಂಧನವಿಲ್ಲವೇ ?"

"ಅರಸನೇ ಸಂಸಾರ ಬಂಧನವಿತ್ತು. ಅದು ಮಲ್ಲಿಗೆಯ ಬಂಧನ. ನನಗೂ ಅವಳಿಗೂ ಇದ್ದ ಸಂಬಂಧವು ವಿದ್ಯೆಯ ಸಂಬಂಧ. ಅವಳು ಸಂನ್ಯಾಸಿನಿಯಾಗುವಳೆಂದು ತಿಳಿದು ನಾನು ಸಂನ್ಯಾಸಿಯಾದೆ. ಇನ್ನುಮೇಲೆ ನನ್ನ ವಿದ್ಯೆಗಾದರೂ ಪ್ರಯೋಜನವೇನು ? ಅವಳ ವಿದ್ಯೆಗಾದರೂ ಪ್ರಯೋಜನವೇನು ?" ಎಂದನು.

ಅರಸನು, "ಮಲ್ಲಿಗೆಯು ನಿಜವಾಗಿಯೂ ಸಂನ್ಯಾಸಧರ್ಮವನ್ನು ಸ್ವೀಕರಿಸುವಳೋ ?" ಎಂದು ಕೇಳಿದನು.

ಜಂಗಮನು "ರಾಜನೇ ! ನಿಜವಾದ ಸಂನ್ಯಾಸಧರ್ಮವು ಅಷ್ಟು ಸುಲಭವಲ್ಲ. ವಂಚನೆ ! ಮಾಯೆ ! ನಿನ್ನ ಬಂಗಾರದಸತಿಯನ್ನು ಅಪಹರಿಸುವ ಪ್ರಲೋಭ" ಶಾಠ್ಯಭಾವದಿಂದ ನುಡಿದನು.

"ವಿಶ್ವೇಶ್ವರಾ ! ನಿನ್ನ ದರ್ಶನವಾದುದು ಬಹಳ ಸಂತೋಷ. ನಿನ್ನಿಂದ ಎಷ್ಟೋ ನಿಜಾಂಶಗಳು ತಿಳಿದವು. ಮಲ್ಲಿಗೆಯ ಕಲಾನೈಪುಣ್ಯದಿಂದ ನಾನು ಮೋಹಿತನಾಗಿರುವುದು ನಿಜ. ಅವಳು ಬಂಗಾರದವಳಾಗಲೀ ಹೇಗೇ ಆಗಲಿ ಅವಳು ನನ್ನವಳು. ಎಂದೆಂದಿಗೂ ನನ್ನವಳೇ ! ಆ ಮಾತು ಹಾಗಿರಲಿ. ನಿನಗೆ ನನ್ನಿಂದ ಏನಾಗಬೇಕು ?" ಎಂದನು.

ಜಂಗಮನು "ಏನೂ ಇಲ್ಲ ! ನಾನು ದಕ್ಷಿಣ ದೇಶದವನು. ಈ ರಾಜ್ಯವನ್ನು ಬಿಟ್ಟು ಹೋಗುತ್ತೇನೆ. ನೀನು ಪರಾಕ್ರಮಶಾಲಿಯೂ ಧರ್ಮಿಷ್ಠನೂ ಆದ ರಾಜ. ನಿನ್ನ ರಾಜ್ಯವು ಸುಭಿಕ್ಷವಾಗಿದೆ. ಈ ಮಲ್ಲಿಗೆಯ ಪ್ರಕರಣದಿಂದ ಈ ರಾಜ್ಯದಲ್ಲಿ ಅನೇಕ ಅನಾಹುತಗಳಾಗುತ್ತವೆ. ಆ ಭವಿಷ್ಯವನ್ನು ನಿನಗೆ ಹೇಳಿಹೋಗಲು ಬಂದಿದ್ದೇನೆ.

ನಾನು ಕಾಮ ಕ್ರೋಧಗಳಿಂದ ಈ ದೇಶವನ್ನು ಬಿಟ್ಟು ಹೋಗುತ್ತಿಲ್ಲ. ಸಂತೋಷವಾಗಿ ಹೊರಟು ಹೋಗುತ್ತಿದ್ದೇನೆ" ಎಂದು ಹೇಳಿ ಆಸನ ದಿಂದೆದ್ದನು. ರಾಜನು ಆ ಜಂಗಮುನಿಗೆ ನಮಸ್ಕರಿಸಿದನು. ಜಂಗಮನು ರಾಜನ ಅನುಜ್ಞೆಯನ್ನು ಪಡೆದು, ಹೊರಟು ಹೋದನು.

ರಾಜನು ಜಂಗಮನ ದರ್ಶನದಿಂದ ಚಿಂತಾಕ್ರಾಂತನಾದನು. ಅವನ ಮನದಲ್ಲಿ ಮಲ್ಲಿಗೆಯ ಮೋಹವು ಇಮ್ಮಡಿಯಾಯಿತು. ಉರಿ ಯುವ ಬೆಂಕಿಗೆ ಆಜ್ಯವನ್ನು ಸುರಿದಂತಾಯಿತು. ಅವನು ತಾನೇ ಪ್ರತ್ಯಕ್ಷವಾಗಿ ನಂಜನಗೂಡಿಗೆ ಹೋಗಿ ಮಲ್ಲಿಗೆಯನ್ನು ಕರೆತರಬೇಕೆಂದು ನಿಶ್ಚಯಿಸಿದನು. ಈ ಆಲೋಚನೆಯಲ್ಲಿಯೇ ಮೂರು ನಾಲ್ಕು ದಿನ ಗಳು ಕಳೆದವು. ಅನ್ನಾಹಾರಗಳು ರಾಜನಿಗೆ ರುಚಿಸದಾದವು. ಮಲ್ಲಿ ಗೆಯ ಮೇಲಿನ ಮೋಹದಿಂದ ಮಹಂತನ ಮೇಲೆ ರಾಜನಿಗೆ ಅಸದಳ ವಾದ ಕೋಪವು ಹುಟ್ಟಿತು. ಅವನು ನಂಜನಗೂಡಿಗೆ ಪರಿವಾರ ಸಮೇತನಾಗಿ ಹೊರಡುವುದನ್ನು ನಿಶ್ಚಯಿಸಿದನು.

ಈ ಸಮಾಚಾರವು ಗುಪ್ತಚಾರರ ಮುಖೇನ ಪಂಡಿತಾರಾಧ್ಯನಿಗೆ ತಿಳಿಯಿತು. ಅವನು ವಿಶ್ವೇಶ್ವರನನ್ನು ಬಹಳವಾಗಿ ಹುಡುಕಿಸಿದನು. ಎಲ್ಲಿಯೂ ಸಿಕ್ಕಲಿಲ್ಲ. ಒಬ್ಬ ವೇಶ್ಯೆಗಾಗಿ ರಾಜನು ಕ್ಷೇತ್ರಕ್ಕೆ ತೆರಳುವುದು ಬಹಳ ಅಗೌರವವೆಂದು ಮಂತ್ರಿಗೆ ತೋರಿತು. ಜನರ ದೃಷ್ಟಿಯಿಂದ ರಾಜನಿಗೆ ಬಹಳ ಲಾಘವವಾಗುವುದೆಂದು ಅವನು ಮನಗಂಡನು. ರಾಜನನ್ನು ತಡೆಯುವುದು ದುಃಸಾಧ್ಯವೆಂದು ಮಂತ್ರಿಗೆ ಮನವರಿಕೆ ಯಾಯಿತು. ಅವನು ಮಂತ್ರಿಯು ಮಾತ್ರವೇ ಅಲ್ಲ; ರಾಜನ ಆಪ್ತಸ್ನೇಹಿತನಾಗಿಯೂ ಇದ್ದನು. ಮಂತ್ರಿಪದವಿಯು ತನಗೊಂದು ಮಹತ್ ಪದವಿಯೆಂದು ಅವನು ಭಾವಿಸಿರಲಿಲ್ಲ. ರಾಜನಿಗೆ ಪ್ರಿಯವಲ್ಲ ದಿದ್ದರೆ, ಆ ಪದವಿಯನ್ನು ಪರಿತ್ಯಜಿಸಲು ಸರ್ವದಾ ಸಂತೋಷಿತನಾಗಿ ದ್ದನು. ಜನತೆಗೆ ಅವನ ಅಧಿಕಾರವು ಅಪ್ರಿಯವಾಗಿದ್ದರೆ, ರಾಜ್ಯವನ್ನೇ ಪರಿತ್ಯಜಿಸಲು ಆರಾಧ್ಯನು ಸಿದ್ಧವಾಗಿದ್ದನು. ಅವನು ರಾಜನನ್ನು

ಅಂತರಂಗದಲ್ಲಿ ಕಂಡು ಗರಳಪುರಿಯ ಪ್ರಸ್ತಾಪವನ್ನೆತ್ತಿದನು.

ರಾಜನು "ಪಂಡಿತನೇ! ಆ ಮಲ್ಲಿಗೆಯ ಸಮಾಚಾರವನ್ನು ಕೇಳಿರುವಿಯಷ್ಟೆ. ಅವಳು ಗರಳಪುರಿಯಲ್ಲಿ ಧನಕನಕಾಭರಣ ಗಳನ್ನೆಲ್ಲಾ ದಾನಮಾಡಿ ಸಂನ್ಯಾಸಿನಿಯಾಗುವಳಂತೆ" ಎಂದು ಹೇಳಿ ದನು.

ಪಂಡಿತನು, "ಹೌದು! ಚಿಕ್ಕಪ್ಪಾಜಿ ಅದೂ ಒಂದು ವಿಧವಾದ ಸ್ತುತ್ಯದಾನವೇ ಸರಿ. ಮಾಡಿದರೆ ಮಾಡಲಿ. ಅದರಿಂದ ಯಾರಿಗೇನು ಹಾನಿ ?" ಎಂದನು.

"ಏನೂಯಿಲ್ಲ! ಅವಳು ವಿದ್ಯಾವತಿ. ಈ ಚಿಕ್ಕ ವಯಸ್ಸಿನಲ್ಲಿ ಸಂನ್ಯಾಸಿನಿಯಾಗುವಳಂತೆ" ಎಂದನು.

"ಒಬ್ಬ ಗಾಯಕಿಯು ಸಂನ್ಯಾಸಿಯಾದರೇನು ? ಎಲ್ಲವನ್ನೂ ದಾನ ಮಾಡಿದರೇನು ? ಅದರಲ್ಲಿ ಅಂತಹ ಪ್ರಮಾದವೇನಿದೆ ? ಮಹಾ ರಾಜರು ಅವಳ ದರ್ಶನಾರ್ಥವಾಗಿ ಗರಳಪುರಿಗೆ ಹೋಗುವುದು ಅತ್ಯಂತ ಅಪಹಾಸ್ಯಕರ" ಎಂದು ಹೇಳಿದನು.

"ಮಿತ್ರನೇ ! ಅದು ಹಾಗಲ್ಲ. ನಿನ್ನಲ್ಲಿ ಬಚ್ಚಿಡುವುದೇನಿದೆ? ನೀನು ಆಪ್ತಮಿತ್ರನಾಗಿದ್ದೀಯೆ. ನಾನು ಆ ಗಾಯಕಿಯಲ್ಲಿ ಅನುರಕ್ತ ನಾಗಿದ್ದೇನೆ. ಆದರಿಂದ ಪ್ರಜೆಗಳಿಗೆ ನಷ್ಟವೇನಿದೆ ? 'ರಾಜಾನೋ ಬಹು ವಲ್ಲಭಾ :' ಎಂದು ಕವಿವಚನವಿಲ್ಲವೆ ?"

"ರಾಜನೇ ಕವಿವಚನವಿದೆ. ಆದರೆ ಅವಳು ವೇಶ್ಯೆ. ವೇಶ್ಯೆ ಯೊಬ್ಬಳನ್ನು ರಾಜರು ಮದುವೆಯಾದರೆ ಜನತೆಯು ಕ್ಷೋಭೆಗೊಳ್ಳು ತ್ತದೆ. ಎಲ್ಲ ಇಷ್ಟವಸ್ತುಗಳನ್ನು ರಾಜನು ಲೋಕಾರಾಧನೆಗಾಗಿ ಪರಿ ತ್ಯಜಿಸಬೇಕಾಗುತ್ತದೆ ನಿನ್ನಮೇಲೆ ಪ್ರಜೆಗಳಿಗೆಷ್ಟು ಅಭಿಮಾನವಿದೆಯೋ ನಿನ್ನ ಕುಲಶೀಲಗಳ ಮೇಲೆಯೂ ಅವರಿಗೆ ಅಧಿಕವಾದ ಅಭಿಮಾನವಿದೆ. ಗಾಯಕಿಯ ಮೇಲೆ ಮೋಹಗೊಂಡು ನೀನು ಗರಳಪುರಿಗೆ ಹೋದರೆ ರಾಜ್ಯಭ್ರಷ್ಟನಾದಂತೆಯೇ ಸರಿ. ಲೋಕಸಂಪ್ರದಾಯವನ್ನು ರಕ್ಷಿ

ಸುವ ರಾಜನು ಸಂಪ್ರದಾಯ ಬದ್ಧನಾಗಿರಬೇಕು. ನೀನು ಗರಳಪುರಿಗೆ ಹೋಗಬಾರದು" ಎಂದು ಹೇಳಿದನು

ರಾಜನು ಯಾವ ಮಾತನ್ನೂ ಆಡಲಿಲ್ಲ. ಪಂಡಿತನು ಅಪ್ಪಣೆ ಪಡೆದು ಹೊರಟು ಹೋದನು.

ರಾಜನಿಗೆ ಬಲವಾದ ಯೋಚನೆಗಿಟ್ಟುಕೊಂಡಿತು. ಸಿಂಗರಾರ್ಯ ನನ್ನು ಕರೆಯಿಸಿ ಆಪ್ತಾಲೋಚನೆ ನಡೆಸಿದನು. ಮಲ್ಲಿಗೆಯನ್ನು ಹೇಗಾದರೂ ಮಾಡಿ ರಾಜಧಾನಿಗೆ ಕರೆಯಿಸಬೇಕೆಂದು ಆಪ್ತಾಲೋಚನೆ ಮಾಡಿದನು. .ಸಿಂಗರಾರ್ಯನು, "ಮಹಾಪ್ರಭೂ! ಗರಳಪುರಿಗೆ ವೈಷ್ಣವರಾದ ನಾವು ಹೋಗುವಂತಿಲ್ಲ. ಅಲ್ಲಿ ಜಂಗಮರ ಕಾಟ. ಶಿವ ಭಕ್ತರ ಭಯ. ಅದಕ್ಕೆ ನಾನೊಂದುಪಾಯವನ್ನು ಮಾಡುತ್ತೇನೆ. ಹೇಗಾದರೂ ಮಾಡಿ ಆ ಗಾಯಕಿಯನ್ನು ಇಲ್ಲಿಗೆ ಕರೆತರುತ್ತೇನೆ" ಎಂದು ಶಪಥಪೂರ್ವಕವಾಗಿ ಹೇಳಿ ಹೊರಟು ಹೋದನು.

ಸಿಂಗರಾರ್ಯನು ಮೈಸೂರಿಗೆ ಹೋಗಿ ಚಾಮುಂಡೀಬೆಟ್ಟದ ಕಿಬ್ಬಿಯಲ್ಲಿ ವಾಸಮಾಡುತ್ತಿದ್ದ ಜಂಗಮನೊಬ್ಬನನ್ನು ಭೇಟಿಮಾಡಿ ದನು. ಆ ಜಂಗಮನು ಸಿಂಗರಾರ್ಯನಿಗೆ ಬಾಲ್ಯಸ್ನೇಹಿತನಾಗಿದ್ದನು. ಮೊದಲು ಅವನು ವೈಷ್ಣವನಾಗಿದ್ದನು. ಅವನಿಗೆ ವೈಷ್ಣವಧರ್ಮವು ಬೇಸರವಾಯಿತು ಮೇಲುಕೋಟೆಯಿಂದ ತಪ್ಪಿಸಿಕೊಂಡು ಬಂದು ನಂಜನಗೂಡಿನಲ್ಲಿ ಶಿವದೀಕ್ಷೆಯನ್ನು ಸ್ವೀಕರಿಸಿದ್ದನು. ಅವನು ಕಾಮ ಲೋಲುಪನಾಗಿದ್ದುದರಿಂದ ಅವನ ಸಂನ್ಯಾಸವು ರಾವಣಸಂನ್ಯಾಸ ವಾಗಿದ್ದಿತು. ಅನೇಕ ಸ್ತ್ರೀಯರನ್ನು ಅವನು ಆಕರ್ಷಣೆಮಾಡಿದ್ದನು. ಮಂತ್ರ, ಯಂತ್ರ, ತಂತ್ರ, ಔಷಧಗಳ ನೆಪದಲ್ಲಿ ನಾನಾವಿಧವಾದ ಹೆಂಗಸರು ಅವನಲ್ಲಿಗೆ ಬಂದು ಹೋಗುತ್ತಿದ್ದರು. ಆ ಸಂನ್ಯಾಸಿಯು ಕಾಮುಕನಾಗಿಯೂ ದ್ರವ್ಯಾಶಾಪೂರಿತನಾಗಿಯೂ ಇದ್ದನು. ಸಿಂಗರಾ ರ್ಯನು ಅವನ ದರ್ಶನಕ್ಕೆ ಹೋದಾಗ ಅವನ ಸಮೀಪದಲ್ಲಿ ಬಹು ಮಂದಿ ಭಕ್ತೆಯರು ಪ್ರಸಾದಗಳಿಗಾಗಿ ಕಾದಿದ್ದರು. ಆ ಜಂಗಮನು

ಆಡಂಬರದ ಶಿವಪೂಜೆಯನ್ನು ನೆರವೇರಿಸುತ್ತಿದ್ದನು. ಸಿಂಗರಾರ್ಯನು ಹೋಗಿ ನಮಸ್ಕರಿಸಿ ಕುಳಿತುಕೊಂಡನು. ಆ ಭಕ್ತರೆಯರೆಲ್ಲರಿಗೂ ಮನಸ್ಸಿನಲ್ಲಿ ಕಳವಳವುಂಟಾಯಿತು. ಶಿವಪೂಜೆಯ ಮಧ್ಯದಲ್ಲಿ ವೈಷ್ಣವನು ಬಂದು ಪೂಜಾವಿಧಾನಕ್ಕೆ ಭಂಗವುಂಟಾಯಿತೆಂದು ಅವರೆಲ್ಲರೂ ಹೆದರಿದರು. ಜಂಗಮನು ಶಿವಪೂಜೆಯನ್ನು ಪೂರೈಸಿ ಎಲ್ಲರಿಗೂ ಪ್ರಸಾದವನ್ನಿತ್ತು ಕಳುಹಿಸಿದನು. ವೈಷ್ಣವನೊಬ್ಬನೇ ಜಂಗಮನ ಸಮೀಪದಲ್ಲಿ ಕುಳಿತಿದ್ದನು. ಆ ಮಂಟಪವು ನಿರ್ಮಾನುಷ್ಯವಾದಮೇಲೆ ಜಂಗಮನು "ಆರ್ಯನೆ! ಅಪರೂಪವಾಗಿ ಬಂದುದೇನು!" ಎಂದು ಪ್ರಶ್ನೆಮಾಡಿದನು

ಸಿಂಗರಾರ್ಯನು ಕೈಮುಗಿದು "ಮಿತ್ರನೆ! ನಿನ್ನ ಈ ವೈಭವವನ್ನು ನೋಡಿ ಹೋಗೋಣವೆಂದು ಬಂದೆ" ಎಂದು ಉತ್ತರವಿತ್ತನು. ಜಂಗಮನು "ಮಹಾರಾಜರ ವೈಭವದ ನೆರಳಿನಲ್ಲಿರುವ ನಿನಗೆ ಈ ಬಡ ಸಂನ್ಯಾಸಿಯ ವೈಭವವು ಅತಿಶಯವಾಗಿ ಕಾಣುತ್ತದೇನು?" ಎಂದು ಕೇಳಿದನು.

ಸಿಂಗರಾರ್ಯನು "ಗುರುದೇವಾ! ನಾನೊಂದು ರಾಜಕಾರ್ಯಾರ್ಥವಾಗಿಯೇ ನಿನ್ನಲ್ಲಿಗೆ ಬಂದಿದ್ದೇನೆ. ನಿನ್ನಿಂದ ಆ ಕಾರ್ಯಸಾಧನೆಯಾಗುತ್ತದೆಂದು ನನಗೆ ಭರವಸೆಯಿದೆ. ಈ ಕಾರ್ಯಸಾಧನೆ ಮಾಡಿದರೆ ನಿನಗೂ ಬಹಳ ಪ್ರಶಸ್ತಿಯು ಬರುತ್ತದೆ. ರಾಜನು ನಿನ್ನ ಶಿಷ್ಯನಾಗುತ್ತಾನೆ" ಎಂದು ಹೇಳಿದನು.

"ಓಹೋ! ರಾಜನು ಶಿವಭಕ್ತನಾಗುತ್ತಾನೇನು! ನಿಮ್ಮ ವೀರ ವೈಷ್ಣವರು ರಾಜನನ್ನು ಶಿವಭಕ್ತಿಗೆ ಬಿಡುವರೇನು?" ಎಂದು ಪರಿಹಾಸ್ಯ ಮಾಡಿದನು.

ಸಿಂಗರಾರ್ಯನು "ಜಂಗಮದೇವ! ನೀನರಿಯೆಯಾ? ರಾಜನು ವಿದ್ವಾಂಸನಾಗಿದ್ದಾನೆ. ಪ್ರಜಾವತ್ಸಲನಾಗಿದ್ದಾನೆ. ಅವನಿಗೆ ಶಿವ ವಿಷ್ಣು ಭೇದವು ಎಲ್ಲಿದೆ? ಎಲ್ಲ ದೇವರೂ ಸಮಾನ. ರಾಜಕಾರಣಿ

ಗಳು ಈ ಶಿವ – ವೈಷ್ಣವ ಭೇದವನ್ನು ರಾಜ್ಯಕ್ಕೆ ಹಚ್ಚಿ ತಮ್ಮ ಕಾರ್ಯ ವನ್ನು ಸಾಧನೆ ಮಾಡಿಕೊಳ್ಳುತ್ತಾರೆ " ಎಂದನು.

ಜಂಗಮನು, "ಓಹೋ! ಈಗ ಶೈವರ ಕಾಲವು ಬಂದಿದೆಯೇನು? ಅದಕ್ಕೆ ವೈಷ್ಣವಕುಲೋತ್ಪನ್ನನಾದ ನೀನು ಸಹಾಯಕನೇನು ?" ಎಂದನು.

"ಇಲ್ಲ ! ಇಲ್ಲ ! ಇದರಲ್ಲಿ ಶಿವ – ವೈಷ್ಣವ ವಿಚಾರಗಳೇನೂ ಇಲ್ಲ. ಇದು ರಾಜರ ಆತ್ಮೀಯ ವಿಚಾರವಾಗಿದೆ."

ಜಂಗಮನು " ಸಿಂಗರಾರ್ಯ! ಸರ್ವಸಂಗ ಪರಿತ್ಯಾಗಿಯಾದ ಈ ವಿರಕ್ತ ಜಂಗಮನಿಂದ ಅಂತಹ ರಾಜಕಾರ್ಯವಾವುದು ಸಾಧ್ಯ ವಾದೀತು ?"

" ಜಂಗಮನೇ ನೀನು ಸರ್ವಸಂಗ ಪರಿತ್ಯಾಗಿಯೆಂದು ನನ್ನನ್ನೂ ನಂಬಿಸಬೇಕೆಂದುಕೊಂಡಿರುವೆಯಾ ? ಮಂತ್ರ, ತಂತ್ರ ಮಾಯಾ ಜಾಲಗಳಿಂದ ನೀನು ಯಾರನ್ನು ಬೇಕಾದರೂ ಗೆಲ್ಲಬಲ್ಲೆ ಈ ನಿನ್ನ ಭಕ್ತ ವೃಂದವೇ ಅದಕ್ಕೆ ಸಾಕ್ಷಿ ನೀನು ಸಿದ್ಧಕಾರ್ಯನಾಗಿದ್ದೀಯೆ. ಆದುದರಿಂದಲೇ ನಿನ್ನಲ್ಲಿಗೆ ಬಂದಿದ್ದೇನೆ."

" ಪ್ರಿಯಮಿತ್ರನೇ ! ನಾನು ನಿಮ್ಮ ರಾಜನ ಕಾರ್ಯಕ್ಕೆ ಸಿದ್ಧ ನಾಗಿರುವೆ. ಹೇಳು. ಅದೇನು ಕಾರ್ಯ ?"

" ಗುರುವೇ ನೋಡು. ಗರಳಪುರಿಯಲ್ಲಿ ಮಲ್ಲಿಗೆಯು ನಡೆಯಿಸು ತ್ತಿರುವ ಗಣಾರಾಧನೆಗಳನ್ನು ದಾನ ಧರ್ಮಗಳನ್ನು ಕೇಳಿರುವೆಯಷ್ಟೆ !"

" ಹೌದು ಕೇಳಿದ್ದೇನೆ. ಆ ಹೆಣ್ಣುಮಗಳು ಸರ್ವಸ್ವವನ್ನೂ ದಾನಮಾಡಿ ಸಂನ್ಯಾಸಿನಿಯಾಗುವಳಂತೆ."

" ಓಹೋ ನೀನು ಸ್ವತಃ ಹೋಗಿ ನೋಡಿಕೊಂಡು ಬಂದಿರುವೆ ಯೇನು ?"

" ಇಲ್ಲವಯ್ಯಾ ! ನಾನು ಹೋಗಲಿಲ್ಲ."

" ಏಕೆ ಹೋಗಲಿಲ್ಲ ?"

" ಅದೆಲ್ಲವೂ ಗರಳಪುರಿಯ ಮಹಂತನ ಅಧಿಕಾರದಲ್ಲಿ ನಡೆಯುತ್ತಿದೆ. ಮೊದಲಿನಿಂದಲೂ ಅವನಿಗೆ ನನ್ನನ್ನು ಕಂಡರಾಗದು. ಅದಕ್ಕೆ ದೂರವಿರುವುದೇ ಒಳ್ಳೆಯದೆಂದು ನಾನು ಭಾವಿಸಿದ್ದೇನೆ."

" ಏಕೆ ಆ ಮಹಂತನು ಪಾಷಂಡನೇನು ?"

" ನಾನು ಹಾಗೆ ಹೇಳಲಾರೆ. ಅವನು ವಿದ್ಯಾವಂತನೂ ಅಲ್ಲ. ತಪಸ್ವಿಯೂ ಅಲ್ಲ. ಆದರೆ ಜನರೆಲ್ಲರೂ ಅವನನ್ನು ಮಾತನಾಡುವ ನಂಜುಂಡೇಶ್ವರನೆಂದು ಹೇಳುತ್ತಾರೆ."

" ಯಾರಲ್ಲಿ ಎಂತಹ ಮಹತ್ವವಿದೆಯೋ ಅರಿಯ ಬಲ್ಲವರಾರು ?"

" ಮಹತ್ವವೇನೂ ಇಲ್ಲ. ಅವನು ಪ್ರತ್ಯಕ್ಷವಾಗಿ ವಿಷವನ್ನು ನುಂಗುತ್ತಾನೆ. ಅದೇ ಅವನ ಪವಾಡ ಅದರಿಂದ ಭಕ್ತರೆಲ್ಲರೂ ಮರುಳಾಗಿದ್ದಾರೆ. ಭಕ್ತೆಯರಂತೂ ಅವನನ್ನು ಕಂಡರೆ ಹುಚ್ಚಾಗುತ್ತಾರೆ."

" ಈ ಕಲಿಗಾಲದಲ್ಲಿ ಅದೂ ಒಂದು ಪ್ರಭಾವವೆ !"

" ಸಿಂಗರಾರ್ಯ, ನೀನೂ ಹುಚ್ಚನಾಗಿದ್ದೀಯೆ. ಅದರಲ್ಲೇನಿದೆ ? ಗಿಡ ಮೂಲಿಕೆಗಳನ್ನು ಅರಿತುಕೊಂಡಿದ್ದಾನೆ. ಅದರಿಂದ ಅವನು ಈ ಪವಾಡವನ್ನು ಮಾಡುತ್ತಾನೆ. ಪೂರ್ವಕಾಲದಲ್ಲಿ ರಾಜಕಾರಣಿಗಳು ವಿಷಕನ್ಯೆಗಳನ್ನು ತರಬೇತು ಮಾಡುತ್ತಿರಲಿಲ್ಲವೇ ?"

" ಹೌದು ! ಹೌದು. ನೀನಿನ್ನೂ ಆ ಪವಾಡವನ್ನು ಕಲಿತಿಲ್ಲವೋ ?"

" ಆ ಗುಟ್ಟನ್ನು ತಿಳಿದಿದ್ದೇನೆ. ಆದ್ದರಿಂದಲೇ ಆ ಮಹಂತನ ಮಹಾತ್ಮ್ಯವು ನನ್ನೆದುರಿಗೆ ಸಾಗುವುದಿಲ್ಲ. ನನ್ನ ಕೈಯಿಂದ ವಿಷವನ್ನು ಕೊಟ್ಟರೆ ತಕ್ಷಣ ಅವನು ಛಟ್ಟಾಗಿ ಹೋಗುತ್ತಾನೆ. ಅದೇ ನನಗೂ ಅವನಿಗೂ ಇರುವ ವೈರ."

" ಕೇಳು ಜಂಗಮ. ಅದೇ ಪವಾಡದಿಂದಲೇ ಆ ಮಲ್ಲಿಗೆಯು ಮೋಸ ಹೋಗಿರಬಹುದು. ನಿನ್ನಲ್ಲಿ ಮುಚ್ಚು ಮರೆಯೇನು. ಅವಳು

ಅದ್ವಿತೀಯಳಾದ ಗಾಯಕಳು. ಅವಳ ನರ್ತನಕೌಶಲ್ಯವು ಅನ್ಯಾದೃಶವಾದುದು. ರೂಪಲಾವಣ್ಯಗಳನ್ನಂತೂ ಹೇಳಬೇಕಾದುದೇ ಇಲ್ಲ. ನಮ್ಮ ರಾಜನು ಅವಳನ್ನು ಮೆಚ್ಚಿ ಮರುಳಾಗಿ ಬಂಗಾರದವಳನ್ನಾಗಿ ಮಾಡಿಕೊಂಡನು. ಅವಳು ದಾನಮಾಡುತ್ತಿರುವ ಈ ಐಶ್ವರ್ಯವೆಲ್ಲವೂ ರಾಜ ಪ್ರಸಾದದಿಂದ ಬಂದುದು. ಈ ಮಹಂತನು ಮಂಕುಬೂದಿಯನ್ನೆರಚಿ ಆ ಧನಕನಕಗಳನ್ನೆಲ್ಲಾ ವೆಚ್ಚಮಾಡಿಸಿದ್ದಾನೆ. ಹೋದರೆ ಹೋಗಲಿ. ಇಂತಹ ಹೆಣ್ಣಿನ ಐಶ್ವರ್ಯವು ಸ್ಥಿರವಾಗಿರುವುದೆಂತು? ಆ ಮಲ್ಲಿಗೆಯನ್ನು ವಶಪಡಿಸಿಕೊಂಡು ಸಂನ್ಯಾಸಿನಿಯಾಗಿ ಮಾಡಬೇಕೆಂದು ಸಂಕಲ್ಪಿಸಿದ್ದಾನೆ"

"ಆ ವೃದ್ಧ ಮಹಂತನಿಗೆ ಈ ತರುಣಿಯನ್ನು ವಶಪಡಿಸಿಕೊಂಡರೆ ಬರುವ ಭಾಗ್ಯವೇನು? 'ವೃದ್ಧಸ್ಯ ತರುಣೀ ವಿಷಂ' ಎಂಬುದನ್ನು ಕೇಳಿಲ್ಲವೆ?"

"ಹೌದು ಅದರಲ್ಲೊಂದು ತಂತ್ರವಿದೆ. ಮಲ್ಲಿಗೆಯನ್ನು ವಶಪಡಿಸಿಟ್ಟುಕೊಂಡರೆ ರಾಜನನ್ನು ಸೆಳೆಯಬಹುದು. ಕೇದಿಗೆಯ ಹೂವಿನ ವಾಸನೆಗೆ ಸರ್ಪವು ಬರುವಂತೆ ರಾಜನು ಬಂದು ಮಹಂತನಿಗೆ ಶರಣಾಗತನಾಗುತ್ತಾನೆ. ಇದೇ ಆ ವೃದ್ಧನ ತಂತ್ರ. ಅದನ್ನು ತಪ್ಪಿಸಬೇಕೆಂದು ನಾನು ನಿನ್ನಲ್ಲಿ ಶರಣಾಗತನಾಗಿ ಬಂದಿದ್ದೇನೆ."

"ಸಿಂಗರಾರ್ಯ ನೀನು ಹೇಳುವುದೆಲ್ಲಾ ನಿಜವೇ ಇರಬಹುದು. ಆ ಮಹಂತನೇನೋ ಅಂತಹ ಮಾಯಾವಿಯೇ ಹೌದು. ರಾಜನು ಅವನ ಕೈಗೆ ಸಿಕ್ಕಿದರೆ ಅನರ್ಥವೇ ಆಗುತ್ತದೆ. ಆದರೆ ನಾನೇನು ಮಾಡಬಲ್ಲೆ?"

"ಜಂಗಮದೇವ ಇಷ್ಟೊಂದು ಮಾಯಾಮಂತ್ರಗಳನ್ನು ಕಲಿತಿರುವ ನೀನಲ್ಲದೇ ಮತ್ತಾರು ಈ ಕಾರ್ಯವನ್ನು ಮಾಡಬಲ್ಲರು?"

"ಆ ಮಾತು ಹಾಗಿರಲಿ. ನಾನೇನು ಮಾಡಬೇಕೆಂಬುದನ್ನು ಹೇಳು."

" ಏನೂಯಿಲ್ಲ. ನೀನು ಆ ಮಲ್ಲಿಗೆಯನ್ನು ಹೇಗಾದರೂ ಇಲ್ಲಿಗೆ ಕರೆತಂದು ಬಿಡಬೇಕು. ನಾನು ರಾಜನನ್ನು ಕರೆತಂದು ನಿನಗೆ ಶರಣಾಗತನನ್ನಾಗಿ ಮಾಡುವೆನು. ಆಗ ನಿನ್ನ ಪ್ರಭಾವವು ನೂರುಮಡಿಯಾಗುವುದು. ರಾಜನ ಗುರುವಾದ ನಿನ್ನ ಇಷ್ಟಾರ್ಥಗಳೆಲ್ಲವೂ ಫಲಿಸುವುದು "

" ನಾನು ಮಲ್ಲಿಗೆಯನ್ನು ವಶಪಡಿಸಿಕೊಂಡು ಇಲ್ಲಿಗೆ ಹಾಗೆಯೇ ಕರೆತರಬಲ್ಲೆ. ಆದರೆ ರಾಜನು ನನ್ನ ಅಧೀನನಾಗುವನೆಂಬ ನಂಬಿಕೆಯು ಮಾತ್ರ ನನಗಿಲ್ಲ. ಏಕೆಂದರೆ ಆ ರಾಜನು ಪಂಡಿತಾರಾಧ್ಯನ ಹಿಡಿತದಲ್ಲಿದ್ದಾನೆ. ಬುದ್ಧಿ ಚಮತ್ಕಾರಗಳಲ್ಲಿ ಆ ಆರಾಧ್ಯನನ್ನು ಗೆಲ್ಲಬಲ್ಲವರಾರೂ ಇಲ್ಲ. ನನ್ನ ಆಟವೆಲ್ಲವೂ ಬಯಲಾಗಿ ಹೋಗುತ್ತದೆ."

" ಜಂಗಮನೇ ! ನೀನು ಎಲ್ಲವನ್ನೂ ಬಲ್ಲೆ. ಆದರೆ ಮಲ್ಲಿಗೆಯ ಗುಟ್ಟನ್ನರಿಯೆ. ಅದನ್ನು ನಾನು ಕಂಡುಹಿಡಿದಿದ್ದೇನೆ. ಪಂಡಿತಾರಾಧ್ಯನು ಜಗತ್ತನ್ನೇ ಜಯಿಸ ಬಲ್ಲ ಚಾಣಕ್ಯನೆಂಬುದನ್ನು ನಾನೊಪ್ಪುತ್ತೇನೆ. ಆದರೆ ಈ ಮಲ್ಲಿಗೆಯ ಪ್ರಭಾವಕ್ಕೆ ಅವನೂ ಮರುಳಾಗಿ ಹೋಗಿದ್ದಾನೆ. ಆರಾಧ್ಯನು ಮಲ್ಲಿಗೆಯ ಆಟದಗೊಂಬೆ. ಮಲ್ಲಿಗೆಯ ಮುಂದೆ ಅವನ ತಲೆ ಬುರುಡೆಯೂ ಅವಳ ತಂಬೂರಿಯ ಬುರುಡೆಯಂತೆ ಟೊಳ್ಳಾಗಿ ಹೋಗಿದೆ. ಒಂದು ಏಟಿನಲ್ಲಿ ಇಬ್ಬರನ್ನೂ ಜಯಿಸಿದಂತಾಗುತ್ತದೆ. ಮಲ್ಲಿಗೆಯನ್ನು ವಶಪಡಿಸಿಟ್ಟುಕೊಂಡರೆ ರಾಜನೂ ಆರಾಧ್ಯನೂ ಇಬ್ಬರೂ ನಮ್ಮ ವಶವರ್ತಿಗಳಾಗುತ್ತಾರೆ. ಅದಕ್ಕೆ ನೀನೇ ಸಮರ್ಥ. ಈಗ ಸಮಯವೂ ಅಂತಹದೇ ಒದಗಿದೆ."

ಜಂಗಮನು ಬಹಳ ಹೊತ್ತು ಆಲೋಚನೆ ಮಾಡಿ, " ಆಗಲಿ ! ಈ ಕಾರ್ಯವನ್ನು ಒಪ್ಪಿಕೊಂಡಿದ್ದೇನೆ. ನನಗೆ ಯಾವುದಾದರೊಂದು ಸಂದರ್ಭದಲ್ಲಿ ಆ ಮಹಂತನಿಗೆ ಒಂದು ಪೆಟ್ಟುಕೊಡಬೇಕೆಂದು ಬಹು ದಿನಗಳಿಂದ ಆಶೆಯಿದಿತು. ಆ ಹಠವನು ಈಗ ಗೆದು ಕೊಳುತ್ತೇನೆ.

ಮಲ್ಲಿಗೆಯನ್ನು ತಂದು ನನ್ನ ಮಠದಲ್ಲಿಡುತ್ತೇನೆ. ಪವಾಡ ಪುರುಷನಾದ ಮಹಂತನು ಬಂದರೆ ನನ್ನ ವಿಷವನ್ನು ತಿಂದು ಮಲ್ಲಿಗೆಯನ್ನು ಕರೆದು ಕೊಂಡು ಹೋಗಬಹುದೆಂದು ಪಣ ಕಟ್ಟುತ್ತೇನೆ. ವಿಷವನ್ನು ತಿರಸ್ಕರಿಸಿದರೆ ಮಲ್ಲಿಗೆಗೆ ತಾನೇ ಗುಟ್ಟು ಗೊತ್ತಾಗಿ ಹೋಗುತ್ತದೆ. ಹರದಿಂದ ಮಹಂತನು ವಿಷವನ್ನು ತಿಂದರೆ ಅಲ್ಲೇ ಹರ-ಹರ ಆಗಿ ಹೋಗುತ್ತಾನೆ. ನೋಡು ಸಿಂಗರಾರ್ಯ, ನಿನ್ನ ಮಾತಿನಂತೆ ನಾನು ಈ ಕಾರ್ಯದಲ್ಲಿ ಪ್ರವೇಶ ಮಾಡುತ್ತೇನೆ. ನೀನು ನನಗೆ ಸಹಾಯಕನಾಗಿ ಬರಬೇಕು. ನನಗೇನಾದರೂ ಅಪಾಯ ಸಂಭವಿಸದಂತೆ ನೋಡಿಕೊಳ್ಳಬೇಕು. ನಂಜನಗೂಡಿನ ತಮ್ಮಡಿಗಳು ಸಾಮಾನ್ಯರಲ್ಲ. ಶಿವಭಕ್ತರಾದರೂ ಜಂಗಮನನ್ನು ಕೊಲ್ಲಲು ಹೇಸುವುದಿಲ್ಲ" ಎಂದನು.

ಸಿಂಗರಾರ್ಯನು "ಅದೇನೂ ಭಯವಿಲ್ಲ. ನಾನು ಎಲ್ಲವನ್ನೂ ಸಿದ್ಧಪಡಿಸಿಕೊಂಡೇ ಬಂದಿದ್ದೇನೆ. ಹತ್ತಿಪ್ಪತ್ತು ಮಂದಿ ರಾಜಭಟರನ್ನು ನನ್ನೊಡನೆ ಕರೆತಂದಿದ್ದೇನೆ. ನಾವೂ ವೇಷಾಂತರದಿಂದ ಯಾತ್ರಿಕರ ಗುಂಪಿನಲ್ಲಿ ನಿನ್ನ ಕಣ್ಣಿನ ನೋಟದಲ್ಲಿಯೇ ಇರುತ್ತೇವೆ. ನೀನು ಕಣ್ಣು ಹಾರಿಸಿದರೆ ತಲೆ ಬುರುಡೆಗಳು ಚಂಡಾಡಿ ಹೋಗುತ್ತವೆ. ಏನೂ ಜರುಗದಿದ್ದರೆ ನಾವು ಅಗೋಚರವಾಗಿಯೇ ಇರುತ್ತೇವೆ. ಅಲಕ್ ನಿರಂಜನ್" ಎಂದನು.

ಅವರಿಬ್ಬರ ಮಾತು ಕಥೆಗಳು ಪೂರೈಸಿದವು. ಭಕ್ತಾದಿಗಳು ಹೊರಗಿನ ಅಂಗಳದಲ್ಲಿ ಪ್ರಸಾದಕ್ಕಾಗಿ ಕಾದಿದ್ದರು, ಜಂಗಮದೇವನು ಹೊರಗೆ ಬಂದು ಅಟ್ಟಹಾಸದಿಂದ ಭಕ್ತಾದಿಗಳಿಗೆ ಪ್ರಸಾದವನ್ನು ನೀಡಿದನು. ಎಲ್ಲರೂ ಪಾದಮುಟ್ಟಿ ನಮಸ್ಕರಿಸಿ ಹೊರಟು ಹೋದರು. ಸಿಂಗರಾರ್ಯನೂ ಸಂಕೇತವನ್ನು ಮಾಡಿಕೊಂಡು ಆ ಜಂಗಮನ ಮಠದಿಂದ ಹೊರಟು ಹೋದನು.

ಗರಳಪುರಿ ಕ್ಷೇತ್ರದಲ್ಲಿ ಮಲ್ಲಿಗೆಯು ಸ್ನಾನಾದಿಗಳನ್ನು ಪೂರೈಸಿ ಹಣೆಯಲ್ಲಿ ವಿಭೂತಿ ಕುಂಕುಮಗಳನ್ನು ಧರಿಸಿಕೊಂಡು ದೇವಾಲಯದಲ್ಲಿ ದೇವರ ಸೇವೆಯನ್ನು ಸಲ್ಲಿಸಿ ಮಹಂತನ ಮಠದ ಮುಂದೆ ದಾನಧರ್ಮ ಗಳನ್ನು ನೀಡುತ್ತಿದ್ದಳು. ಆ ಸಮಯಕ್ಕೆ ಸರಿಯಾಗಿ ತೇಜಸ್ವಿಯಾದ ಜಂಗಮನು ಮರದ ಹಾವಿಗೆಗಳನ್ನು ಮೆಟ್ಟಿ ಕಾಷಾಯದ ನಿಲುವಂಗಿ ಯನ್ನು ತೊಟ್ಟು ವಿಭೂತಿ ರುದ್ರಾಕ್ಷಿಗಳಿಂದ ಅಲಂಕೃತವಾಗಿದ್ದ ಕೈಯ್ಯಲ್ಲಿ ತ್ರಿಶೂಲವನ್ನು ಧರಿಸಿ ಆ ಸ್ಥಳಕ್ಕೆ ಬಂದು ನಿಂತನು. ಆ ತೇಜಸ್ವಿಯಾದ ಜಂಗಮದೇವನನ್ನು ಕಂಡು ಭಕ್ತಿಭಾವದಿಂದ ನಮಸ್ಕರಿಸಿ ಮಲ್ಲಿಗೆಯು "ಗುರುದೇವ! ಈ ದಿವಸ ನನ್ನ ಪುಣ್ಯವು ಫಲಿಸಿದಂತಾಯಿತು. ಸಾಕ್ಷಾತ್ ಪರಶಿವನೇ ದರ್ಶನವಿತ್ತಂತೆ ಭಾವಿಸುತ್ತೇನೆ. ನೀನು ಇಂದು ನನ್ನ ಭಿಕ್ಷೆಯನ್ನು ಸ್ವೀಕರಿಸಬೇಕು. ನಿನಗಿಷ್ಟವಾದ ದಾನ ಧರ್ಮಗಳನ್ನು ಪರಿಗ್ರಹಿಸಬೇಕು" ಎಂದು ಪ್ರಾರ್ಥನೆ ಮಾಡಿ ದಳು.

ಜಂಗಮದೇವನು "ಮಹಾದೇವನು ಶುಭವನ್ನುಂಟುಮಾಡಲಿ" ಎಂದು ಹರಸಿದನು. "ದೇವಿ! ನೀನು ಮಹತ್ತರವಾದ ದಾನಗಳನ್ನು ಗಣಾರಾಧನೆಗಳನ್ನು ಮಾಡಿಸಿ ಪುಣ್ಯವತಿಯಾಗಿರುವೆ. ನನ್ನದೊಂದು ಬೇಡಿಕೆಯಿದೆ. ಪರಶಿವನ ಪ್ರೇರಣೆಯಿಂದಲೇ ಬಂದಿದ್ದೇನೆ. ಆ ಬೇಡಿಕೆ ಯನ್ನು ನೀನು ಈಡೇರಿಸಿಕೊಟ್ಟರೆ ನಾನು ಭಿಕ್ಷೆಮಾಡುತ್ತೇನೆ. ಇಲ್ಲ ದಿದ್ದರೆ ಉಪವಾಸ. ಆಮರಣಾಂತ ಪ್ರಾಯೋಪವೇಶಮಾಡಿ ಕೈಲಾಸಕ್ಕೆ ತೆರಳುತ್ತೇನೆ. ಈ ಜನ್ಮದಲ್ಲಿ ಈ ಲೋಕದಲ್ಲಿ ಮಾಡಬೇಕಾದ ಕೆಲಸಗಳು ಮತ್ತಾವುವೂ ಉಳಿದಿಲ್ಲ" ಎಂದು ಹೇಳಿದನು.

ಮಲ್ಲಿಗೆಯು ಕೈಜೋಡಿಸಿ, "ಪರಶಿವನೆ! ನಿನ್ನ ಕೋರಿಕೆಯನ್ನು

ತಿಳಿಸು. ನಿನ್ನ ಇಷ್ಟಪೂರ್ತಿಗಾಗಿ ನನ್ನ ಸರ್ವಸ್ವವನ್ನೂ ಸಂತೋಷ ದಿಂದ ದಾನಮಾಡುತ್ತೇನೆ. ಅದೇ ನನ್ನ ಸಂಕಲ್ಪ" ಎಂದು ಹೇಳಿದಳು.

ಜಂಗಮನು "ದೇವಿ! ನಿನ್ನ ಜನ್ಮಸ್ಥಳ ಮೈಸೂರು. ಆ ಮೈಸೂರಿನಲ್ಲಿ ಬಹುಕಾಲದಿಂದಲೂ ತ್ರಿಣೇತ್ರನ ದೇವಾಲಯವಿರುವುದು ನಿನಗೆ ತಿಳಿದಿರಬಹುದು ಆ ದೇವಾಲಯವು ಬ್ರಾಹ್ಮಣರ ದೇವಾ ಲಯ. ಶಿಥಿಲವಾಗಿ ಹೋಗಿದೆ. ಆ ದೇವಾಲಯವನ್ನು ಜೀರ್ಣೋ ದ್ಧಾರಮಾಡಿ ಗೋಪುರವನ್ನು ಕಟ್ಟಿ ಚಿನ್ನದಶಿಖರಗಳನ್ನು ಹಾಕ ಬೇಕೆಂದು ಪರಶಿವನ ಅಪ್ಪಣೆಯಾಗಿದೆ. ಅದಕ್ಕೆ ಹತ್ತು ಸಹಸ್ರ ವರಹ ಗಳ ಹೊನ್ನುಬೇಕು. ನೀನೇ ಬಂದು ನಿಂತು ಆ ಕಾರ್ಯವನ್ನು ಪೂರೈಸಿದರೂ ಸಂತೋಷ. ಆ ಶ್ರೇಯಸ್ಸು, ಯಶಸ್ಸು, ಪುಣ್ಯ ಎಲ್ಲವೂ ನಿನಗೆ ಸಿಕ್ಕುವುದು. ನನ್ನದು ಪ್ರೇರಣೆಯು ಮಾತ್ರ ಆ ಪ್ರೇರಣೆಯೂ ಕೂಡ ಪರಮೇಶ್ವರನದು" ಎಂದು ಹೇಳಿದನು.

ಮಲ್ಲಿಗೆಯು ನೀಡಿದ ಕೈಯ್ಯನ್ನು ಹಿಂತೆಗೆಯಲಿಲ್ಲ ಜಂಗಮನು ಎವೆಯಿಕ್ಕಲಿಲ್ಲ. ಜಂಗಮನು ಕಣ್ಣುಬಿಟ್ಟು ನೋಡುತ್ತಿದ್ದನು. ಮಲ್ಲಿಗೆಯು ಹಾಗೆಯೇ ಜ್ಞಾನಶೂನ್ಯಳಾಗಿ ಕುಕ್ಕರಿಸಿಬಿಟ್ಟಳು. ಸಮೀಪದಲ್ಲಿದ್ದ ಚಾಮುಂಡಿಯು ಅವಳನ್ನು ಹಿಡಿದುಕೊಂಡಳು. ಜಂಗಮರು, ಸಾಧುಗಳು, ಸಂನ್ಯಾಸಿಗಳು, ದೀನದರಿದ್ರರು ಸ್ಥಂಭೀಭಾವ ವನ್ನು ಹೊಂದಿದ್ದರು. ಬರಬರುತ್ತಾ ಮಲ್ಲಿಗೆಗೆ ಪೂರ್ತಿಯಾಗಿ ಜ್ಞಾನ ಶೂನ್ಯಾವಸ್ಥೆಯು ಪ್ರಾಪ್ತವಾಯಿತು. ಪರಿಚಾರಿಕೆಯರು ಎತ್ತಿಕೊಂಡು ಹೋಗಿ ಮಲ್ಲಿಗೆಯು ಬಿಡಾರಮಾಡಿದ್ದ ಛತ್ರದಲ್ಲಿ ಮಲಗಿಸಿದರು. ಎಲ್ಲರ ಮನವೂ ಜಂಗಮನ ವಿಷಯದಲ್ಲಿ ಪ್ರಕ್ಷುಬ್ಧವಾಯಿತು. ಜಂಗ ಮನು ಮಾತ್ರ ಶಾಂತಭಾವದಿಂದ ಛತ್ರದ ಪಡಸಾಲೆಯಮೇಲೆ ಯೋಗಾಸನಾಸೀನನಾಗಿ ಕುಳಿತಿದ್ದನು.

ಸುಮಾರು ಮಧ್ಯಾಹ್ನ ಹನ್ನೆರಡು ಗಂಟೆಯ ಸಮಯವಾಗಿರ

ಬಹುದು. ಜಂಗಮನು ಛತ್ರದ ಒಳಹಜಾರಕ್ಕೆ ಹೋಗಿ ನಿಂತನು. ಪರಿಚಾರಿಕೆಯರು ಶೈತ್ಯೋಪಚಾರಗಳನ್ನು ಮಾಡುತ್ತಿದ್ದರು. ಜಂಗಮನು ತಲೆಯಕಡೆ ನಿಂತುಕೊಂಡು, "ಇನ್ನೂ ಪ್ರಜ್ಞೆಯು ಬಂದಿಲ್ಲವೇ ?" ಎಂದು ಕೇಳಿದನು.

ಪರಿಚಾರಿಕೆಯರು, "ಇಲ್ಲ ! ಇಲ್ಲ !" ಎಂದು ಮೃದುನುಡಿಯಿಂದ ಉಸುರಿಸಿದರು.

ಜಂಗಮನು, "ಏಕೆ ಹೀಗಾಯಿತು ?" ಎಂದು ಪ್ರಶ್ನೆ ಮಾಡಿದನು.

ಚಾಮುಂಡಿಯು ಕ್ಷುಣ್ಣಳಾಗಿ, "ಗುರುದೇವಾ, ಮಲ್ಲಿಗೆಯಲ್ಲಿ ಇದ್ದ ಧನಕನಕಾದಿ ಸರ್ವಸ್ವವನ್ನೂ ದಾನಮಾಡಿ ಬಿಟ್ಟಿದ್ದಾಳೆ. ಈಗ ಅವಳಲ್ಲಿ ಅಷ್ಟು ಹಣವಿಲ್ಲ. ಉಳಿದಿರುವ ಅಲ್ಪಸ್ವಲ್ಪವನ್ನೂ ಇಂದು ನಾಳೆ ದಾನಮಾಡಿ ಸಂನ್ಯಾಸಿನಿಯಾಗಬೇಕೆಂದಿದ್ದಳು ಅಷ್ಟರಲ್ಲಿ ನೀನು ಬಂದು ಅಪಾರ ಧನವನ್ನು ಯಾಚಿಸಿದೆ. ಇಲ್ಲವೆಂದು ಹೇಳಲು ಬಾಯಿಲ್ಲ. ಕೊಡಲು ಕೈಯಲ್ಲಿ ಹಣವಿಲ್ಲ. ಹೀಗಾಗಿ ನನ್ನ ಈ ಸಖಿಗೆ ದಿಙ್ಮೂಢಾವಸ್ಥೆಯು ಪ್ರಾಪ್ತವಾಯಿತು. ಇದೇ ಸ್ಥಳದಲ್ಲಿಯೇ ಅವಳ ತಾಯಿಯು ಕೈಲಾಸಕ್ಕೆ ಸೇರಿಕೊಂಡಳು. ಮಲ್ಲಿಗೆಯು ಹೀಗೆಯೇ ಕೈಲಾಸಕ್ಕೆ ಹೊರಟು ಹೋಗುವಳೋ ಏನೋ. ಇದೆಲ್ಲಾ ನಿನ್ನ ಅನುಗ್ರಹ" ಎಂದು ನುಡಿದಳು ನುಡಿಯು ಕಠಿಣವಾಗಿತ್ತು. ಕಂಠವು ಗದ್ಗದಿತವಾಗಿತ್ತು. ಕಣ್ಣುಗಳು ಅಶ್ರುಮಯವಾಗಿದ್ದವು.

ಜಂಗಮದೇವನು, "ಭಕ್ತೆಯರಿರಾ ! ನೀವು ಈ ನಿಮ್ಮ ಸ್ನೇಹಿತಳನ್ನು ಬದುಕಿಸಿ ಕೊಳ್ಳಲಾರದಿದ್ದರೆ ನನಗೆ ಬಿಟ್ಟು ಹೋಗಿರಿ. ಇಷ್ಟೊಂದು ಬೆಟ್ಟದಷ್ಟು ಹಣವನ್ನು ಸಂಪಾದನೆ ಮಾಡಿ ಅದ್ಭುತ ದಾನವೆಸಗಿ ಪುಣ್ಯಾತ್ಮಳೆನಿಸಿಕೊಂಡ ಈ ಭಕ್ತಳಿಗೆ ನಾನು ಯಾಚಿಸಿದ ದಾನವನ್ನು ಕೇಳುತ್ತಲೇ ಪ್ರಜ್ಞೆತಪ್ಪಿದುದು ಆಶ್ಚರ್ಯ. ಇವಳಿಗೆ ಮನಸ್ಸು ಸ್ಥಿರವಾಗಿಲ್ಲ. ಶಿವದೀಕ್ಷೆಯನ್ನು ವಹಿಸುವ ಧೈರ್ಯವು ಈ

ಪುಣ್ಯಾತ್ಮಳಿಗಿಲ್ಲ. ಅದರ ಪ್ರತ್ಯಕ್ಷ ಪರೀಕ್ಷೆಯನ್ನು ಮಾಡಿಕೊಟ್ಟಿದ್ದೇನೆ ನಿಮ್ಮ ದೊಡ್ಡ ಮಹಂತನಾಗಲೀ ಅಥವಾ ಯಾವನಾದರೂ ತಪಸ್ವಿ ಯಾದ ಜಂಗಮನಾಗಲೀ ಈ ಮಹಾಕ್ಷೇತ್ರದಲ್ಲಿದ್ದರೆ ಇವಳನ್ನು ಬದುಕಿ ಸಲಿ. ಯಾರೂ ಅಂತಹ ಮಹಾಪುರುಷರಿಲ್ಲದಿದ್ದರೆ ಈ ಆಡಂಬ ಈ ಗುರುಪಟ್ಟಗಳೆಲ್ಲಾ ಬೂಟಾಟಿಕೆಯ ಬುಗ್ಗೆಗಳೆಂದು ಈ ಲೋಕವ ಅರಿತುಕೊಳ್ಳಲಿ. ನಾನು ಒಂದೇ ಒಂದು ಕ್ಷಣದಲ್ಲಿ ಈಕೆಯನ್ನು ಬದುಕಿಸ ಬಲ್ಲೆ" ಎಂದು ಹೇಳಿ ನದಿಯ ತೀರದ ಮಂಟಪದಲ್ಲಿ ಹೋಗಿ ಯೋಗಾರೂಢನಾಗಿ ಕುಳಿತುಕೊಂಡನು.

ಕ್ಷೇತ್ರದಲ್ಲೆಲ್ಲಾ ಗದ್ದಲವೆದ್ದಿತು. ಔಷಧ ಮಂತ್ರ ತಂತ್ರಗಳನ್ನ ರಿತ ಹಲವರು ಜಂಗಮರು ಬಂದು ನೋಡಿದರು. ಯಾರ ಆಟವೂ ಸಾಗದೇ ಹೋಯಿತು. ಮಧ್ಯಾಹ್ನದ ಸಮಯ. ದೊಡ್ಡ ಮಹಂತರಿಗೆ ಈ ವಿಷಯವನ್ನೆಲ್ಲಾ ತಮ್ಮಡಿಗಳು ವಿಜ್ಞಾಪಿಸಿದರು. ಮಹಂತರೇ ಛತ್ರಕ್ಕೆ ಬಂದು ಪಡಸಾಲೆಯಲ್ಲಿ ಜ್ಞಾನಶೂನ್ಯಳಾಗಿ ಬಿದ್ದಿರುವ ಮಲ್ಲಿಗೆ ಯನ್ನು ನೋಡಿದರು. ಮುಖದ ಕಳೆಯು ಕುಂದಿಲ್ಲ. ತೇಜೋವಿರಾಜ ಮಾನವಾಗಿದೆ. ಹಣೆಯ ಮೇಲೆ ಕೈಯಿಟ್ಟು ನೋಡಿದರು. ಬಿಸಿಯೇ ರಿದೆ. ದೇವರ ತೀರ್ಥವನ್ನು ತರಿಸಿ ಮಲ್ಲಿಗೆಯ ತಲೆಯ ಮೇಲೆ ಮೈಮೇಲೆಲ್ಲಾ ಪ್ರೋಕ್ಷಿಸಿ "ಗಣಾರಾಧನೆಯು ನಡೆಯಲಿ. ದೇವರು ದೊಡ್ಡವನು" ಎಂದು ಹೇಳಿ ಮಲ್ಲಿಗೆಯ ತಲೆಯ ಸಮೀಪದಲ್ಲಿ ಕುಳಿತು ಬಿಟ್ಟರು.

ಜಂಗಮರ ಗಣಾರಾಧನೆಗೆ ಆರಂಭವಾಯಿತು. ಮೃಷ್ಟಾನ್ನ ಭೋಜನ ಮಾಡಿ ಮಲ್ಲಿಗೆಗೆ ಒಳ್ಳೆಯದಾಗಲಿ ಎಂದು ಎಲ್ಲರೂ ಹರಸಿ ಹೊರಟು ಹೋದರು. ಸಂಧ್ಯಾಕಾಲದ ಸಮಯಕ್ಕೆ ಮಲ್ಲಿಗೆಯ ಶರೀರವು ತಣ್ಣಗಾಗುತ್ತ ಬಂದಿತು. ಮಹಂತನು ನಿರಾಶನಾಗಿ "ಪುಣ್ಯಾತ್ಮ ಳನ್ನು ಪರಶಿವನು ಪಾದಕ್ಕೆ ಸೇರಿಸಿಕೊಂಡನು. ಆ ಶಿವಭಕ್ತಳಿಗೆ ಮುಕ್ತಿಯು ಲಭಿಸಿತು" ಎಂದು ಹೇಳಿ ಆ ಸ್ಥಳವನ್ನು ಬಿಟ್ಟು ಹೊರಟ

ಹೋದನು. ತಮ್ಮಡಿಗಳು ಯಥಾಪ್ರಕಾರ ಮಲ್ಲಿಗೆಯನ್ನು ಸಮಾಧಿ ಮಾಡಲು ಓಡಾಟಕ್ಕೆ ಆರಂಭಮಾಡಿದರು. ಚಾಮುಂಡಿಯು ಅವರೆಲ್ಲ ರನ್ನೂ ದೂರಕಳಿಸಿ ಆ ಊರಿನಲ್ಲಿರುವ ವೈದ್ಯರನ್ನು ಕರೆಸಿದಳು ವೈದ್ಯರು ಬಂದು ನೋಡಿ "ಜೀವವಿದೆ. ಅಪಾದಮಸ್ತಕವಾಗಿ ಅಂತಃನಾಡಿಯು ಜಾಗರಿತವಾಗಿದೆ. ಕರಣ ಶೂನ್ಯವಾದರೆ ಬಹಿರ್ನಾಡಿಗಳು ಸ್ತಬ್ಧವಾಗುತ್ತವೆ. ಮಲ್ಲಿಗೆಗೆ ಮರಣವು ಪ್ರಾಪ್ತವಾಗಿಲ್ಲ. ಮುಖದಲ್ಲಿ ಕಳೆಯಿದೆ" ಎಂದು ಹೇಳಿ ಹೊರಟು ಹೋದರು.

ಚಾಮುಂಡಿಯು ಸ್ವಲ್ಪ ಹೊತ್ತು ಯೋಚನೆಮಾಡಿ ಪ್ರಾತಃಕಾಲ ದರ್ಶನವಿತ್ತ ಜಂಗಮನನ್ನು ಹುಡುಕಿಕೊಂಡು ಹೊರಟಳು. ಎಲ್ಲೆಲ್ಲಿಯೋ ಹುಡುಕಿದಳು. ಕೊನೆಗೆ ನದೀತೀರದ ಮಂಟಪದಲ್ಲಿ ಯೋಗ ಪಟ್ಟವನ್ನು ಧರಿಸಿ ಕಣ್ಣುಮುಚ್ಚಿಕೊಂಡು ಧ್ಯಾನಾಸಕ್ತನಾಗಿದ್ದ ಜಂಗಮನನ್ನು ಕಂಡಳು ಸ್ವಲ್ಪಹೊತ್ತು ನಿಂತು ನಿರೀಕ್ಷಿಸಿದಳು. ಅವನು ಕಣ್ಣು ತೆರೆಯಲಿಲ್ಲ. ಧೈರ್ಯತಂದುಕೊಂಡು, "ಗುರುದೇವಾ ಜಂಗಮದೇವ !" ಎಂದು ಸಂಬೋಧಿಸಿದಳು.

ಜಂಗಮನು ಕಣ್ಣುತೆರೆದು " ಯಾರಮ್ಮಾ ? ಏಕೆ ಬಂದಿರುವೆ ?" ಎಂದು ಕೇಳಿದನು.

ಚಾಮುಂಡಿಯು "ಗುರುದೇವಾ ! ನನ್ನ ಗುರುತಾಗಲಿಲ್ಲವೇ ನಿಮಗೆ. ನಾನು ಮಲ್ಲಿಗೆಯ ಜೊತೆಯಲ್ಲಿದ್ದುದನ್ನು ಈ ದಿನ ಪ್ರಾತಃ ಕಾಲ ಕಂಡಿರಲಿಲ್ಲವೇ ?" ಎಂದಳು.

ಜಂಗಮನು " ಒಳ್ಳೇದು ! ಇಲ್ಲಿಗೇಕೆ ಬಂದೆ ? ನನ್ನಿಂದೇನು ಕಾರ್ಯ ?" ಎಂದು ದಿಟ್ಟತನದಿಂದ ಪ್ರಶ್ನೆಮಾಡಿದನು

ಚಾಮುಂಡಿಯು ವಸ್ತ್ರದಲ್ಲಿ ಕಟ್ಟಿತಂದಿದ್ದ ಹಣ್ಣುಗಳನ್ನು ಜಂಗ ಮನ ಮುಂದಿಟ್ಟು " ಗುರುದೇವಾ ! ನೀನು ಬೆಳಗಿನಿಂದ ಉಪವಾಸ ವಿರುವೆ. ಈ ಹಣ್ಣುಗಳನ್ನು ತೆಗೆದುಕೋ " ಎಂದು ಹೇಳಿದಳು.

ಜಂಗಮನು " ಇಲ್ಲ ! ಹೋಗು ನಾನು ನಿಮ್ಮ ಗಣಾರಾಧನೆ

ಗಳಲ್ಲಿ ನ್ಯಿಷ್ಟಾನ್ನ ಭೋಜನ ಮಾಡುವ ಹೊಟ್ಟೆಬಾಕ ಜಂಗಮನಲ್ಲ" ಎಂದನು.

ಚಾಮುಂಡಿಗೆ ಸ್ವಲ್ಪ ಕೋಪಬಂದಿತು. ಜಂಗಮರನ್ನೆಲ್ಲಾ ಒಟ್ಟುಗೂಡಿಸಿ ಬೈದುದು ಅವಳಿಗೆ ಸಮಾಧಾನವಾಗಲಿಲ್ಲ. "ಗುರು ದೇವಾ! ಹಾಗಾದರೆ ನೀನು ಉಪವಾಸದ್ದೈಯ್ಯನೇನು?" ಎಂದು ಕೇಳಿದಳು.

"ಹೌದು! ತಾಯಿ. ನಾನು ನನ್ನ ಸಂಕಲ್ಪವು ಪೂರ್ತಿಯಾಗುವ ವರೆಗೆ ಉಪವಾಸ ಮಾಡುತ್ತೇನೆಂದು ಸಂಕಲ್ಪ ಮಾಡಿದ್ದೇನೆ" ಎಂದನು.

ಚಾಮುಂಡಿಯು "ನಿನ್ನ ಸಂಕಲ್ಪದಿಂದ ಅನರ್ಥವಾಯಿತು. ಮಲ್ಲಿಗೆಯು ಸತ್ತೇಹೋದಳು" ಎಂದು ಆರ್ತಳಾಗಿ ನುಡಿದಳು.

"ಓಹೋ! ನಿಮ್ಮ ಮಲ್ಲಿಗೆಯು ಸತ್ತುಹೋದಳೇನು? ದೊಡ್ಡ ಮಹಂತನು ಬದುಕಿಸಿಕೊಳ್ಳಲಾರದೇ ಹೋದನೇನು? ನಿನ್ನ ಗೆಳತಿಯು ಇಷ್ಟು ದಿನಗಳು ಮಾಡಿದ ದಾನಧರ್ಮ ಗಣಾರಾಧನೆಗಳೆಲ್ಲಾ ವ್ಯರ್ಥ ವಾಗಿ ಹೋದುವೇನು?" ಎಂದನು.

ಚಾಮುಂಡಿಗೆ ಮತ್ತೂ ಕೋಪ ಬಂದಿತು "ಜಂಗಮದೇವ! ನೀನು ಶಿವಭಕ್ತನಲ್ಲವೇನು? ದಾನಧರ್ಮಗಳೂ ಗಣಾರಾಧನೆಗಳೂ ಪರಶಿವನ ಸೇವೆಯಲ್ಲವೆಂದು ಹೇಳುವೆಯೇನು? ಆ ಮಲ್ಲಿಗೆಯ ಮರಣಕ್ಕೆ ನೀನೇ ಕಾರಣ. ಗಣಾರಾಧನೆ ಮಾಡಿದ್ದರಿಂದ ಮಲ್ಲಿಗೆಯು ಸಾಯಲಿಲ್ಲ. ದಾನಧರ್ಮಗಳನ್ನು ಮಾಡಿದ್ದರಿಂದ ಅವಳು ಸಾಯ ಲಿಲ್ಲ. ನಿನ್ನಿಂದ ಸತ್ತಳು. ನಿನ್ನ ಪ್ರಾರ್ಥನೆಯನ್ನು ಈಡೇರಿಸಿ ಕೊಡಲಾರದೇ ಸತ್ತಳು."

ಜಂಗಮನು "ಒಳ್ಳೆಯದಾಯಿತು. ಎಂದಾದರೊಂದು ದಿನ ಎಲ್ಲರೂ ಸಾಯಲೇಬೇಕು. ಮನುಮಾಂಧಾತರು ಸಾಯದೇ ಉಳಿದ ರೇನು? ನಿನ್ನ ಮಲ್ಲಿಗೆಯು ಸತ್ತರೆ, ಲೋಕವು ಮುಳುಗಿಹೋಗು

ವುದೇ ? ಸಾವು ನಾಳೆಬಂದರೇನು ? ಇಂದೇ ಬಂದರೇನು ?"

" ಜಂಗಮದೇವ ನೀನು ಪರಶಿವನ ಅಪರಾವತಾರದಂತೆ ಕಾಣು ತ್ತಿರುವಿ. ನೀನು ಅಲ್ಲಿ ಆ ಮಲ್ಲಿಗೆಯ ಮರಣಶಯ್ಯೆಯ ಸಮೀಪದಲ್ಲಿ ನಿಂತು ಮಲ್ಲಿಗೆಯನ್ನು ಬದುಕಿಸಿಕೊಡುತ್ತೇನೆಂದು ನಮ್ಮಗಳೊಡನೆ ಹೇಳಲಿಲ್ಲವೇ ? ಹೇಳು ! ಈಗ ಬಂದು ಅವಳನ್ನು ಬದುಕಿಸಿಕೊಡು" ಎಂದಳು.

ಜಂಗಮದೇವನು " ಮಗಳೇ ! ನಾನು ನಿನ್ನ ಮಲ್ಲಿಗೆಯನ್ನು ಬದುಕಿಸಿದರೆ ನನ್ನ ಪ್ರಾರ್ಥನೆಯನ್ನು ಸಲ್ಲಿಸಿಕೊಡುವೆಯಾ ?"

" ಅಯ್ಯೋ ! ಗುರುದೇವಾ, ಸರ್ವಸಂಗ ಪರಿತ್ಯಾಗಿಯಾದ ನಿನಗೆ ಈ ಸುವರ್ಣದ ಹುಚ್ಚು ಏಕೆಹಿಡಿಯಬೇಕು. ನೀನು ಬಂದು ನನ್ನ ಗೆಳತಿಯನ್ನು ಏಕೆ ಪ್ರಾರ್ಥಿಸಬೇಕು. ಅವಳು ನಿನ್ನ ಪ್ರಾರ್ಥನೆಯನ್ನು ಸಲ್ಲಿಸಲಾರದೇ ಏಕೆ ಸಾವನ್ನು ಅಪ್ಪಿಕೊಳ್ಳಬೇಕು. ನೀನು ಸರ್ವಜ್ಞ ನಂತೆ ತೋರುವಿ. ಬದುಕಿರುವವರನ್ನು ಸಾಯಿಸುವಿ. ಸತ್ತವರನ್ನು ಬದುಕಿಸುತ್ತೇನೆಂದು ಹೇಳುವಿ ! ಇಂಥಾ ಬುದ್ಧಿವಂತನಿಗೆ ಹಣ ಬೇಕಾದರೆ ಹಣವಿದ್ದಲ್ಲಿ ಹೋಗಿ ಕೇಳುವಷ್ಟು ಪೂರ್ವಾಪರಜ್ಞಾನ ವಿಲ್ಲದೇ ಹೋದುದೇಕೆ. ಮಹಾರಾಜರಲ್ಲಿ ಹೋಗಿ ಕೇಳಿದ್ದರೆ, ಹತ್ತು ಸಹಸ್ರ ವರಹಗಳನ್ನು ಒಂದು ಕವಡೆಗಿಂತಲೂ ಸುಲಭವಾಗಿ ನಿನಗೆ ಎತ್ತಿ ಕೊಡುತ್ತಿರಲಿಲ್ಲವೇ ? ಭೂತಾಯಿಯು ಸುವರ್ಣಮಯಿ. ಭೂಮಿ ಯಲ್ಲಿ ಎಲ್ಲಿ ನಿಧಿ ಇದೆಯೋ ಅದನ್ನು ಕಂಡು ತೆಗೆದು ನಿನ್ನ ಶಿವಧರ್ಮ ವನ್ನು ನಡೆಸಬಾರದೇ ? ಈ ಪಾಮರಳಾದ ಮಲ್ಲಿಗೆಯಮೇಲೇಕೆ ನೀನು ನಿನ್ನ ಕೆಂಗಣ್ಣನ್ನು ತೆರೆದೆ ?" ಎಂದು ಗೋಳಿಡಲಾರಂಭಿಸಿದಳು.

ಜಂಗಮನ ಮನವು ಕರಗಿತು. " ಮಗಳೇ ! ವೃಥಾ ನನ್ನನ್ನು ಕಾಡಬೇಡ. ನಿನಗೇನುಬೇಕು ಕೇಳು. ನಾನು ಮಾಡಿಕೊಡುವೆನು."

" ಜಂಗಮದೇವ ! ಈ ಹಣ್ಣುಗಳನ್ನು ನೀನು ಉಂಡು ನಿನ್ನ ಉಪವಾಸವನ್ನು ಮುಗಿಸಿದರೆ ನನ್ನ ಗೆಳತಿಯು ಬದುಕುವಳೆಂಬ ಭರ

ವಸೆಯು ನನಗಿದೆ. ಈ ಹಣ್ಣುಗಳನ್ನು ನೀನು ಭುಜಿಸು" ಎಂದು ಹೇಳಿದಳು.

ಜಂಗಮನು "ಇಲ್ಲ ಮಗಳೇ! ನಾನು ಸುಳ್ಳಾಡುವುದಿಲ್ಲ. ನನ್ನ ಉಪವಾಸದಿಂದ ನಿನ್ನ ಗೆಳತಿಯು ಸತ್ತಿಲ್ಲ. ಅವಳು ಸಾಯಲೇ ಇಲ್ಲ" ಎಂದು ಹೇಳಿದನು.

ಚಾಮುಂಡಿಗೆ ಸಂತೋಷವಾಯಿತು. "ನಿನ್ನ ಬಾಯಲ್ಲಿ ಮಲ್ಲಿಗೆಯು ಸಾಯಲಿಲ್ಲವೆಂದರೆ ಅವಳು ಬದುಕುತ್ತಾಳೆ. ಅವಳು ಚಿರಂಜೀವಿಯಾಗಿರಲಿ. ಅವಳು ಬದುಕಿದ್ದ ಮೇಲೆ ನೀನು ಈ ಹಣ್ಣು ಗಳನ್ನು ಸ್ವೀಕರಿಸಲು ಅಡ್ಡಿ ಏನಿದೆ?"

"ಇದೆ! ಮಲ್ಲಿಗೆಯು ನನ್ನ ಪ್ರಾರ್ಥನೆಯನ್ನು ಸಲ್ಲಿಸಿಕೊಡುತ್ತೀ ನೆಂದು ವಾಗ್ದಾನ ಮಾಡುವವರೆಗೆ ನಾನು ಭೋಜನ ಮಾಡುವುದಿಲ್ಲ. ನಡೆ! ನನ್ನನ್ನೂ ಮಲ್ಲಿಗೆಯ ಸಮೀಪಕ್ಕೆ ಕರೆದುಕೊಂಡು ಹೋಗು" ಎಂದು ಹೇಳಿ ಆಸನದಿಂದೆದ್ದನು.

ಚಾಮುಂಡಿಯು ನಮಸ್ಕರಿಸಿ ಮುಂದೆ ಮುಂದೆ ಹೋದಳು. ಜಂಗಮನು ಹಿಂದೆ ಹಿಂದೆ ನಡೆದನು. ಅವರಿಬ್ಬರೂ ಛತ್ರದ ಹಜಾರಕ್ಕೆ ಹೋದರು. ಪರಿಚಾರಿಕೆಯರೆಲ್ಲರೂ ಮಲ್ಲಿಗೆಯ ಸುತ್ತಲೂ ನಿಶ್ಶಬ್ದ ವಾಗಿ ಕುಳಿತಿದ್ದರು. ಚಾಮುಂಡಿಯಹಿಂದೆ ಜಂಗಮನು ಬರುವುದನ್ನು ನೋಡಿ ಎಲ್ಲರೂ ಎದ್ದು ನಿಂತರು. ಜಂಗಮನು ಬಗ್ಗಿ ಮಲ್ಲಿಗೆಯ ಮುಖವನ್ನು ನೋಡಿದನು. ಚಾಮುಂಡಿಯ ಕಡೆಗೆ ತಿರುಗಿ "ಬದು ಕಿದ್ದಾಳೆ ನೋಡು!" ಎಂದು ಹೇಳಿದನು.

ಚಾಮುಂಡಿಯು ಗಾಬರಿಯಿಂದ ನೋಡಿದಳು. ಪರಿಚಾರಿಕೆಯ ರೆಲ್ಲರೂ ಬಗ್ಗಿ ನೋಡಿದರು. ಅದೇ ನಿಶ್ಚಲಭಾವ! ಹಾಗೆಯೇ ಮಲ್ಲಿಗೆಯು ಸ್ವರ್ಣಪುತ್ಥಳಿಯಂತೆ ಬಿದ್ದಿದ್ದಾಳೆ! ಚಾಮುಂಡಿಯು ದುಃಖದಿಂದ "ಜಂಗಮದೇವ! ಇದೇನು ಇಂದ್ರಜಾಲವನ್ನು ಮಾಡುವೆ. ಮಲ್ಲಿಗೆಯು ಸತ್ತುಹೋಗಿದ್ದಾಳೆ. ಅವಳು ಮಾಡಿರುವ ಪುಣ್ಯ

ಕರ್ಮದ ಕಾಂತಿಯು ಅವಳ ಮುಖದಲ್ಲಿ ಬೆಳಗುತ್ತಿದೆ. ಅದನ್ನು ನೋಡಿ ನೀನೂ ಅವಳು ಬದುಕಿದ್ದಾಳೆಂದು ಹೇಳುತ್ತಿರುವೆಯಾ? ಅಥವಾ ನಮ್ಮೆಲ್ಲರನ್ನೂ ಭ್ರಾಂತಿಗೊಳಿಸುತ್ತಿರುವೆಯಾ?" ಎಂದಳು.

ಜಂಗಮನು "ಬದುಕಿದ್ದಾಳೆ. ನೀವೆಲ್ಲರೂ ಇಲ್ಲಿಂದ ಹೊರಟು ಹೋಗಿರಿ. ನಾನು ಮಲ್ಲಿಗೆಯನ್ನು ಎದ್ದು ಕೂಡುವಂತೆ ಮಾಡುತ್ತೇನೆ. ಮಾತನಾಡುವಂತೆ ಮಾಡುತ್ತೇನೆ. ಮಧ್ಯದಲ್ಲಿ ಯಾರಾದರೂ ಕುತೂಹಲದಿಂದ ಇಣಕಿ ನೋಡಿದರೆ ಅವಳಿಗೆ ಮತ್ತೆ ಮೂರ್ಛೆಯು ಬರುತ್ತದೆ. ಯಾರೂ ಎಬ್ಬಿಸಲಾರರು" ಎಂದು ಹೇಳಿದನು. ಎಲ್ಲರೂ ಹೊರಟುಹೋದರು. ಆ ಹಜಾರವೆಲ್ಲವೂ ಏಕಾಂತವಾಯಿತು. ಜಂಗಮನು ಜೋಳಿಗೆಯಿಂದ ವಿಭೂತಿಯನ್ನು ತೆಗೆದು ಮಂತ್ರಿಸಿ ಮಲ್ಲಿಗೆಯ ಮುಖದ ಮೇಲೆ ಊದಿದನು. ಮಲ್ಲಿಗೆಯು ಕಣ್ಣು ತೆರೆದಳು. ಎದ್ದು ಕುಳಿತಳು. ಎದುರಿಗೆ ನಿಂತಿದ್ದ ಜಂಗಮನನ್ನು ಕಂಡು ಮೇಲಕ್ಕೆದ್ದು "ಗುರುದೇವಾ! ನನ್ನನ್ನು ಕ್ಷಮಿಸು. ನಿನ್ನ ಪ್ರಾರ್ಥನೆಯನ್ನು ಸಲ್ಲಿಸಿಕೊಡುತ್ತೇನೆ. ನನ್ನಲ್ಲೇನೂ ಹಣವಿಲ್ಲ ಆದರೆ ಒಂದೇ ದಿನದಲ್ಲಿ ನಾನು ನಿನ್ನ ಹತ್ತು ಸಹಸ್ರ ವರಹಗಳನ್ನು ನಿನ್ನ ಪಾದದಲ್ಲಿ ಅರ್ಪಿಸುತ್ತೇನೆ" ಎಂದು ಹೇಳಿ ಜಂಗಮನ ಪಾದಗಳ ಮೇಲೆ ತಲೆ ಇಟ್ಟು ಅಭಿವಾದನಮಾಡಿದಳು. ಹೊರಗಡೆ ಆತುರದಿಂದ ಕಾದು ನಿಂತಿದ್ದ ಚಾಮುಂಡಿಯ ಕಿವಿಗೆ ಮಲ್ಲಿಗೆಯ ಮಾತುಗಳು ಸ್ಪಷ್ಟವಾಗಿ ಕೇಳಿಸಿದವು. ಅವಳು ಆನಂದದಿಂದ ಓಡಿಬಂದು ಜಂಗಮನ ಪಾದಕ್ಕೆರಗಿದಳು. ಪರಿಚಾರಿಕೆಯರೆಲ್ಲರೂ ಆನಂದದಿಂದ ಬಂದು ಜಂಗಮನಿಗೆ ನಮಸ್ಕರಿಸಿದರು. ಜಂಗಮನು ಅಲ್ಲಿಂದ ಮಾಯವಾಗಿ ಹೋದನು. ಎಲ್ಲಿಗೆ ಹೋದನೋ ಯಾರೂ ಅರಿಯರು.

ಮರುದಿನ ಪ್ರಾತಃಕಾಲ ಯಥಾಪ್ರಕಾರ ಮಲ್ಲಿಗೆಯು ದೇವತಾ ಸೇವೆಯನ್ನು ಸಲ್ಲಿಸಿ ಕೈಲಿದ್ದ ಹಣವನ್ನೆಲ್ಲಾ ದಾನಮಾಡಿ ಮುಕ್ತ ಹಸ್ತಳಾದಳು. ಅಂದು ಆ ಕ್ಷೇತ್ರದಲ್ಲೆಲ್ಲಾ ಗಡಿಬಿಡಿ. ಹಿಂದಿನ ದಿನದ

ಸಮಾಚಾರವನ್ನು ಭಕ್ತರು ಬೈರಾಗಿಗಳು ನಾನಾವಿಧವಾಗಿ ಮಾತನಾಡಿ ಕೊಳ್ಳುತ್ತಿದ್ದರು. ಆ ಮಾತುಗಳಲ್ಲಿಯೇ ಅನೇಕ ಹೊಸಹೊಸ ಕಥೆ ಗಳು ಹುಟ್ಟಿಹೋದವು.

ಮಧ್ಯಾಹ್ನ ವೃದ್ಧನಾದ ಮಹಂತನ ದರ್ಶನಕ್ಕೆ ಮಲ್ಲಿಗೆಯು ಹೋದಳು. ಮಲ್ಲಿಗೆಯನ್ನು ಕಂಡು ಮಹಂತನಿಗೆ ಆನಂದವಾಯಿತು. ಮಹಂತನು "ಮಲ್ಲಿಗೆ! ಶಿವನು ಶುಭವನ್ನೇ ಮಾಡುವನು" ಎಂದು ಹರಸಿದನು. ಮಲ್ಲಿಗೆಯು "ಮಹಾಗುರುವೇ! ನನ್ನ ಸಂಕಲ್ಪದಂತೆ ಎಲ್ಲವೂ ತಮ್ಮ ಕೃಪೆಯಿಂದ ಸಾಂಗವಾಗಿ ನೆರವೇರಿತು. ಇನ್ನು ಒಂದೇ ಒಂದು ವಾಗ್ದಾನವು ಮಿಕ್ಕಿದೆ. ನಿನ್ನೆ ದರ್ಶನವಿತ್ತ ಜಂಗಮದೇವನಿಗೆ ಹತ್ತುಸಹಸ್ರ ವರಹಗಳನ್ನು ಪಾದಕಾಣಿಕೆ ಒಪ್ಪಿ ಸುವುದೊಂದು ಕಾರ್ಯವು ಉಳಿದಿದೆ. ಅದನ್ನು ಸಾಧಿಸಿಕೊಟ್ಟು ತಮ್ಮ ಸನ್ನಿಧಿಗೆ ಬರುತ್ತೇನೆ. ನನಗೆ ತಮ್ಮ ಕೈಯಿಂದಲೇ ಶಿವದೀಕ್ಷೆಯನ್ನು ಅನುಗ್ರಹಿಸಬೇಕು. ಕಾವಿಯನ್ನು ಕೊಡಬೇಕು" ಎಂದು ಪ್ರಾರ್ಥಿ ಸಿದಳು.

ಮಹಂತನು ಮುಗುಳುನಗೆಯಿಂದ "ಮಗಳೇ! ಶಿವನು ಕೊಡು ತ್ತಾನೆ. ಶಿವನು ತೆಗೆದುಕೊಳ್ಳುತ್ತಾನೆ. ಎಲ್ಲವೂ ಆ ಪರಶಿವನ ಲೀಲೆ ನಿನ್ನ ಇಷ್ಟಾರ್ಥಗಳು ಸಿದ್ಧಿಸಲಿ. ನಿನಗೆ ಶುಭವಾಗಲಿ" ಎಂದು ಹರಸಿದನು.

ಮಲ್ಲಿಗೆಯು ನಮಸ್ಕರಿಸಿ ತನ್ನ ಬಿಡಾರಕ್ಕೆ ಹೊರಟುಹೋದಳು. ಆ ದಿನ ರಾತ್ರಿ ಚಾಮುಂಡಿಯೂ ಮಲ್ಲಿಗೆಯೂ ಜಂಗಮದೇವನ ಅಪ್ಪಣೆಯಂತೆ ಕಾಲುನಡೆಯಲ್ಲಿಯೇ ಅವನನ್ನು ಹಿಂಬಾಲಿಸಿ ಹೊರಟು ಹೋದರು.

ಮರುದಿನ ಪ್ರಾತಃಕಾಲ ಕ್ಷೇತ್ರದಲ್ಲಿ ಅವರನ್ನು ಯಾರೂ ಕಾಣ ಲಿಲ್ಲ. ಎಲ್ಲರೂ ನಾನಾವಿಧವಾಗಿ ಮಾತನಾಡಿಕೊಳ್ಳಲಾರಂಭಿಸಿದರು. ಕೊನೆಗೆ ಗರಳಪುರಿ ಕ್ಷೇತ್ರಕ್ಕೆ ಎಲ್ಲಿಂದಲೋ ಬಂದಿದ್ದ ಜಂಗಮನೊಬ್ಬನು

ಯಂಕುಬೂದಿಯನ್ನೆರಚಿ ಮಲ್ಲಿಗೆಯನ್ನೂ ಅವಳ ಸಖಿಯನ್ನೂ ಎತ್ತಿ
ಕೊಂಡು ಹೋದನೆಂದೂ ಅವರು ಮೂವರೂ ಮಾಯವಾಗಿದ್ದಾ
ರೆಂದೂ ಕಥೆಯು ಹುಟ್ಟಿತು. ಈ ಕಥೆಯೇ ಲೋಕದಲ್ಲೆಲ್ಲಾ ಹಬ್ಬಿ
ಹೋಯಿತು. ಒಂದೆರಡು ದಿನಗಳೊಳಗಾಗಿ ಈ ಕಥೆಯು ರಾಜ
ಸ್ಥಾನಿಗೂ ತಲುಪಿತು. ರಾಜನ ಕಿವಿಗೂ ಬಿದ್ದಿತು. ರಾಜನೂ
ಆಶ್ಚರ್ಯಚಕಿತನಾದನು. ಮತ್ತು ಅತ್ಯಂತ ಖಿನ್ನನಾದನು. ಈ
ಸಮಾಚಾರವು ಪಂಡಿತನ ಕಿವಿಗೂ ಬಿದ್ದಿತು. ಅವನು 'ಭಕ್ತಿಯಲ್ಲಿಯೂ
ಒಂದು ಹದ್ದಿರಬೇಕು. ಹುಚ್ಚುಭಕ್ತಿ ಅನರ್ಥವೇ ಆಗುತ್ತದೆ.
ಮಲ್ಲಿಗೆಯು ಕಲಾನಿಪುಣೆ; ವಿದ್ಯಾವತಿ. ಆದಾಗ್ಯೂ ಆ ಭಕ್ತಿಯ
ಮೋಹದಲ್ಲಿ ಯಾವನೋ ಜಂಗಮನ ಕೈಗೆ ಬಿದ್ದಳು. ಅವಳು
ನನ್ನನ್ನು ಮನಸಾರ ಪ್ರೇಮಿಸಿದಳು. ನನಗೆ ಅವಳ ಪ್ರೇಮವು ಈ
ರಾಜ್ಯ ಕಂಟಕವಾಗುವುದೆಂದು ಭಾಸವಾಯಿತು. ಅತಿಸಾಹಸದಿಂದ
ಮನಸ್ಸನ್ನು ಸ್ವಾಧೀನಪಡಿಸಿಕೊಂಡೆನು. ಚಿಕ್ಕಪ್ಪಾಜಿಯೂ ಅವಳಲ್ಲಿ
ಮನಸೋತನು. ಪರಿತಪಿಸಿದನು. ತಾನೇ ಹೋಗಿ ಅವಳ ಪ್ರಣಯ
ಭಿಕ್ಷೆಯನ್ನು ಬೇಡಲು ಸಿದ್ಧನಾದನು ಭಕ್ತಿಯ ಉನ್ಮಾದವು ಹೇಗೆ
ಅನರ್ಥಕಾರಿಯೋ ಪ್ರೇಮೋನ್ಮಾದವೂ ಹಾಗೆಯೇ ಅನರ್ಥಕಾರಿ.
ಆ ಪ್ರೇಮೋನ್ಮಾದದಿಂದ ಅವನಿಗೆ ಹುಚ್ಚು ಹಿಡಿಯುತ್ತಿತ್ತು. ದೈವ
ಕೃಪೆಯಿಂದ ಆ ದುರ್ಯೋಗವು ತಪ್ಪಿತು. ಮಲ್ಲಿಗೆಯು ಒಬ್ಬ
ಜಂಗಮನ ಕೈಗೆ ಬಿದ್ದಳು. ವನಕುಸುಮವು ವನದಲ್ಲಿಯೇ ವಿಕಸಿತವಾಗಿ
ಮುಳ್ಳುಪೊದರಿನಮೇಲೆ ಬಿದ್ದಂತಾಯಿತು. ಅದೇ ದೈವ ನಿಯಾಮಕ!'
ಎಂದುಕೊಂಡನು. ಅಷ್ಟಕ್ಕೆ ಅವನ ಮನಸ್ಸಿನ ಚಿಂತೆ ಆಕಾಂಕ್ಷೆಗಳು
ಶಾಂತವಾದವು.

ಮಲ್ಲಿಗೆಯು ಜಂಗಮದೇವನೊಡನೆ ಮೈಸೂರಿಗೆ ಬಂದಳು. ಬೆಟ್ಟದಕಿಬ್ಬಿಯಲ್ಲಿರುವ ಜಂಗಮನ ಮಂಟಪದಲ್ಲಿದ್ದಳು. ಅವಳ ಮನಸ್ಸಿನ ಸ್ಥಿತಿಯು ಏನಾಗಿದ್ದಿತೆಂಬುದರ ಅರಿವು ಅವಳಿಗೆ ಆಗಿರಲಿಲ್ಲ. ಹೊಸಜನ್ಮವನ್ನು ತಾಳಿದಂತೆ ಬೋಧೆಯಾಗುತ್ತಿದ್ದಿತು. ತಾನು ಏನುಮಾಡುತ್ತೇನೆಂದಾಗಲೀ ಮುಂದೇನು ಮಾಡಬೇಕೆಂಬುದನ್ನಾಗಲೀ ಮಲ್ಲಿಗೆಯು ಯೋಚಿಸಲು ಅಸಮರ್ಥಳಾಗಿದ್ದಳು. ಜಂಗಮನು ಹೇಳಿದ ಮಾತುಗಳನ್ನು ನಡೆಸುತ್ತಿದ್ದಳು. ಸ್ನಾನ ಭೋಜನ ನಡೆ ನುಡಿಗಳಲ್ಲೆಲ್ಲಾ ಇದೇ ರೀತಿಯಾಗಿದ್ದಿತು. ಸಿಂಗರಾರ್ಯನು ಮಲ್ಲಿ ಗೆಯ ಈ ಸ್ಥಿತಿಯನ್ನು ನೋಡಿ ಬೆರಗಾದನು. ತಾನು ಮಾಡಿದ ಮಹತ್ತ್ರ ಯತ್ನವೆಲ್ಲವೂ ವ್ಯರ್ಥವಾಯಿತೆಂದು ಅವನಿಗೆ ಗೋಚರವಾಗತೊಡ ಗಿತು. ಒಂದುದಿನ ಸಂಧ್ಯಾಕಾಲದ ಸಮಯದಲ್ಲಿ ಜಂಗಮದೇವನ ಎದುರಿನಲ್ಲಿಯೇ ಸಿಂಗರಾರ್ಯನು "ಮಲ್ಲಿಗೆ, ನಿನ್ನ ಸಂಗೀತವನ್ನು ಕೇಳಿ ಬಹುದಿನಗಳಾದುವು?" ಒಮ್ಮೆ ನಿನ್ನ ಮಧುರಕಂಠದಿಂದ ಗಾನಮಾಡ ಲಾರೆಯಾ ಎಂದು ಕೇಳಿದನು. ಮಲ್ಲಿಗೆಯು ಮೃದುವಾದ ನಗುವನ್ನು ನಕ್ಕು, "ಸಂಗೀತವೇ? ಅದು ಮರೆತುಹೋಗಿದೆ. ಕಂಠದಲ್ಲಿ ಧ್ವನಿಯೇಳು ವುದಿಲ್ಲ" ಎಂದು ನಿರುತ್ಸಾಹದಿಂದ ಉತ್ತರವಿತ್ತಳು. ಸಿಂಗರಾರ್ಯನು ಭೂಮಿಗೆ ಇಳಿದುಹೋದನು. ಜಂಗಮದೇವನನ್ನು "ಜಂಗಮದೇವಾ ನಮ್ಮ ಕಾರ್ಯವೆಲ್ಲವೂ ವಿಫಲವಾಯಿತು. ರಾಜನ ಸಮ್ಮುಖದಲ್ಲಿ ನಾನು ಹೋಗಿ ಮುಖತೋರಿಸುವಂತಿಲ್ಲ. ಇವಳಿಗೆ ಬುದ್ಧಿಭ್ರಮಣೆ ಯುಂಟಾಗಿದೆ. ಇನ್ನೇನು ಫಲ? ನಾನೆಲ್ಲಿಗಾದರೂ ದೇಶಾಂತರ ಹೋಗುತ್ತೇನೆ. ನೀನೇನೋ ಸಾಹಸವನ್ನು ಮಾಡಿದೆ, ಆದರೆ ಕೈಗೆ ಬಂದ ತುತ್ತು ಬಾಯಿಗೆ ಬಾರದೇ ಹೋಯಿತೊ! ನೀನೇನೋ ಮಂತ್ರ

ವನ್ನು ಮಾಡಿದ್ದೇ. ಪಾಪ, ನಿನಗೂ ಹೀಗಾಗುವುದೆಂದು ತಿಳಿದಿರಲಿಲ್ಲ. ಅಮೃತಕಳಶವು ಕೈತಪ್ಪಿ ಕೆಳಗೆಬಿದ್ದು ಚೆಲ್ಲಿಹೋದಂತೆ ಆಗಿದೆ." ಎಂದು ನಿರ್ವಿಣ್ಣನಾಗಿ ಹೇಳಿದನು. ಜಂಗಮನು ನಕ್ಕನು.

"ಮನುಷ್ಯರಅವಸ್ಥೆಗಳನ್ನು ಅದರಿಂದ ಉಂಟಾಗುವ ಭಾವ ಪರಿವ ರ್ತನೆಯನ್ನು ನೀನರಿಯೆ. ನಾನೇನೂ, ಆ ಚಾತುರ್ಯವನ್ನು ಮಾಡಿಲ್ಲ. ಅದರಲ್ಲಿಯೂ ಹೆಣ್ಣಿನಮನಸ್ಸು ವಿಚಿತ್ರವಾದುದು. ಮಲ್ಲಿಗೆಯ ಮನಸ್ಸು ನಿಜವಾಗಿಯೂ ವಿರಕ್ತ ಭಾವವನ್ನು ತಳೆದಿದ್ದಿತು ಧನಕನಕಗಳ ಆಸೆ ಯನ್ನು ಸಂಪೂರ್ಣವಾಗಿ ತೊರೆದಿದ್ದಳು. ಸ್ತ್ರೀಯರಿಗೆ ಅದೂ ಒಂದು ಹಠವೇ. ಆ ಅವಸ್ಥೆಯಿಂದ ಅವಳನ್ನು ಕಿತ್ತುತಂದಿದ್ದೇನೆ. ನಿದ್ರೆಯಿಂದ ಎಚ್ಚೆತ್ತವನಂತೆ-ಮಧುಪಾನ ಮಾಡುತ್ತಿದ್ದವನನ್ನು ಅತೃಪ್ತಿ ಅವಸ್ಥೆ ಯಲ್ಲಿ ಸೆಳೆದು ತಂದಂತೆ-ಅವಳನ್ನು ಕರೆದು ತಂದಿದ್ದೇನೆ. ಐಶ್ವರ್ಯ ಅಹಂಭಾವ, ಕಲೆ, ಅಲಂಕಾರಗಳಲ್ಲಿ ಮತ್ತೆ ಅವಳಿಗೆ ರುಚಿಹತ್ತಬೇಕಾ ದರೆ ಸ್ವಲ್ಪ ಕಾಲವು ಬೇಕು. ನೀನು ನನ್ನ ಮಾತನ್ನು ನಂಬು. ಈಗ ಇಲ್ಲಿಂದ ಹೊರಟುಹೋಗು. ನಿನ್ನ ರಾಜನಿಗೆ ಮಲ್ಲಿಗೆಯ ಹುಚ್ಚು ಹಿಡಿದಿದ್ದರೆ ಅವಳನ್ನು ಮತ್ತೆಮೊರಕಿಸುವುದಾಗಿ ಭರವಸೆಯನ್ನು ನೀಡು. ಮಲ್ಲಿಗೆಯ ಈ ಅವಸ್ಥೆಯಲ್ಲಿ ರಾಜನು ಅವಳನ್ನು ನೋಡಿದರೆ ಒಮ್ಮೆಗೇ ವಿಮುಖನಾಗಬಹುದು. ವಿರಕ್ತನಾಗಬಹುದು. ಮೂರು ತಿಂಗಳು ಬಿಟ್ಟು ನಿನ್ನ ರಾಜನನ್ನು ಇಲ್ಲಿಗೆ ಕರೆದು ತಾ. ಸಾಣೆ ಹಿಡಿದ ವಜ್ರದಂತೆ ಮೆರಗುಕೊಟ್ಟ ಚಿನ್ನದಂತೆ ಮೊದಲಿಗಿಂತಲೂ ಅತಿಶಯ ಲಾವಣ್ಯ ಭರಿತಳಾದ ಕಾದಹಾಲಿನಂತೆ ಉಕ್ಕುತ್ತಿರುವ ಕಲಾವತಿಯನ್ನು ನೀನು ಇಲ್ಲಿ ಕಾಣುವೆ" ಎಂದು ಹೇಳಿದನು

ಸಿಂಗರಾರ್ಯನು ಆ ಮಾತುಗಳನ್ನು ಪೂರ್ಣವಾಗಿ ನಂಬಲಿಲ್ಲ. ಹಾಗಾದರೂ ಆಗಬಹುದು ಎಂಬ ಆಶಾ ಭಾವನೆಯಿಂದ ರಾಜಧಾನಿಗೆ ಹೊರಟು ಹೋದನು.

ರಾಜಧಾನಿಯಲ್ಲಿ ಸಿಂಗರಾರ್ಯನು ಚಿಕ್ಕಪ್ಪಾಜಿಯನ್ನು ಅಂತ

ರಂಗದಲ್ಲಿ ಭೇಟಿ ಮಾಡಿದನು. ಮೈಸೂರಿನಲ್ಲಿರುವ ಜಂಗಮದೇವನ ವಿಷಯವನ್ನು ಬಣ್ಣಬಣ್ಣವಾಗಿ ಬಣ್ಣಿಸಿದನು. ಗರಳಪುರಿಯಲ್ಲಿ ಅವನೆಸಗಿದ ಪವಾಡವನ್ನು ಮಾತುಗಳ ಮಾಧುರ್ಯದಿಂದ ಬಣ್ಣಿಸಿದನು. ಮಲ್ಲಿಗೆಯನ್ನು ಪಂಥದಿಂದ ಹಿಂತಿರುಗಿಸಿ ಜಂಗಮನು ಕರೆದು ತಂದಿರುವ ನೆಂದೂ, ಅವಳೊಂದು ವ್ರತಾನುಷ್ಠಾನ ಮಾಡುತ್ತಿದ್ದಾಳೆಂದೂ, ಆ ವ್ರತವು ಸಾಂಗವಾಗಿ ಪೂರೈಸುತ್ತಲೇ ಮಲ್ಲಿಗೆಯನ್ನು ಮಹಾರಾಜರಿಗೆ ಸಮರ್ಪಿಸುವುದಾಗಿ ಜಂಗಮನು ಹೇಳುತ್ತಾನೆಂದೂ ಅದರಿಂದ ಅವಳಿಗೆ ಹೊಸ ಜನ್ಮವು ಬರುವುದೆಂದೂ ಜಂಗಮನಸಂದೇಶವನ್ನು ರಾಜನಿಗೆ ತಿಳಿಸಿದನು. ರಾಜನು ತನ್ನ ಮನಸ್ಸನ್ನು ತಾನು ಅರಿಯದವನಾಗಿದ್ದನು. ಮಲ್ಲಿಗೆಯನ್ನು ದೇವಲೋಕದ ಕುಸುಮದಂತೆ ಭಾವಿಸುತ್ತಿದ್ದನು. ಅದು ಕೈಬಿಟ್ಟು ಹೋಗಿದ್ದಿತು. ಸಿಂಗರಾರ್ಯನ ಸಾಹಸದಿಂದ ಆ ದೇವಕುಸುಮವು, ಭೂಮಿಗೆ ಬಂದಿದೆಯೆಂದೂ, ಅದು ತನಗಾಗಿಯೇ ಹುಟ್ಟಿದೆಯೆಂದೂ ಭಾವಿಸಿದನು. ಇನ್ನು ಮೇಲೆ ಮಲ್ಲಿಗೆಯನ್ನು ದೂರ ವಿಟ್ಟಿರಲಾರೆನೆಂದೂ ಸಂಕೋಚದ ಸಂಕೋಲೆಗಳನ್ನೆಲ್ಲಾ ಕಿತ್ತೊಗೆದು ಅವಳನ್ನು ಅಂತಃಪುರಕ್ಕೆ ಕರೆತಂದು ಪ್ರಸಿದ್ಧವಾಗಿಯೇ ಬಂಗಾರದ ಪತ್ನಿಯಾಗಿ ಇಟ್ಟುಕೊಳ್ಳಬೇಕೆಂದು ಸ್ಥಿರಮಾಡಿಕೊಂಡನು ತಾನೇ ಗುಪ್ತವಾಗಿ ಮೈಸೂರಿಗೆ ಹೋಗಿ, ಮಲ್ಲಿಗೆಯನ್ನು ಒಂದುಬಾರಿ ನೋಡಿ ಬರಬೇಕೆಂದು ಬಯಸಿದನು ಆದರೆ ಮಾನವು ಹಿಂತೆಗೆಯಿತು ತಾನಾಗಿ ಬರುವ ಬಯಕೆಗೆ ಆತುರಪಡಲೇಕೆ ? ಎಂದು ಸಮಾಧಾನ ಮಾಡಿ ಕೊಂಡನು.

ಪಂಡಿತಾರಾಧ್ಯನಿಗೂ ಈ ವಿಷಯಗಳೆಲ್ಲಾ ಅರಕೊರೆಯಾಗಿ ಕಿವಿಗೆಬಿದ್ದವು. ಅವನು ಹೊರಗಡೆ ಔದಾಶೀನ್ಯವನ್ನು ತೋರುತ್ತಾ ಮನಸ್ಸಿನೊಳಗೇ ವಿಚಾರಮಾಡಲಾರಂಭಿಸಿದನು. 'ಚಿಕ್ಕಪ್ಪಾಜಿಯು ವಿದ್ಯಾವಂತ, ಬುದ್ಧಿವಂತ ಉದಾರಿ, ಎಲ್ಲವೂಸರಿ. ಆದರೆ ಬಾಲ್ಯ ದಿಂದಲೂ ಅವನು ಕಾಮುಕ, ಸ್ತ್ರೀಯರ ಸೌಂದರ್ಯಕ್ಕೆ ಸೋಲುವ

ಮನಸ್ಸು ಅವನದು. ಬಹುಶಃ ರಾಜರ ಸ್ವಭಾವವೇ ಲೋಕದಲ್ಲಿ ಹೀಗಿರ ಬಹುದು. ಪುರಾಣಗಳಲ್ಲಿ ನೋಡಲಿ, ಚರಿತ್ರೆಗಳಲ್ಲಿ ಹುಡುಕಲಿ, ಎಲ್ಲೆಲ್ಲಿಯೂ ಏಕಪತ್ನೀವ್ರತಸ್ಥನಾದ ರಾಜನು ಅಪರೂಪ. ಎಲ್ಲಿಯೋ ಶ್ರೀರಾಮಚಂದ್ರನಂಥ ಒಬ್ಬ ಮಹಾಪುರುಷನನ್ನು ವಾಲ್ಮೀಕಿಯು ಚಿತ್ರಿಸಿದ್ದಾನೆ. ಇರಲಿ, ಅದೇನೋ ಅನಿವಾರ್ಯ ಮಲ್ಲಿಗೆಯ ಗುಣ ಗಳನ್ನೆ ಪರಿಶೀಲಿಸಿದರೆ ಅವಳೇನೋ ರಾಜನಿಗೆ ತಕ್ಕ ಹೆಣ್ಣೇಸರಿ. ರೂಪೆ, ವಿದ್ವತ್ತು, ಕಲಾನೈಪುಣ್ಯಗಳಲ್ಲಿ ಅವಳಂತಹ ಹೆಣ್ಣು ಅಪರೂಪ. ಆದರೆ ಹುಟ್ಟಿದ ಕುಲವು ವೇಶ್ಯೆಯರಕುಲ. ಈ ಋಷಿಗಳ ತಪಸ್ವಿಗಳ ಭೂಮಿಯಲ್ಲಿ ವೇಶ್ಯಾಕುಲವೆಂಬುದು ಏಕೆ ಹುಟ್ಟಿಕೊಂಡಿತೋ ಅದನ್ನು ನಿಷ್ಕರ್ಶೆಯಾಗಿ ಅರಿಯುವುದು ಕಷ್ಟ ಈ ಮಲ್ಲಿಗೆಯಲ್ಲಿ ರಾಜ್ಯಕ್ಕಾ ಗಲೀ ಪ್ರಜೆಗಳಿಗಾಗಲೀ ಯಾವ ಹಾನಿಯೂ ತಟ್ಟದಂತೆ ನಾನು ನೋಡಿ ಕೊಳ್ಳಬಲ್ಲೆ. ಆದರೆ ಅವಳ ಸಹವಾಸವು ಬಲು ಕೆಟ್ಟದು. ಅವಳು ಯಾವನೋ ಜಂಗಮನಲ್ಲಿ ವಶವರ್ತಿಯಾಗಿದ್ದಾಳೆ. ಅವನು ಮಾಯೆ-ಮಂತ್ರಗಳ ಮಂತ್ರವಾದಿಯೆಂದು ಕೇಳಿದ್ದೇನೆ. ಈ ರಾಜನು ಅವನ ಬುಟ್ಟಿಯಲ್ಲಿ ಬಿದ್ದರೆ ನನ್ನ ಕೈ ಮಿಂಚಿದಂತೆಯೇಸರಿ. ಆಗ ನಾನು ದೇಶಾಂತರಗತನಾಗಿ ಹೋಗಬೇಕಾಗುತ್ತದೆ. ಈ ರಾಜ್ಯಕ್ಕೆ ಹಾನಿಯು ತಟ್ಟುತ್ತದೆ. ನನ್ನ ಬಾಲ್ಯಸ್ನೇಹಿತನಾದ ಚಿಕ್ಕಪ್ಪಾಜಿಯ ಸರ್ವನಾಶ ವಾದಂತಾಗುತ್ತದೆ. ಹೆಂಗಸಿನ ಕಾರಣದಿಂದ ಎಷ್ಟೋ ಉತ್ತಮ ರಾಜ್ಯ ಗಳು, ಹಾಳಾಗಿಹೋಗಿವೆ. ಭಗವಂತನ ಇಚ್ಛೆಯಿದ್ದಂತೆ ಆಗಲಿ' ಎಂದು ಚಿಂತಿಸುತ್ತಿದ್ದನು.

ಒಂದೆರಡು ತಿಂಗಳುಗಳು ಹೊರಳಿದವು. ಮಲ್ಲಿಗೆಯ ಮನಸ್ಸೂ ಹೊರಳಿತು. ಪೂರ್ವಸ್ಮೃತಿಯೆಲ್ಲವೂ ಎದ್ದು ಕಾಣಲಾರಂಭ ವಾಯಿತು. ತನ್ನ ಸಂಗೀತದ ಹೆಮ್ಮೆ, ಲಾವಣ್ಯದ ಹೊಳೆಪು, ಎಲ್ಲ ವನ್ನೂ ಪುನಃ ನೋಡಲಾರಂಭಿಸಿದಳು. ರಾಜನ ಪ್ರೀತಿಯ ನೆನಪು ಬಂದಿತು. 'ರಾಜನು ಪ್ರಾರ್ಥಿಸಿದರೂ ನಾನೇಕೆ-ಅವನ ಸಂಗಾತಿ

ಯಾಗಿರಲು ಒಪ್ಪಲಿಲ್ಲ ?' ಎಂದು ಚಿಂತಿಸಿದಳು. 'ಗರಳಪುರಿಯಲ್ಲಿ ತಾನು ಮಾಡಿದ ದಾನ-ಧರ್ಮಗಳೆಲ್ಲವೂ ನಿಜವೇ ? ಸ್ವಬುದ್ಧಿಯಿಂದ ಮಾಡಿದೆನೇ ಮಹಂತನ ಪ್ರೇರಣೆಯೇ?' ಎಂದು ಚಿಂತಿಸತೊಡಗಿದಳು. 'ಅಲ್ಲ, ಅಲ್ಲ. ಯಾವುದೂ ನಿಜವಲ್ಲ. ಸನ್ಯಾಸಿನಿಯಾಗಬೇಕೆಂಬ ತೀವ್ರೇಚ್ಛೆಯು ನನ್ನನ್ನು ಪ್ರೇರಿಸಿತು ಪುನಃ ಈ ಜಂಗಮದೇವನ ಪ್ರೇರಣೆಯು ಇತ್ತ ಸೆಳೆದು ತಂದಿತು. ಈ ಜಂಗಮನು ಪ್ರಭಾವಶಾಲಿ. ನನಗೆ ಮತ್ತೊಬ್ಬ ಗುರುವಿದ್ದಾನೆ. ಅವನು ವಿಶ್ವೇಶ್ವರ. ಅವನು ನನಗೆ ವಿದ್ಯಾಪ್ರದಾನಮಾಡಿದ ಗುರು. ಅವನು ನನ್ನನ್ನು ಈಗಲೂ ಪ್ರೀತಿಸುತ್ತಾನೆ. ಆದರೆ ಹುಚ್ಚು ಸ್ವಭಾವದವನು. ಅವನ ಮಾರ್ಗಗಳೊಂದೂ ನನಗೆ ಒಪ್ಪುವುದಿಲ್ಲ ಈ ಜಂಗಮದೇವನು ಪ್ರಭಾವಶಾಲಿ, ಶಕ್ತ. ಇವನಿಗೆ ಈ ಜಗತ್ತಿನ ಮಹದೈಶ್ವರ್ಯಗಳ ಆಸೆ ಇದೆ. ಆದರೂ, ಅದರಲ್ಲೇನೂ ತಪ್ಪಿಲ್ಲ. ನನ್ನ ಮನವು ಅವನನ್ನು ಭಕ್ತಿಯಿಂದ ಬೆರೆತು ಹೋಗಿದೆ. ಈಗ ನಾನು ಅವನ ಅಧೀನಳು. ಆದರೂ ನನ್ನ ಸ್ಥಿತಿಯೇನು? ನಾನು ಸಂಸಾರಿಯೋ ವಿರಾಗಿಣಿಯೋ? ಜಂಗಮದೇವನು ಭಕ್ತಳು-ಭಕ್ತಳು ಎಂದು ನನ್ನನ್ನು ಕರೆಯುತ್ತಾನೆ. ಇದೂ ಒಂದು ಮಾರ್ಗ. ಆದರೆ ಇದು ಸಂಸಾರಿಗಳ ಮಾರ್ಗವೇ ಸರಿ' ಎಂದುಕೊಳ್ಳುತ್ತಿದ್ದಳು

ಜಂಗಮದೇವನು ಮಹಾ ಪ್ರಭಾವಶಾಲಿ. ಅವನ ಪೂಜೆ-ಪುನಸ್ಕಾರ ಇವೆಲ್ಲವೂ ಪೂರ್ಣವಾಗಿ ನಟನೆಯೆಂದು ಹೇಳಲಾಗುವುದಿಲ್ಲ. ಅವೆಲ್ಲವುಗಳಿಂದಲೂ ಸಿದ್ಧಿಗಳು ಲಭಿಸುತ್ತವೆ ಎಂಬ ನಂಬಿಕೆಯಿದ್ದಿತು. ಅವನಿಗೂ ಒಬ್ಬ ಗುರುವಿಲ್ಲದೆ ಇರಲಿಲ್ಲ ಕಾಪಾಲಿಕನೊಬ್ಬನು ಅವನಿಗೆ ಗುರುವಾಗಿ ಗಂಟುಬಿದ್ದಿದ್ದನು. ಆ ಕಾಪಾಲಿಕನು ಯಾರ ಕಣ್ಣಿಗೂ ಬೀಳುತ್ತಿರಲಿಲ್ಲ. ಸ್ಮಶಾನಗಳಲ್ಲಿ ಅಲೆದಾಡುತ್ತಿದ್ದನು. ಯಾರಾದರೂ ಮನುಷ್ಯರು ಅವನನ್ನು ಕಂಡರೂ ಅವನು ಮಾತನಾಡುತ್ತಿರಲಿಲ್ಲ. ಅವನೇ ಈ ಜಂಗಮದೇವನ ಗುರು. ಅವನು ಜಂಗಮದೇವನಿಗೆ

ವಾಮಾಚಾರವನ್ನು ಉಪದೇಶಮಾಡಿದ್ದನು. ಜಂಗಮದೇವನು ಗೋಪ್ಯ ವಾಗಿ ವಾಮಾಚಾರದಿಂದ ದೇವಿಯ ಉಪಾಸನೆ ಮಾಡುತ್ತಿದ್ದನು. ಅವನ ಗುರು ಕಾಪಾಲಿಕನು ಒಂದುದಿನ ಅರ್ಧರಾತ್ರಿಯಲ್ಲಿ ಬಂದು ಜಂಗಮದೇವನನ್ನು ಸ್ಮಶಾನಕ್ಕೆ ಕರೆದೊಯ್ದನು. ರಾತ್ರಿ. ಕೃಷ್ಣಪಕ್ಷ. ಆ ಸ್ಮಶಾನದಲ್ಲಿ ಎರಡು ಚಿತೆಗಳು ಉರಿಯುತ್ತಿದ್ದವು. ಕಾಪಾಲಿಕನು ಅವೆರಡು ಚಿತೆಗಳ ಮಧ್ಯದಲ್ಲಿ ಜಂಗಮದೇವನನ್ನು ಕರೆದುಕೊಂಡು ಹೋಗಿ ಕುಳ್ಳಿರಿಸಿಕೊಂಡನು.

ಕಾಪಾಲಿಕನು "ನೋಡು ನೀಲಕಂಠ, ನೀನು ನನ್ನಿಂದ ಉಪದೇಶ ವನ್ನು ಪಡೆದಿರುವೆ. ವಾಮಾಚಾರವೆಂಬುದು ಸ್ವೇಚ್ಛಾಚಾರವೆಂದು ಭಾವಿಸಬೇಡ. ವಾಮಾಚಾರ ಪಿಧಾನದ ವ್ರತ ನಿಯಮಗಳು ಕಠೋರ ವಾದವುಗಳು ಸ್ತ್ರೀಯರನ್ನು ಕಲ್ಲಿನಂತೆ, ಬೆಂಕಿಯಂತೆ, ಮಣ್ಣಿನಂತೆ ಭಾವಿಸಬೇಕು. ನೀನು ಕಾಮುಕನಾಗಿದ್ದಿ ಆ ವೇಶ್ಯೆಯನ್ನು ಇಲ್ಲಿಗೆ ಕರತರದಿದ್ದರೆ ಚೆನ್ನಾಗಿತ್ತು ನೀನು ಅವಳ ರೂಪದಲ್ಲಿ ಮರುಳಾಗಿ ರುವೆ. ಕಾಮಾಸಕ್ತನಾಗಿರುವೆ ನಿನ್ನ ಆರಾಧನೆಯನ್ನು ದೇವಿಯು ಸ್ವೀಕರಿಸುವುದಿಲ್ಲ. ನಾನು ಕೊಟ್ಟ ಉಪದೇಶವು ಮಣ್ಣಿನಲ್ಲಿ ಹೋಮ ಮಾಡಿದಂತೆ ವ್ಯರ್ಥವಾಗಕೂಡದು ನಿನ್ನ ವ್ರತಭಂಗವಾಗಿ ದೇವಿಗೆ ಅಪಚಾರವಾಯಿತೆಂದು ತಿಳಿದರೆ ನಾನು ನಿನ್ನನ್ನು ಬಲಿಕೊಟ್ಟುಬಿಡ ಬೇಕು. ಅದೇ ವಾಮಾಚಾರದ ಶಾಸ್ತ್ರ. ನಿಜವನ್ನು ಹೇಳು ನೀನು ಆ ಮಲ್ಲಿಗೆಯಲ್ಲಿ ಕಾಮುಕನಾಗಿಲ್ಲವೆ?" ಎಂದು ಘರ್ಜಿಸಿದನು ಜಂಗಮನು ಎದ್ದು ಕೈಮುಗಿದು "ಕಾಲಭೈರವನೇ ನಿನ್ನ ಮಾತುಗಳು ಈ ಉರಿಯುವ ಯಜ್ಞೇಶ್ವರನ ಸಾಕ್ಷಿಯಾಗಿ ನಿಜ ನಾನು ಆ ಲೋಕೋತ್ತರ ಸೌಂದರ್ಯ ವತಿಯಾದ ಹೆಣ್ಣಿನಲ್ಲಿ ಕಾಮುಕನಾಗಿದ್ದೇನೆ. ನೀನು ನನ್ನನ್ನು ಬಲಿ ಕೊಡುವುದಾದರೆ ಇಲ್ಲಿಯೇ ಈಗಲೇ ಬಲಿದಾನಮಾಡು ಆದರೆ ನನ್ನ ದೊಂದು ಪ್ರಾರ್ಥನೆಯಿದೆ. ನನಗೆ ನೀನು ಈ ವಾಮಾಚರಣೆಯ ರಹಸ್ಯವನ್ನು ಮೊದಲೇ ಹೇಳಲಿಲ್ಲ. ನಾನು ಸ್ತ್ರೀಸಂಗವು ಈ ವಾಮಾ

ಚಾರದ ಉಪಾಸನೆಗೆ ವಿರೋಧವೆಂದು ಸರ್ವಥಾ ಅರಿತಿರಲಿಲ್ಲ. ನೀನು ಈಗ ಆ ಮಾತುಗಳನ್ನು ಹೇಳುತ್ತಿರುವೆ. ಈಗ ನೀನು ನನಗೆ ಮತ್ತೊಮ್ಮೆ ಉಪದೇಶವನ್ನು ಕೊಡು. ನಾನು ಚಾ-ಚೂ ತಪ್ಪದಂತೆ ದೇವಿಯ ಆರಾಧನೆಯನ್ನು ಮಾಡುತ್ತೇನೆ. ನಿನ್ನ ಇಷ್ಟಾರ್ಥವು ಸಫಲ ವಾಗಲಿ, ಇಲ್ಲದಿದ್ದರೆ ಬಲಿದಾನ ಮಾಡು. ಈ ನನ್ನ ಜನ್ಮವಾದರೂ ಸಾರ್ಥಕವಾಗಲಿ" ಎಂದು ಹೇಳಿದನು. ಕಾಪಾಲಿಕನು ಜಂಗಮನ ತಲೆಯಮೇಲೆ ಕೈಯಿಟ್ಟು "ನೀಲಕಂಠ ಈ ಚಿತೆಯನ್ನು ನೋಡು" ಎಂದು ತೋರಿಸಿದನು. ಅದು ಪುರುಷಾಕಾರದ ವಿಕಾರರೂಪವಾಗಿದ್ದಿತು. ತಲೆಯನ್ನು ಬಾಗಿಸಿಕೊಂಡು ಕಣ್ಣೀರಿಡುತ್ತಿದ್ದಿತು. ಕಾಪಾಲಿಕನು ಜಂಗಮನ ತಲೆಯನ್ನು ಮತ್ತೊಂದು ಚಿತೆಯಕಡೆಗೆ ತಿರುಗಿಸಿ, "ನೀಲಕಂಠ ಇತ್ತ ನೋಡು" ಎಂದನು. ಘೋರಾಕಾರದ ತಲೆಕೆದರಿದ ದೊಡ್ಡದಾಗಿ ಬಾಯಿಕಳೆದು ಸರ್ಪವನ್ನೂ ಭಕ್ಷಿಸುತ್ತಿರುವ ವಿಕಾರ ಸ್ತ್ರೀರೂಪವು ಕಂಡಿತು. "ನೀಲಕಂಠ ಇದು ನಿಜವಾದ ಸ್ತ್ರೀರೂಪ. ಪ್ರಪಂಚದಲ್ಲಿ ನಲಿಯುವವರೆಲ್ಲರೂ, ಜಗನ್ಮಾತೆಯ ಮಾಯೆಯಿಂದ ಮರುಳಾಗಿ ರೂಪ, ಲಾವಣ್ಯ, ಯೌವನ ವೈಭವಗಳೆಂಬ ಮಾಯಾ ಪ್ರಪಂಚದಲ್ಲಿ ಕುಣಿಯುತ್ತಾರೆ. ಆದರೆ ಇದೇ ಮಾನವ ಪ್ರಕೃತಿಯ ನಿಜಸ್ವರೂಪ. ಹೆಣ್ಣನ್ನು ಕಂಡಾಗ ಉಪಾಸಕನು ಈ ನಿಜರೂಪವನ್ನು ನೆನೆಯಬೇಕು. ಈಗ ನಿನಗೆ ಮತ್ತೊಮ್ಮೆ ಉಪದೇಶಕೊಡುತ್ತೇನೆ. ತಪ್ಪಿದರೆ ಅಂದೇ ನಿನಗೆ ಘೋರ ಮರಣವು ಸಿದ್ಧ" ಎಂದು ಹೇಳಿ ಉಪ ದೇಶವಿತ್ತನು. ಜಂಗಮದೇವನು ಪುನಃ ಕಣ್ಣುತೆರದು ನೋಡಿದಾಗ ಅದೇವಿಕಾರ ರೂಪಗಳನ್ನು ಕಂಡನು ಕಾಪಾಲಿಕನು ಆಕಾಶದ ಕಡೆಗೆ ಕೈತೋರಿಸಿ "ನೀಲಕಂಠ ಅಲ್ಲಿ ನೋಡು" ಎಂದನು, ಅಲ್ಲಿ ಅಮೃತ ಶರೀರದ ದಿವ್ಯಾಕಾರವನ್ನು ಕಂಡನು. "ನೀಲಕಂಠ ಉಪಾಸಕನು ಈ ಘೋರ ರೂಪದಿಂದ ಆ ದಿವ್ಯರೂಪವನ್ನು ಪಡೆಯುವನು" ಎಂದು ಹೇಳಿ ದನು. ಜಂಗಮನು ಪ್ರಜ್ಞಾಶೂನ್ಯವಾಗಿ ಬಿದ್ದನು. ಕಾಪಾಲಿಕನು

ಎಳೆಯ ಕೂಸನ್ನು ಎತ್ತಿಕೊಂಡು ಹೋಗುವಂತೆ ಆ ಜಂಗಮನನ್ನು ಎತ್ತಿಕೊಂಡು ಹೋಗಿ ಜಂಗಮನ ಸ್ವಸ್ಥಾನದಲ್ಲಿ ಮಲಗಿಸಿ ಹೊರಟು ಹೋದನು

ಮಾರನೆಯ ದಿನ ಬೆಳಗಾಗುತ್ತಲೇ ಮಲ್ಲಿಗೆಯು ಎಂದಿನಂತೆ ಜಂಗಮದೇವನನ್ನು ಆರಾಧಿಸಲು ಬಂದಳು. ಜಂಗಮನ ಪರಿಯು ಬೇರೆಯಾಗಿದ್ದಿತು. ಮಲ್ಲಿಗೆಯಿಂದ ಅವನ ಮನವು ಎಷ್ಟೋ ದೂರ ಸರಿದು ಹೋಗಿದ್ದಿತು. ಅವನ ನಡೆನುಡಿಗಳಲ್ಲಿ ಹಗಲಿರುಳುಗಳಷ್ಟು ಭೇದವು ಕಾಣುತ್ತಿದ್ದಿತು. ಅವನು ಮಾತನಾಡಲಿಲ್ಲ. ಮುಖ ಭಾವ ದಲ್ಲಿ ಪ್ರಸನ್ನತೆಯನ್ನು ತೋರಲಿಲ್ಲ ಮಲ್ಲಿಗೆಯು "ಗುರುದೇವಾ, ಇಂದೇಕೆ ಹೀಗಿರುವಿರಿ ? ಎಂದಿನಂತೆ ನೀವೇಕೆ ಪ್ರಸನ್ನಭಾವದಿಂದಿಲ್ಲ" ಎಂದು ಕೇಳಿದಳು.

ಜಂಗಮನು ತನ್ನ ಮನವನ್ನು ಮರೆಮಾಚುತ್ತಾ "ಮಲ್ಲಿಗೆ, ಇಷ್ಟು ದಿನಗಳ ತಪಸ್ಸಿನಿಂದ ಫಲವಾಗಲಿಲ್ಲ. ಹೊಸದೊಂದು ಕಠಿಣ ವಾದ ಆರಾಧನೆಯನ್ನು ಕೈಗೊಳ್ಳಬೇಕೆಂದಿದ್ದೇನೆ. ನೀನು ಪ್ರತಿದಿನವೂ ನೋಡಿ ಮರುಕಗೊಳ್ಳಲಾರಂಭಿಸುವೆ.: ನಾನು ನಿನಗೆ ಮೊದಲೇ ನಿನ್ನ ಭವಿಷ್ಯವನ್ನು ಹೇಳಿದ್ದೇನೆ. ನೀನು ರಾಜನಾದ ಚಿಕ್ಕದೇವರಾಯನಿ ಗಾಗಿ ಜನ್ಮವೆತ್ತಿರುವ ಹೆಣ್ಣು. ನೀನು ದಾರಿ ತಪ್ಪಿದ್ದೀ. ಪರಮೇಶ್ವರನ ಪ್ರೇರಣೆಯಿಂದ ನಿನ್ನನ್ನು ಪುನಃ ಸಂಸಾರಮಾರ್ಗಕ್ಕೆ ತಂದಿದ್ದೇನೆ. ನಿನ್ನನ್ನು ಪುನಃ ರಾಜನಿಗೆ ಸಮರ್ಪಣೆಮಾಡಬೇಕು. ಕೆರೆಯ ನೀರನ್ನು ಕೆರೆಗೆ ಚೆಲ್ಲಬೇಕು ಅದೇ ನನ್ನ ಸಂಕಲ್ಪ."

"ಗುರುದೇವಾ, ನಾನು ನಿನ್ನ ಸಂಕಲ್ಪದಂತೆ ನಡೆಯುವವಳು. ಆದರೆ ನಾನು ದಾರಿ ತಪ್ಪಿದ್ದೆನೆಂದು ನುಡಿದೆಯಲ್ಲವೆ ? ಸರ್ವಸ್ವ ದಾನ ಮಾಡುವುದು ತಪ್ಪುದಾರಿಯೋ ? ಸನ್ಯಾಸಿನಿಯಾಗುವುದು ತಪ್ಪು ದಾರಿಯೋ ?"

" ಹೌದು ಮಗಳೇ. ಸನ್ಯಾಸಧರ್ಮದ ಕಠೋರತೆಯನ್ನು

ನೀನರಿಯೆ. ಭಗವಂತನು ಸ್ತ್ರೀ ಪುರುಷರನ್ನು ಸೃಷ್ಟಿಮಾಡುವಾಗಲೇ ಭೇದವನ್ನು ಕಲ್ಪಿಸಿದ್ದಾನೆ. ಪುರುಷರಿಗಿಂತಲೂ, ಸ್ತ್ರೀಯು ಸನ್ಯಾಸಿನಿಯಾಗುವುದು ಬಲು ಕಷ್ಟ. ನನಗೆ ಸನ್ಯಾಸಿಯೆಂದು ಹೆಸರು. ಇಷ್ಟು ಕಾಲ ಕಠಿಣ ವ್ರತದಿಂದಲೂ ನಾನು ನಿಜವಾಗಿ ಸನ್ಯಾಸಿಯಾಗಿಲ್ಲ. ಸ್ತ್ರೀಯೆಂದರೆ ಸಂಸಾರ ; ಸಂಸಾರವೆಂದರೆ ಸ್ತ್ರೀ. ಸೃಷ್ಟಿನಿಯಮವೇ ಹೀಗಿದೆ. ಆ ಸೃಷ್ಟಿನಿಯಮವನ್ನು ದಾಟಿದವರು ಕೋಟಿಗೊಬ್ಬರು. ನೀನು ಸಂಸಾರಿಯಾಗಬೇಕು ಮಗಳೇ."

"ಗುರುದೇವಾ, ನಾನೆಂದಿಗೂ ಸನ್ಯಾಸಪಥವನ್ನು ಗೆಲ್ಲಲಾರೆನೇ?"

"ಅದು ಭಗವಂತನಿಗೆ ಗೋಚರ, ಇಂದಂತೂ ಇಲ್ಲ. ಇಂದು ನೀನು ಸಂಸಾರಿಯಾಗು ಅದರಿಂದಲೇ ಪುಣ್ಯಾತ್ಮಳಾಗುವೆ" ಎಂದು ಹೇಳಿದನು. ಅವನ ಕಣ್ಣುಗಳಲ್ಲಿ ಒಂದೆರಡು ಹನಿಗಳು ತೊಟ್ಟಿಕ್ಕಿದವು. ಮಲ್ಲಿಗೆಯು ಆ ಜಂಗಮದೇವನ ಪರಿಸ್ಥಿತಿಯನ್ನು ನೋಡಲಾರದೇ ನೋಡಿ ಸಹಿಸಲಾರದೇ ಅಲ್ಲಿಂದ ಹೊರಟು ಹೋದಳು.

ಜಂಗಮದೇವನ ಅಪ್ಪಣೆಯಂತೆ ಅವನ ಶಿಷ್ಯನೊಬ್ಬನು ಅಂದೇ ರಾಜಧಾನಿಗೆ ಹೊರಟು ರಾಜನನ್ನು ಸಂದರ್ಶನಮಾಡಿದನು. ಅವನು ರಾಜನಿಗೆ "ಮಹಾ ಪ್ರಭುಗಳೇ, ನನ್ನ ಗುರುವಾದ ಜಂಗಮದೇವನು ನಿನ್ನ ಸಂದರ್ಶನವನ್ನು ಬಯಸುತ್ತಾನೆ. ಪ್ರಭುವಿನ ಇಷ್ಟದಂತೆ ಮಾಡಬಹುದು" ಎಂದು ಹೇಳಿ ಹೊರಟುಹೋದನು.

ಚಿಕ್ಕಪ್ಪಾಜಿಗೆ ಆಶ್ಚರ್ಯವಾಯಿತು. ಆ ಒರಟು ಸ್ವಭಾವದ ಶಿಷ್ಯನಿಂದ ಮತ್ತಾವ ವಿಷಯವನ್ನೂ ಅರಿತುಕೊಳ್ಳಲಾಗಲಿಲ್ಲ. ಮಲ್ಲಿಗೆಯು ಜಂಗಮದೇವನ ಮಠದಲ್ಲಿಯೇ ಇರುವಳೆಂದು ರಾಜನಿಗೆ ತಿಳಿದಿತ್ತು. ಅವಳ ವಿಷಯವಾದ ಮಾತು ರಾಜನಿಗೆ ಪ್ರಿಯವಾಗಿದ್ದಿತು. ಅವನು ಜಂಗಮದೇವನ ದರ್ಶನಕ್ಕೆ ಹೋಗಲೇಬೇಕೆಂದೂ ಅಲ್ಲಿ ಮಲ್ಲಿಗೆಯನ್ನು ನೋಡಬಹುದೆಂದೂ ಆಸಕ್ತನಾದನು. ತನ್ನ ನರ್ಮಸಚಿವನಾದ ಸಿಂಗರಾರ್ಯನಿಗೆ ಕರೆಕಳುಹಿಸಿದನು. ಅವನಿಗೆ ಜಂಗಮದೇವನ

ಸಂದೇಶವನ್ನು ಅರುಹಿದನು. ಸಿಂಗರಾರ್ಯನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಜಂಗಮನು ಹೇಳಿದ್ದ ಗಡುವು ಬಂದಿತೆಂದು ಭಾವಿಸಿದನು ರಾಜನನ್ನು ಪ್ರೋತ್ಸಾಹಿಸಿ ಮೈಸೂರಿಗೆ ಗೋಪ್ಯವಾಗಿ ಹೊರಡುವ ಪ್ರಯತ್ನ ಮಾಡಿದನು.

ರಾಜನು ಮರುದಿನವೇ ಯಾರಿಗೂ ತಿಳಿಸದೇ ಮೈಸೂರಿಗೆ ಪಲ್ಲಕ್ಕಿಯಲ್ಲಿ ಕುಳಿತು ಪ್ರಯಾಣಮಾಡಿದನು. ಸಿಂಗರಾರ್ಯನು ರಾಜನನ್ನು ಹಿಂಬಾಲಿಸಿದನು. ರಾಜನು ಹೋಗಿ ಮೈಸೂರು ಅರಮನೆಯಲ್ಲಿ ಬಿಡಾರಮಾಡಿದನು. ಸಂಧ್ಯಾಕಾಲ ಸಿಂಗರಾರ್ಯನನ್ನು ಜೊತೆಯಲ್ಲಿ ಕರೆದುಕೊಂಡು ಕಾಲು ನಡೆಯಲ್ಲಿಯೇ ಬೆಟ್ಟದ ತಪ್ಪಲಿನಲ್ಲಿರುವ ಜಂಗಮದೇವನ ಮಂಟಪಕ್ಕೆ ತೆರಳಿದನು ಸೂರ್ಯಾಸ್ತಮಾನವಾಗಿತ್ತು. ಜಂಗಮದೇವನು ಸ್ನಾನಾದಿಗಳನ್ನು ಪೂರೈಸಿ, ಪೂಜಾಗೃಹದಲ್ಲಿ ಕುಳಿತಿದ್ದನು ಮಲ್ಲಿಗೆಯೂ ಚಾಮುಂಡಿಯೂ ಪೂಜೆಗೆ ಸಿದ್ಧಮಾಡುತ್ತಿದ್ದರು. ಶಿಷ್ಯನೊಬ್ಬನು ಬಂದು ರಾಜನ ಆಗಮನವನ್ನು ಜಂಗಮದೇವನಿಗೆ ತಿಳಿಸಿದನು. ರಾಜನು ಪೂಜಾಗೃಹದಲ್ಲಿಯೇ ಜಂಗಮನನ್ನು ಸಂದರ್ಶಿಸಿದನು. ರಾಜನು ಜಂಗಮದೇವನನ್ನು ಭೇಟಿ ಮಾಡಿದ್ದು ಅದೇ ಮೊದಲು. ಆ ಮಹಾತೇಜಸ್ವಿಯಾದ ಸಿದ್ಧಪುರುಷನ ದರ್ಶನದಿಂದ ರಾಜನು ಬೆರಗಾದನು ಮೈಮರೆತು ಅಡ್ಡಬಿದ್ದು ನಮಸ್ಕರಿಸಿದನು ಜಂಗಮದೇವನು ರಾಜನನ್ನು ಆಸನದಮೇಲೆ ಕುಳಿತುಕೊಳ್ಳುವಂತೆ ಹೇಳಿ ಕುಶಲ ಪ್ರಶ್ನೆಗಳನ್ನು ಮಾಡಿದನು. ರಾಜನು ಯಥೋಚಿತವಾದ ಉತ್ತರಗಳನ್ನು ಇತ್ತನು. ಜಂಗಮದೇವನು ತಲೆಬಾಗಿ ನಿಂತಿದ್ದ ಮಲ್ಲಿಗೆಯ ಕಡೆಗೆ ದೃಷ್ಟಿಯನ್ನು ಬೀರಿದನು. ರಾಜನ ದೃಷ್ಟಿಯೂ ಅತ್ತಕಡೆಯೇ ಸೆಳೆಯಿತು. ನಾರುಮಡಿಯನ್ನು ಉಟ್ಟಿದ್ದ ಮಲ್ಲಿಗೆಯನ್ನು ರಾಜನು ಕಣ್ಣುತುಂಬಾ, ನೋಡಿದನು ಮನಸ್ಸು 'ಇವಳೇ ನೀನೊಲಿದ ಗಾಯಕಿ, ಆದರೆ ಈ ವೇಷ ಈ ನಮ್ರಭಾವಗಳು ಈ ರೂಪಕ್ಕೆ ಎಷ್ಟೊಂದು ಮೆರಗು ಕೊಟ್ಟಿದೆ' ಎಂದು

ಆಶ್ಚರ್ಯಗೊಂಡಿತು. ಅವನ ಮನಸ್ಸಿಗೆ ಮಲ್ಲಿಗೆಯು ಶರೀರವನ್ನು ಕಳೆದ ಭಕ್ತಿಭಾವದಂತೆ ಕಂಗೊಳಿಸಿದಳು. ಜಂಗಮದೇವನು "ಮಹಾ ರಾಜನೇ, ಈ ಮಲ್ಲಿಗೆಯು ನಿನ್ನವಳು ನೀನು ಬಯಸಿದ ಹೆಣ್ಣು. ರಾಜನ ಇಹಲೋಕದ ಇಷ್ಟಾರ್ಥಗಳು ಪೂರೈಸದಿದ್ದರೆ, ಆ ರಾಜನು ಪರಿಪೂರ್ಣ ಮನೋರಥನಾಗುವುದಿಲ್ಲ. ರಾಜನು ಯಾವಾಗಲೂ ಪರಿಪೂರ್ಣನಾಗಿರಬೇಕು ಈ ಮಲ್ಲಿಗೆಯು ಸನ್ಯಾಸಿನಿಯಾಗಿ ಮಹಾ ಸಮುದ್ರದಲ್ಲಿ ಧುಮುಕುತ್ತಿದ್ದಳು. ಪಾರವನ್ನು ಕಾಣುತ್ತಿದ್ದಳೋ ಇಲ್ಲವೋ ಯಾರಿಗೆ ಗೊತ್ತು ? ನಾನು ಆ ಸಮುದ್ರದಿಂದ ಎತ್ತಿ ತಂದು ನಿನಗೆ ಕೊಟ್ಟಿದ್ದೇನೆ. ಅನರ್ಘ್ಯರತ್ನಗಳು ರಾಜರಿಗೆ ಸಲ್ಲತಕ್ಕವುಗಳು. ನೀನು ಇವಳನ್ನು ಕರೆದುಕೊಂಡುಹೋಗು. ಈ ಮಾನವ ಜಗತ್ತಿನಲ್ಲಿ ಕುಲಶೀಲಗಳ ಅಡ್ಡಿ ಆತಂಕಗಳಿವೆ ಅವು ಸಮಾಜದ ಭದ್ರತೆಗಾಗಿ ಇರಲೇಬೇಕಾದವುಗಳು. ಈ ಮಲ್ಲಿಗೆಯು ವೇಶ್ಯಾಕುಲದಲ್ಲಿ ಹುಟ್ಟಿದವಳು. ಆದರೆ ಭಗವತ್ ಸೇವೆಯಿಂದ ಪವಿತ್ರಾತ್ಮಳಾಗಿದ್ದಾಳೆ. ವೈದಿಕ ಧರ್ಮದಂತೆ ನೀನು ಇವಳನ್ನು ವಿವಾಹವಾಗದಿದ್ದರೂ ಶಿವಸಾಕ್ಷಿಯಾಗಿ ಇವಳು ನಿನ್ನಪತ್ನಿ" ಎಂದು ಹೇಳಿದನು. ರಾಜನು ಮರುಮಾತನಾಡಲಿಲ್ಲ. "ಜಂಗಮದೇವ ನೀನು ನಿಜವಾದ ವಿರಕ್ತಪುರುಷನು ಪ್ರಪಂಚವನ್ನು ಚೆನ್ನಾಗಿಬಲ್ಲೆ ನನ್ನ ಮನದಲ್ಲಿದ್ದ ಮಾತುಗಳನ್ನೇ ನೀನು ಜ್ಞಾನಿಯಂತೆ ಹೇಳಿರುವೆ. ಈ ಮಲ್ಲಿಗೆಯು ನಿಜವಾಗಿ ನನ್ನವಳು ನಿನ್ನ ಆಜ್ಞೆಯಂತೆ ನಾನಿವಳನ್ನು ಪರಿಗ್ರಹಿಸುತ್ತೇನೆ" ಎಂದು ಹೇಳಿ ಜಂಗಮನ ಆಜ್ಞೆಯನ್ನು ಪಡೆದನು. ಅಲ್ಲಿಂದ ಹೊರಟನು. ಜಂಗಮದೇವನು ಮಲ್ಲಿಗೆಯನ್ನು ವಿಶ್ವಾಸದಿಂದ ಕಳುಹಿಸಿಕೊಟ್ಟನು. ಅಂದಿನಿಂದ ಮಲ್ಲಿಗೆಯು ಅರಮನೆಯನ್ನು ಸೇರಿದಳು. ಕಾಡಿನಲ್ಲಿ ಹುಟ್ಟಿಬೆಳೆದ ಆ ಪಕ್ಷಿಯು ಈಗ ರಾಜಹಂಸೆಯಂತೆ ಬೆಳಗಿದಳು. ಅದು ಅವಳ ಅದೃಷ್ಟದಲ್ಲಿ ಬರೆಯಲ್ಪಟ್ಟಿದ್ದ ಸ್ವರ್ಣರೇಖೆ.

ಚಿಕ್ಕಪ್ಪಾಜಿಯು ಮೈಸೂರಿನ ಅರಮನೆಗೆ ತೆರಳುವನೆಂದೂ ತ್ರಿಣೇಶ್ವರನ ಗುಡಿಗೋಪುರಗಳ ನಿರ್ಮಾಣಕಾರ್ಯವು ಆರಂಭವಾಗುವು ದೆಂದೂ ರಾಜಧಾನಿಯಲ್ಲೆಲ್ಲ ಜನರು ಮಾತನಾಡಿಕೊಳ್ಳಲು ಆರಂಭಿ ಸಿದರು. ರಾಜನಿಗೆ ಒಬ್ಬ ಜಂಗಮನು ಗಂಟುಬಿದ್ದಿದ್ದಾನೆಂದೂ ಇದರಿಂದ ರಾಜ್ಯದಲ್ಲಿ ಶಿವಭಕ್ತರ ಪ್ರಾಬಲ್ಯವು ಹೆಚ್ಚಾಗುವುದೆಂದೂ ವೈಷ್ಣವರು ನೊಂದುಕೊಳ್ಳತೊಡಗಿದರು. ಆ ಕಾಲದಲ್ಲಿ ಶಿವವೈಷ್ಣವ ಭೇದವು ಅತ್ಯಂತ ಉತ್ಕಟಾವಸ್ಥೆಗೆ ಬಂದಿದ್ದಿತು. ದೇವಾಲಯಗಳು, ಕ್ಷೇತ್ರ ಗಳು, ಗುರುಗಳು, ವಿದ್ವಾಂಸರುಗಳು ಇವುಗಳ ಸೂತ್ರಗಳಲ್ಲಿ ಸಮಾ ಜವು ಆಡುತ್ತಿದ್ದಿತು. ಆ ಕಾಲದ ಪರಿಸ್ಥಿತಿಗಳೇ ಬೇರೆ. ಈ ಕಾಲ ದಲ್ಲಿ ಹಿಂದಿನಕಾಲದ ನಿಜಸ್ಥಿತಿಯನ್ನು ಅರಿಯುವುದು, ಅನುಭವಮಾಡಿ ಕೊಳ್ಳುವುದು, ನಂಬುವುದು ಅತಿಕಷ್ಟ. ಆ ಕಾಲದ ಯುದ್ಧಗಳಿಗೆಲ್ಲಾ ಮುಖ್ಯಕಾರಣವು ಮತಾಭಿಮಾನ. ಮತ್ತೊಂದು ಕಾರಣವೆಂದರ ಹೆಣ್ಣಿನ ಆಸೆ ಈ ಗ್ರಹಣವು ಮೈಸೂರಿಗೂ ಹಿಡಿಯದೆ ಇರಲಿಲ್ಲ.

ರಾಜನು ಮೈಸೂರರಮನೆಯಲ್ಲಿ ವಾಸಮಾಡಲು ಆರಂಭಿಸಿದನು. ಇದರ ಗುಟ್ಟು ಎಲ್ಲರಿಗಿಂತಲೂ ಮೊದಲು ಪಂಡಿತನಿಗೆ ತಿಳಿದುಹೋಗಿ ದ್ದಿತು. ಇದು ಮತಭೇದದ ಪರಿಣಾಮವಲ್ಲವೆಂದೂ ಮಲ್ಲಿಗೆಯ ಮೋಹದ ಪರಿಣಾಮವೆಂದೂ ಪಂಡಿತನು ಅರಿತಿದ್ದನು ಎಷ್ಟೇ ಸಾಹಸ ಮಾಡಿದರೂ ಅದನ್ನು ತಪ್ಪಿಸಲು ಸಾಧ್ಯವಾಗದೆಂದು ಪಂಡಿತನು ನಿಶ್ಚಯಮಾಡಿಕೊಂಡನು. ಆದರೆ ಚಿಂತೆಯುಮಾತ್ರ ಅವನ ಮನ ಸ್ಸನ್ನು ಸುಡುತ್ತಲೇ ಇದ್ದಿತು. ಒಬ್ಬ ಸ್ತ್ರೀಯಮೋಹದಲ್ಲಿ ರಾಜನು ಸಿಲುಕಿಕೊಂಡಿದ್ದರೆ, ರಾಜ್ಯಭಾರವು ಸುಸೂತ್ರವಾಗಿ ನಾಗುವುದು ಕಷ್ಟ ವೆಂದು ಪಂಡಿತನು ಅಡಿಗಡಿಗೂ ಭಾವಿಸುತ್ತಿದ್ದನು. ರಾಜ್ಯಭಾರದ

ಭಾರವೆಲ್ಲವೂ ಪಂಡಿತನಮೇಲೆಯೇ ಬಿದ್ದಿದ್ದಿತು.

ಮಂತ್ರಿಯು ರಾಜ್ಯಭಾರದ ಹೊಸ ವ್ಯವಸ್ಥೆಗಳನ್ನೆಲ್ಲಾ ಏರ್ಪ ಡಿಸಿದನು. ಕಾವೇರಿಯನದಿಗೆ ಅಣೆಕಟ್ಟುಗಳನ್ನು ಹಾಕಿ ಕಾಲುವೆ ಗಳನ್ನು ಮಾಡಿಸಿದನು. ರೈತರಿಂದ ಹಣದ ರೂಪದಲ್ಲಿ ಕಂದಾಯ ವನ್ನು ತೆಗೆದುಕೊಳ್ಳುವ ವ್ಯವಸ್ಥೆಮಾಡಿದನು. ಶ್ರೀರಂಗಪಟ್ಟಣದಲ್ಲಿಯೇ ಹೊಸ ನಾಣ್ಯಗಳ ಟಂಕಸಾಲೆಯನ್ನು ಏರ್ಪಡಿಸಿದನು. ಮುಖ್ಯ ಮುಖ್ಯ ಸ್ಥಳಗಳಲ್ಲಿ ನ್ಯಾಯಸ್ಥಾನಗಳನ್ನು ನಿರ್ಮಿಸಿದನು. ವಯೋ ವೃದ್ಧರಾದ ವಿದ್ವಾಂಸರುಗಳನ್ನು ನ್ಯಾಯತೀರ್ಮಾನಕ್ಕೆ ಗೊತ್ತು ಮಾಡಿದನು. ಮಂತ್ರಿಯ ರಾಜ್ಯಭಾರವನ್ನು ಜನರೆಲ್ಲರೂ ಪ್ರಶಂಸಿ ಸುತ್ತಿದ್ದರು. ವಿದ್ವಾಂಸರುಗಳುಮಾತ್ರ ಸಂಶಯದೃಷ್ಟಿಯಿಂದಲೇ ನೋಡುತ್ತಿದ್ದರು. ಹಳೆಯ ಪದ್ಧತಿಗಳೆಲ್ಲಾ ಮಾರ್ಪಟ್ಟು ಹೊಸ ಪದ್ಧತಿಗಳು ರೂಪುಗೊಳ್ಳುತ್ತಿರುವುದು ವಿದ್ವಾಂಸರಿಗೆ ಸಮಾಧಾನಕರ ವಾಗಿರಲಿಲ್ಲ. ಶೈವ–ವೈಷ್ಣವ ಭೇದವನ್ನು ನಿರ್ಮೂಲಮಾಡಬೇಕೆಂದು ಪಂಡಿತನು ಶಪಥಮಾಡಿಕೊಂಡಿದ್ದನು. ಅದರಿಂದಲೂ ವಿದ್ವಾಂಸರಿಗೆ ಮಂತ್ರಿಯಮೇಲೆ ಆಗ್ರಹವು ಬರುತ್ತಿದ್ದಿತು. ಆದರೆ ಮಂತ್ರಿಯನ್ನು ಪ್ರತ್ಯಕ್ಷವಾಗಿ ಕಂಡಾಗ ಆ ವಿದ್ವಾಂಸರ ಮನಸ್ಸುಗಳಲ್ಲಿ ಗೌರವ ಬುದ್ಧಿಯು ಉತ್ಪನ್ನವಾಗುತ್ತಿದ್ದಿತು. ಶೈವರು ವೈಷ್ಣವರು ಅವನನ್ನು ನೋಡಿ ಮೆಚ್ಚಿಕೊಂಡಾಗ 'ಈ ಪಂಡಿತನ ಜನ್ಮವು ಅನ್ಯಾಯವಾಗಿದೆ. ಇವನು ವೈದಿಕ ಬ್ರಾಹ್ಮಣಕುಲದಲ್ಲಿ ಹುಟ್ಟಿದವನೂ ಅಲ್ಲ. ಪವಿತ್ರ ವೀರಶೈವ ಕುಲದಲ್ಲಿ ಜನ್ಮವೆತ್ತಿದವನೂ ಅಲ್ಲ. ಪೂಜ್ಯ ವೈಷ್ಣವರಲ್ಲಿ ಹುಟ್ಟಿದವನೂ ಅಲ್ಲ. ಇವನು ಜೈನ. ಆಚರಣೆಯಲ್ಲಿ ನಾಸ್ತಿಕ' ಎಂದುಕೊಳ್ಳುತ್ತಿದ್ದರು. ಎಲ್ಲರೂ ಅವನನ್ನು ತಮ್ಮ ಕಡೆಗೆ ಎಳೆಸಿ ಕೊಳ್ಳಬೇಕೆಂದು ಸರ್ವವಿಧ ಪ್ರಯತ್ನಗಳನ್ನು ಮಾಡುತ್ತಿದ್ದರು.

ಮೈಸೂರಿನಲ್ಲಿ ತ್ರಿಣೇಶ್ವರನ ದೇವಾಲಯದ ಕೆಲಸವು ಭರದಿಂದ ಸಾಗುತ್ತಿದ್ದಿತು. ರಾಜ ಭಂಡಾರದಿಂದ ಅಪಾರ ದ್ರವ್ಯವು ವೆಚ್ಚವಾಗು

ತ್ತಿದ್ದಿತು. ಇದನ್ನು ಕಂಡು ಕೇಳಿ ವೈಷ್ಣವರು ಉದ್ವಿಗ್ನರಾದರು. ವೈಷ್ಣವ ವಿದ್ವಾಂಸರಲ್ಲಿ ಗಣ್ಯರಾದ ಆಚಾರ್ಯರುಗಳು ಮಂತ್ರಿಯ ಭೇಟಿ ಮಾಡಿದರು. ಮಂತ್ರಿಯು ಆ ವಿದ್ವಾಂಸರುಗಳನ್ನು ಗೌರವದಿಂದ ಬರಮಾಡಿಕೊಂಡು ಅವರ ಕೋರಿಕೆಯನ್ನು ವಿಚಾರಿಸಿದನು ಆ ಆಚಾರ್ಯರು "ಪಂಡಿತನೇ! ಈ ರಾಜ್ಯದ ಪೂರ್ವಕಥೆಯನ್ನು ನೀನರಿಯೆ. ಶಿವಭಕ್ತರೂ ಜಂಗಮರೂ ದಂಗೆಯೆದ್ದು ಮೈಸೂರರಸ ರಾಗಿದ್ದ ರಾಜಒಡೆಯರನ್ನು ಕೊಲೆಮಾಡಲು ಪ್ರಯತ್ನಪಟ್ಟಿದ್ದರು. ರಾಜಒಡೆಯನು ಮೇಲುಕೋಟೆಗೆ ಬಂದು ವೈಷ್ಣವರಿಗೆ ಶರಣು ಹೋದನು. ವೈಷ್ಣವದೀಕ್ಷೆಯನ್ನು ಸ್ವೀಕರಿಸಿದನು. ನಮ್ಮವರೆಂದೂ ರಾಜರಿಗೆ ವಿರೋಧ ಮಾಡಿದವರಲ್ಲ. ಈಗ ಮಹಾರಾಜರು ಶಿವಭಕ್ತ ರಾಗುತ್ತಿದ್ದಾರೆ. ಈ ರಾಜಧಾನಿಯನ್ನೇ ಬಿಟ್ಟುಬಿಟ್ಟಂತಾಗಿದೆ. ನೀನು ಜೈನಮತದವನಾದರೂ ಅದೂ ವೈಷ್ಣವ ಧರ್ಮದ ರೂಪಾಂ ತರವೇ ಹೊರತು ಬೇರೇನೂ ಅಲ್ಲ ನಾವು ಈ ರಾಜ್ಯದಲ್ಲಿ ಈ ಅಭಿ ಭವವನ್ನು ಅನುಭವ ಮಾಡಲಾರೆವು. ರಾಜರಿಗೆ ಪ್ರತಿಯಾಗಿ ಕೈಯೆತ್ತು ವುದು ನಮ್ಮ ಧರ್ಮವಲ್ಲ 'ನಾವಿಷ್ಣುಃ ಪೃಥ್ವೀಪತಿಃ' ಎಂಬ ಪುರಾತನ ವಾಕ್ಯವನ್ನು ನಂಬಿರುವವರು ನಾವು. ವಿಷ್ಣುವಿನ ಅಂಶ ವಿಲ್ಲದೇ ರಾಜತ್ವವು ಬರುವುದೇ ಇಲ್ಲ ನಾವುಗಳು ರಾಜರನ್ನು ಪ್ರತಿ ಭಟಿಸುವುದಿಲ್ಲ. ಆದರೆ ಈ ರಾಜ್ಯದಲ್ಲಿ ವೈಷ್ಣವರ ಒಂದು ಪಿಳ್ಳೆಯೂ ನಿಲ್ಲದಂತೆ ಶ್ರೀರಂಗಕ್ಕೆ ನಾವೆಲ್ಲರೂ ವಲಸೆಯನ್ನು ಹೋಗಿ ಬಿಡುತ್ತೇವೆ. ಈ ವಿಷಯವನ್ನು ರಾಜರಿಗೆ ತಿಳಿಸಿ ನಮಗಪ್ಪಣೆಯನ್ನು ಕೊಡಬೇಕು" ಎಂದು ವಿಜ್ಞಾಪಿಸಿಕೊಂಡರು. ಆಚಾರ್ಯರ ಮಾತುಗಳಲ್ಲಿ ಸುಳ್ಳೇನೂ ಇರಲಿಲ್ಲ. ವೈಷ್ಣವರೆಲ್ಲರೂ ವಲಸೆ ಹೋಗುವುದನ್ನು ನಿಶ್ಚಯ ಮಾಡಿ ದ್ದರು ಎಲ್ಲ ಸಿದ್ಧತೆಗಳೂ ನಡೆದೇ ಹೋಗಿದ್ದವು.

ಪಂಡಿತನು ಆಲೋಚನೆ ಮಾಡತೊಡಗಿದನು. ಹೀಗೆ ವೈಷ್ಣವ ರನ್ನು ಓಡಿಸುವುದು ರಾಜನೀತಿಯಲ್ಲವೆಂದು ಬಗೆದನು. ಮೈಸೂರು

ಅರಮನೆಯಲ್ಲಿ ರಾಜರ ಭೇಟಿಗೆ ಪಂಡಿತನು ಬರುವನೆಂದು ದೂತರು ಸಮಾಚಾರವನ್ನು ತಂದು ಮಹಾರಾಜರಿಗೆ ಒಪ್ಪಿಸಿದರು. ಮಹಾರಾಜರು ಸಂತೋಷದಿಂದ ಮಂತ್ರಿಯ ಬಿಡಾರದ ಏರ್ಪಾಡುಗಳನ್ನು ಅರಮನೆಯಲ್ಲಿಯೇ ಮಾಡಿಸಿದನು.

ಪಂಡಿತನು ಪ್ಯಾನಾದಲ್ಲಿ ಕುಳಿತು ಮೈಸೂರಿಗೆ ಬಂದನು. ತನಗಾಗಿ ಏರ್ಪಟ್ಟಿದ್ದ ಬಿಡಾರದಲ್ಲಿಳಿದುಕೊಂಡು ರಾಜರ ದರ್ಶನಾಪೇಕ್ಷೆಯಿಂದ ಹೇಳಿ ಕಳುಹಿಸಿದನು. ರಾಜನು ಮಂತ್ರಿಯನ್ನು ತನ್ನ ಮಹಲಿಗೆ ಕರೆಸಿಕೊಂಡನು. ಮಂತ್ರಿಯನ್ನು ಕಾಣುತ್ತಲೇ ಚಿಕ್ಕಪ್ಪಾಜಿಯು ಆಸನದಿಂದೆದ್ದು ಪಂಡಿತನನ್ನು ಆಲಿಂಗಿಸಿದನು. ಪರ್ಯಂಕದ ಮೇಲೆ ತನ್ನ ಆಸನದ ಮೇಲೆಯೇ ಪಂಡಿತನನ್ನು ಕೂರಿಸಿ ಕುಶಲ ಪ್ರಶ್ನೆಗಳನ್ನು ಮಾಡಿದನು

ಪಂಡಿತನು ಮಹಾರಾಜನಿಗೆ ರಾಜ್ಯಭಾರದ ವೃತ್ತಾಂತಗಳೆಲ್ಲವನ್ನೂ ವಿವರವಾಗಿ ತಿಳಿಸಿದನು ತಾನು ಮಂತ್ರಿಯು ಮಾತ್ರವಲ್ಲವೆಂದೂ ಮಹಾರಾಜನ ಸ್ನೇಹಿತನೂ ಸುಖದುಃಖಗಳಲ್ಲಿ ಭಾಗಿಯೂ ಆಗಿರುವುದರಿಂದ ಮಹಾರಾಜನ ಮನಸ್ಸಿಗೆ ಕಟುವಾದ ವಿಷಯಗಳನ್ನು ಪ್ರಸ್ತಾಪಿಸಬೇಕಾಗಿ ಬಂದಿದೆಯೆಂದೂ ತಿಳಿಸಿದನು.

ಚಿಕ್ಕಪ್ಪಾಜಿಯು ಸೌಮ್ಯ ಮನೋಭಾವದಿಂದಲೇ, "ಪಂಡಿತನೇ ಹೇಳು! ನಿನ್ನ ಕಟುಭಾಷೆಯು ನನಗೆ ಮಧುರವಾಗಿಯೇ ಇರುತ್ತದೆ. ರಾಜ್ಯಭಾರದ ಹೊಣೆಯನ್ನು ನೀನು ಹೊತ್ತಿರುವಾಗ ನಾನು ನಿರುಪಾಧಿಕವಾಗಿದ್ದೇನೆ. ರಾಜ್ಯಭಾರವು ಸಾಮಾನ್ಯ ಕರ್ಮವೇನೂ ಅಲ್ಲ. ಆ ಗುರುತರ ಭಾರವನ್ನು ಹೊರುವವನ ಮಾತು ಕಠಿಣವಾಗಿಯೇ ಇರುತ್ತದೆ."

"ನೋಡು ಚಿಕ್ಕಪ್ಪಾಜಿ! ನಿನ್ನ ಮೈಸೂರಿನ ವಾಸವು ಒಳ್ಳೆಯ ಪರಿಣಾಮವನ್ನುಂಟುಮಾಡಿಲ್ಲ. ರಾಜಧಾನಿಯಲ್ಲಿ ಪಂಡಿತರು ಪಾಮರರು ರಾಜಕರ್ಮಚಾರಿಗಳು ಒಂದಲ್ಲ ಒಂದು ಕಾರಣದಿಂದ ಉದ್ವಿಗ್ನ

ರಾಗಿದ್ದಾರೆ. ಇಲ್ಲಿ ನಿನ್ನ ಈ ಶಿವಾಲಯದ ಜೀರ್ಣೋದ್ಧಾರದಿಂದ ನೀನು ಜಂಗಮರ ಕೈಗೊಂಬೆಯಾಗಿರುವೆಯೆಂದು ವೀರವೈಷ್ಣವರು ರಾಜವಿರೋಧಿಗಳಾಗಿದ್ದಾರೆ. ಈ ಗಾಯಕಿಯ ಪ್ರಣಯದಿಂದ ಅವಳ ವಶವರ್ತಿಯಾಗಿರುವೆಯೆಂದು ವಿದ್ವಾಂಸರುಗಳು ಕುಪಿತರಾಗಿದ್ದಾರೆ. ರಾಜಕಾರ್ಯಗಳಲ್ಲಿ ಪೂರ್ಣವಾಗಿ ವಿಮುಖನಾಗಿರುವೆಯೆಂದು ರಾಜ ಕರ್ಮಚಾರಿಗಳು ನಿರುತ್ಸಾಹಿತರಾಗಿದ್ದಾರೆ. ರಾಜಧಾನಿಯಲ್ಲಿ ರಾಜ ಭಕ್ತಿಯು ಪೂರ್ಣವಾಗಿ ಅಳಿದುಹೋಗಿವೆ. ನಾನು ಹೇಗೆ ತಾನೇ ಈ ರಾಜ್ಯಭಾರವನ್ನು ತೃಪ್ತಿಕರವಾಗಿ ನಡೆಸಲಾದೀತು ?"

"ಪಂಡಿತನೇ ! ನೀನು ತಂದಿರುವ ಸಮಸ್ಯೆಯೇನೋ ತೊಡಕಾದುದೇ ಹೌದು ಅದಕ್ಕೆ ನೀನೇ ಉಪಾಯವನ್ನು ಚಿಂತಿಸಬೇಕು. ನಾನು ನಿನ್ನ ಮಾತಿನಂತೆ ನಡೆಯುವ ಭರವಸೆಯನ್ನು ಕೊಡಬಲ್ಲೆನು."

"ಸರಿ ! ಚಿಕ್ಕಪ್ಪಾಜಿ ಕಾರ್ಯಕಾರಣಗಳು ಹೊಂದಿಕೊಂಡು ಹೋಗುತ್ತವೆ. ಆ ಗಾಯಕಿಯು ಗರಳಪುರಿಯಲ್ಲಿ ಸರ್ವಸ್ವ ದಾನ ಮಾಡಿದಳೆಂದು ಕೇಳಿದ್ದೆನು. ಸಂನ್ಯಾಸಿನಿಯಾಗುವಳೆಂದು ಜನರಂದುಕೊಳ್ಳುತ್ತಿದ್ದರು. ಯಾವನೋ ಜಂಗಮನು ಅವಳನ್ನು ಮಾಯೆಯಿಂದ ಕೊಂಡುಹೋದನೆಂದು ಸುದ್ದಿಯು ಹರಡಿದ್ದಿತು. ಈಗ ಅವಳೇ ಈ ಮೈಸೂರರಮನೆಯಲ್ಲಿ ರಾಣಿಪಟ್ಟವನ್ನು ವಹಿಸಿದ್ದಾಳೆಂದು ಜನಜನಿತವಾಗಿದೆ. ಆ ಜಂಗಮರು ಮಾಯಾಜಾಲವನ್ನು ಬೀಸಿ ನಿನ್ನನ್ನು ಸೆಳೆದು ಈ ಅಧಃಪತನಕ್ಕೆ ಕಾರಣವನ್ನುಂಟುಮಾಡಿದ್ದಾರೆ"

"ಹಾ ! ಹಾ ! ಆ ಜಂಗಮನಲ್ಲೇನೂ ತಪ್ಪಿಲ್ಲ. ನಾನೂ ಅವನನ್ನು ನಾನಾವಿಧವಾಗಿ ಪರೀಕ್ಷೆ ಮಾಡಿದ್ದೇನೆ."

"ಹೌದು ! ಅವನ ಮಾಯೆಯಲ್ಲಿ ನೀನೂ ಸಿಲುಕಿಕೊಂಡಿರುವುದರಿಂದ ನಿನಗೆ ತಪ್ಪೇಕಾಣುವುದಿಲ್ಲ. ಈ ದೇವಾಲಯದ ಜೀರ್ಣೋದ್ಧಾರದ ರಹಸ್ಯವೇನು ?"

"ಅದರಲ್ಲಿ ರಹಸ್ಯವೇನಿದೆ? ಸ್ಪಷ್ಟವಾಗಿಯೇ ಇದೆ. ಆ ತಪೋನಿಷ್ಠನಾದ ಜಂಗಮನು ಈಶ್ವರಪ್ರೇರಣೆಯಿಂದ ಈ ದೇವಾಲಯವನ್ನು ಕಟ್ಟಿಸಿ ಗೋಪುರವನ್ನು ನಿರ್ಮಾಣಮಾಡಬೇಕೆಂದು ಸಂಕಲ್ಪಿಸಿದನು."

"ರಾಜನೇ! ಯಾರ ಸಂಕಲ್ಪಕ್ಕೆ ಯಾರು ತೊತ್ತಾಗಬೇಕು? ಅವನು ತಪಃಪ್ರಭಾವವುಳ್ಳವನಾಗಿದ್ದರೆ ಅವನತವಸ್ಸಿನಿಂದಲೇ ಈ ಗುಡಿ ಗೋಪುರಗಳು ನಿರ್ಮಾಣವಾಗುತ್ತಿದ್ದವು."

"ಪಂಡಿತನೇ! ಬುದ್ಧಿವಂತನೂ ಶಾಸ್ತ್ರಜ್ಞನೂ ಆದ ನೀನು ಹೀಗೆ ಮಾತನಾಡುವುದು ಆಶ್ಚರ್ಯವಾಗಿದೆ ಈ ಭಾರತವರ್ಷದಲ್ಲಿ ಮಹಾತಪಸ್ವಿಗಳು ಇದ್ದಾರೆಂದು ನೀನು ಒಪ್ಪುವುದಿಲ್ಲವೇ? ಯಾವ ತಪಸ್ವಿಯಾದರೂ ತಪಃಪ್ರಭಾವದಿಂದ ಗುಡಿಗೋಪುರಗಳನ್ನು ನಿರ್ಮಿಸಿದ ನಿದರ್ಶನವುಂಟೇ?"

"ಚಿಕ್ಕಪ್ಪಾಜೀ ಆ ಜಂಗಮನು ನಿಜವಾದ ತಪಸ್ವಿಯಾಗಿದ್ದರೆ ಗುಡಿಗೋಪುರಗಳ ಹವ್ಯಾಸವು ಅವನಿಗೇಕೆ? ಈ ಸೃಷ್ಟಿಯೇ ಅವನ ಗುಡಿ ಈ ಜಗತ್ತಿನಲ್ಲಿ ಬೆಳಗುವ ಚೇತನವೇ ಅವನ ದೇವರು. ಈ ಕಲ್ಲುಗುಡಿಗಳಿಂದ ತಪೋನಿಷ್ಠನಿಗೆ ಏನಾದೀತು? ಆ ಜಂಗಮನು ನಿಜವಾದ ತಪಸ್ವಿಯಾಗಿದ್ದರೆ ರಾವಣಾಸುರನು ಸ್ವರ್ಣಮೃಗವನ್ನು ತಂದೊಡ್ಡಿ ಸೀತಾದೇವಿಯನ್ನು ಅಪಹರಿಸಿದಂತೆ ಈ ನರ್ತಕಿಯನ್ನು ನಿನ್ನ ಮುಂದೆ ಕರೆತಂದು ನಿಲ್ಲಿಸಿ ಈ ದೇವಪ್ರಾಕಾರ ನಿರ್ಮಾಣಕ್ಕೆ ಹಣವನ್ನು ಯಾಚಿಸಬೇಕೆ? ಅವನೇ ಪ್ರತ್ಯಕ್ಷವಾಗಿ ಬಂದು ಮಹಾರಾಜನನ್ನು ಪ್ರಾರ್ಥನೆ ಮಾಡಬಾರದಿತ್ತೇ? ಈಗಲೂ ಇದರಲ್ಲಿ ತಂತ್ರ ಮಾಯೆಗಳಿವೆಯೆಂದು ನಿನಗನಿಸುವುದಿಲ್ಲವೇ?" ರಾಜನು ಸ್ವಲ್ಪ ಹೊತ್ತು ಮೌನವಾಗಿದ್ದನು. "ಕೇಳು ಪಂಡಿತನೇ! ಜಂಗಮನ ಮಾತು ನನಗೆಬೇಡ ನಾನು ಅವನ ಭಕ್ತನಲ್ಲ. ಈ ಗಾಯಕಿಯನ್ನು ನೀನು ಬಲ್ಲೆ ನಾವಿಬ್ಬರೂ ನಾನಾ ದೇಶಗಳನ್ನು ಸಂಚರಿಸಿದ್ದೇವೆ. ಆ ಹೆಣ್ಣಿನಂಥಾ ಸೌಂದರ್ಯವತಿಯೂ ಗುಣಾಢ್ಯಳೂ ಮತ್ತಾರನ್ನೂ ನಾನು

ಕಂಡಿಲ್ಲ. ಅದನ್ನು ನೀನೊಪ್ಪುವೆಯಾ ?"

"ಚಿಕ್ಕಪ್ಪಾಜಿ ಗಾಯಕಿಯ ಗುಣದೋಷಗಳನ್ನು ಚರ್ಚಿಸಲು ನಾನು ನಿನ್ನಲ್ಲಿಗೆ ಬಂದಿಲ್ಲ. ಆ ಪ್ರಕರಣದಿಂದ ಜನತೆಯ ಮನಸ್ಸಿನ ಮೇಲೆ ಆಗಿರುವ ಪರಿಣಾಮವು ಮುಖ್ಯವಾದುದು. ಅದೂ ಎಲ್ಲ ಗುಣದೋಷಗಳಿಗಿಂತಲೂ ದೊಡ್ಡದು. ರಾಜನು ಬದುಕಿರುವವರೆಗೆ ಪ್ರಜಾವತ್ಸಲನಾಗಿರಬೇಕು. ಪ್ರಜಾರಂಜಕನಾಗಿರಬೇಕು. ನಿನಗೆ ನಿನ್ನ ರಾಜ್ಯ, ನಿನ್ನ ಪ್ರಜೆಗಳು ಹೆಚ್ಚೋ ? ಆ ನಾಯಕಿಯ ಗುಣ ವರ್ಣನೆಯು ಹೆಚ್ಚೋ ?"

ಚಿಕ್ಕಪ್ಪಾಜಿಯು ಪುನಃ ಮೌನದಿಂದ ತಲೆಬಾಗಿದನು.

"ಈ ತ್ರಿಣೇಶ್ವರ ದೇವಾಲಯದ ನಿರ್ಮಾಣದಲ್ಲಿ ಮಹಾರಾಜನೇ ಖುದ್ದಾಗಿ ಮೇಲ್ವಿಚಾರಣೆ ನೋಡಿಕೊಳ್ಳುವ ಅವಶ್ಯಕತೆಯೇನು ?"

"ಪಂಡಿತನೇ ಅದರಲ್ಲೇನು ದೋಷವಿದೆಯೋ ನಾನರಿಯೆ ! ಜಂಗಮನು ನನ್ನಲ್ಲಿ ಪ್ರಾರ್ಥನೆ ಮಾಡಿದನು. ನಾನು ವಾಗ್ದಾನ ವನ್ನಿತ್ತೆ. ಇಲ್ಲಿ ಬಂದು ಈ ಪರಿಸ್ಥಿತಿಯನ್ನು ನೋಡಿದಾಗ ಈ ದೇವರಲ್ಲಿ ನನಗೆ ವಿಶೇಷ ಭಕ್ತಿಯು ಉತ್ಪನ್ನವಾಯಿತು. ನಾನೇ ಉತ್ಸಾಹದಿಂದ ನಿಂತು ಈ ಕಾರ್ಯಕ್ಕೆ ಕೈಹಚ್ಚಿದೆ."

"ಚಿಕ್ಕಪ್ಪಾಜಿ ಇದನ್ನು ಭಕ್ತಿಯೆಂದು ಕರೆಯಲಾದೀತೆ ? ಜಂಗಮನ ಪ್ರೇರಣೆ, ಗಾಯಕಿಯ ಸಾನ್ನಿಧ್ಯಗಳು ಈ ಭಕ್ತಿಯನ್ನು ನಿನಗೆ ಕಲಿಸಿಕೊಟ್ಟಿದೆ. ಈ ಮೈಸೂರಿಗೆ ನೀನೆಂದೂ ಬಂದಿಲ್ಲವೇ ? ಈ ದೇವರನ್ನು ಎಂದೂ ಕಂಡಿಲ್ಲವೇ ? ಭಕ್ತನಿಗಿಂತಲೂ, ಜ್ಞಾನಿ ಗಿಂತಲೂ ರಾಜನ ಧರ್ಮಕರ್ಮಗಳು ಹಿರಿದವುಗಳೆಂದು ನೀನರಿಯೆಯಾ? ಈ ದೇಶದಲ್ಲಿರುವ ಶಿವವೈಷ್ಣವ ವಿರೋಧವನ್ನು ನೀನು ಕಂಡರಿ ಯೆಯಾ ? ಇಂದು ವೈಷ್ಣವರು 'ರಾಜನು ಶಿವಭಕ್ತನಾಗಿದ್ದಾನೆ. ನಾವು ಈ ರಾಜ್ಯದಿಂದ ವಲಸೆಹೋಗುತ್ತೇವೆ' ಎಂದು ಮೊರೆಯಿಡುತ್ತಾರೆ. ನಾನು ಅವರನ್ನು ನಿಷೇಧಿಸಲೇ ? ಅಥವಾ ಬಿಟ್ಟುಬಿಡಲೇ ? ನಮ್ಮ

ರಾಜ್ಯದಲ್ಲಿ ಶೈವ–ವೈಷ್ಣವರ ಮಹಾಯುದ್ಧಕ್ಕೆ ಸಿದ್ಧತೆಯನ್ನು ಮಾಡಲೇ ?"

ಪುನಃ ಚಿಕ್ಕಪ್ಪಾಜಿಯು ಮೌನ! ನಿರುತ್ತರ. "ಪಂಡಿತನೇ! ಈಗ ನೀನು ನನ್ನನ್ನು ಏನು ಮಾಡಬೇಕೆಂದು ಹೇಳುವಿ! ನಾನು ಅದರಂತೆ ನಡೆಯಲು ಸಿದ್ಧನಾಗಿದ್ದೇನೆ. ಈ ಮಲ್ಲಿಗೆಯನ್ನು ಪರಿತ್ಯಾಗ ಮಾಡಬೇಕೆಂದು ಹೇಳುವೆಯಾ ? ಈ ತ್ರಿಣೇಶ್ವರನ ಗುಡಿಗೋಪುರಗಳ ಕೆಲಸವನ್ನು ನಿಲ್ಲಿಸಬೇಕೆನ್ನುವೆಯಾ ? ಹೇಳು! ನಿನ್ನ ಸಲಹೆಯನ್ನು ಚಾಚೂ ತಪ್ಪದೆ ನಡೆಸಲು ಸಿದ್ಧನಾಗಿರುವೆನು"

ಪಂಡಿತನು, "ಚಿಕ್ಕಪ್ಪಾಜಿ ನಿನ್ನ ಮನವು ದುಗುಡವಾಗಿದೆ. ಮಲ್ಲಿಗೆಯ ಪರಿಗ್ರಹಮಾಡುವಾಗ ನೀನು ನನ್ನ ಸಲಹೆಯನ್ನು ಕೇಳಿದ್ದರೆ ಚೆನ್ನಾಗಿತ್ತು. ಪರಿತ್ಯಾಗಕ್ಕೆ ನನ್ನ ಸಲಹೆಯುಬೇಕಿಲ್ಲ. ಕಾಲವು ಬಂದರೆ ತನ್ನಷ್ಟಕ್ಕೆ ತಾನೇ ಬಿಟ್ಟುಹೋಗುವುದು. ಆ ಕರ್ಮಬಂಧಗಳಿಗೆ ಮನಸ್ಸು ಕಾರಣ. ಆ ಮನಸ್ಸು ಶಾಂತಭಾವದಲ್ಲಿ ಏನು ಉಪದೇಶ ಮಾಡುವುದೋ ಹಾಗೆಮಾಡು. ತ್ರಿಣೇಶ್ವರನ ಗುಡಿಗೋಪುರಗಳ ಕೆಲಸವೇಕೆ ಅರ್ಧದಲ್ಲಿ ನಿಲ್ಲಿಸಬೇಕು. ಅದು ಭರದಿಂದ ಸಾಗಲಿ. ಜನರಿಗೆ ತ್ರಿಣೇಶ್ವರನಮೇಲೆ ಕೋಪಬಂದಿಲ್ಲ. ಮಲ್ಲಿಗೆಯಮೇಲೆ ಜನರು ವೈರಕಟ್ಟಿಲ್ಲ. ರಾಜನು ರಾಜಧಾನಿಗೆ ಬಂದು ರಾಜಕರ್ಮದಲ್ಲುದ್ಯುಕ್ತನಾಗಬೇಕು. ಅದೇ ನನ್ನ ಸಲಹೆ ನನ್ನೊಡನೆಯೇ ನೀನು ರಾಜಧಾನಿಗೆ ಹೊರಟುಬರಬೇಕು. ನಾಳೆ! ನಾಳೆಯ ಪ್ರಾತಃಕಾಲ ಮಹಾರಾಜನು ರಾಜಧಾನಿಗೆ ಬಿಜಯಮಾಡಬೇಕು." ರಾಜನು "ತಥಾಸ್ತು ಹಾಗೆಯೇ ಮಾಡುವೆನು" ಎಂದನು.

"ಚಿಕ್ಕಪ್ಪಾಜಿ ನೀನು ಮಾಡುವ ಕೆಲಸವನ್ನು ಮನಸಾರ ಮಾಡಬೇಕು. ನನ್ನ ಬಲತ್ಕಾರಕ್ಕಾಗಿ ಮಾಡಕೂಡದು. ನಾನು ಇಲ್ಲಿಗೆ ನಿನ್ನನ್ನು ಬಲಾತ್ಕರಿಸಲು ಬಂದಿಲ್ಲ. ನನ್ನ ಅಧಿಕಾರವನ್ನು ಪರಿತ್ಯಾಗ ಮಾಡಿ ದೇಶಾಂತರ ಹೋಗಬೇಕೆಂದು ಬಂದಿದ್ದೇನೆ."

"ಪಂಡಿತನೇ ನಿನ್ನ ಮಾತುಗಳು ನನಗೆ ವೇದವಾಕ್ಯದಂತೆ ಆದರಣೀಯವಾಗಿದೆ. ನಾನು ರಾಜಧಾನಿಗೆ ಸಂತೋಷದಿಂದ ಬರುತ್ತೇನೆ" ಎಂದು ಹೇಳಿದನು.

ಪಂಡಿತನು ಅರಮನೆಯಿಂದ ಹೊರಟು ಪುರಜನರಿಗೆಲ್ಲಾ ಭೇಟಿಯನ್ನಿತ್ತು ಪುರಪ್ರದಕ್ಷಿಣೆ ಮಾಡಿಕೊಂಡು ಬಿಡಾರಕ್ಕೆ ಹಿಂತಿರುಗಿದನು.

ಆ ದಿನ ಸಂಧ್ಯಾಕಾಲದಲ್ಲಿ ಮಲ್ಲಿಗೆಯ ಅಂತಃಪುರಕ್ಕೆ ರಾಜನು ಹೋಗಿ ಮಲ್ಲಿಗೆಗೆ ಭೇಟಿಯಿತ್ತನು. ಈಗ ಮಲ್ಲಿಗೆಯು ಸಾಮಾನ್ಯ ಗಾಯಕಿಯಂತಿಲ್ಲ. ನರ್ತಕಿಯಂತಿಲ್ಲ. ನಿಜವಾಗಿಯೂ ಮೈಸೂರಿನ ಅರಮನೆಯಲ್ಲಿ ರಾಣಿಯಂತಿದ್ದಾಳೆ. ಅವಳು ನಾಚಿಗೆಯಿಂದ ಅವಿತುಕೊಂಡಿಲ್ಲ. ಅರಮನೆಯಲ್ಲೆಲ್ಲಾ ರಾಜಸ್ತ್ರೀಯಂತೆ ಓಡಿಯಾಡುತ್ತಾಳೆ. ದಾನಧರ್ಮಗಳನ್ನು ಮಾಡುತ್ತಾಳೆ. ಬಡಬಗ್ಗರನ್ನೂ ಆದರಿಸುತ್ತಾಳೆ. ಆ ರಾಜನಿಗೆ ಸಮಜೋಡಿಯಾದ ಹೆಣ್ಣಾಗಿದ್ದಾಳೆ. ರಾಜನು ಹೋಗಿ ಮಲ್ಲಿಗೆಯನ್ನು ನೋಡಿದನು. "ಮಲ್ಲಿಗೆ! ಮಂತ್ರಿ ಆರಾಧ್ಯನು ನಮ್ಮರಮನೆಗೆ ಬಂದಿದ್ದಾನೆ. ನಿನಗೆ ಸಮಾಚಾರವು ತಿಳಿಯಿತೇನು?" ಎಂದು ಕೇಳಿದನು.

ಮಲ್ಲಿಗೆಯು ನಗುತ್ತಾ, "ಮಹಾಪ್ರಭುವೇ! ಸಮಾಚಾರವು ನನಗೆ ತಿಳಿಯದೇಯೇನು? ನಾನೇ ಪಂಡಿತನ ಆತಿಥ್ಯಕ್ಕೆ ಎಲ್ಲವನ್ನೂ ಅಣಿ ಮಾಡಿಸಿದ್ದೇನೆ. ಆರಾಧ್ಯನು ನನ್ನಮೇಲೆ ಆಗ್ರಹಗೊಂಡಿದ್ದಾನೆಂದು ನಾನು ಬಲ್ಲೆ. ಅವನನ್ನು ಪ್ರತ್ಯಕ್ಷವಾಗಿ ನೋಡಿ ಸಂತೈಸಬೇಕೆಂದು ನನ್ನ ಮನವು ಚಡಪಡಿಸುತ್ತಿದೆ. ನಾನು ಈಗ ನಿಮ್ಮ ಅಧೀನಳು. ನಿಮ್ಮ ಆಜ್ಞೆಯಿಲ್ಲದೆ ಪಂಡಿತನನ್ನು ನೋಡುವ ಧೈರ್ಯವು ನನಗೆ ಬರಲಿಲ್ಲ. ಆ ಸಾಹಸವೂ ನನಗಿಲ್ಲ."

"ಪ್ರಿಯೆ! ಮಲ್ಲಿಗೆ, ಪಂಡಿತನು ನಿನ್ನ ಮೇಲೆ ಆಗ್ರಹಗೊಂಡಿದ್ದಾನೆಂದು ನಿನಗಾರು ಹೇಳಿದರು?"

"ನನಗೆ ನನ್ನಸಖಿ ಚಾಮುಂಡಿಯು ಹೇಳಿದಳು."

"ಸರಿಯಾಗಿ ತಿಳಿದಿದ್ದೀಯೆ. ಪಂಡಿತನಿಗೆ ನಿನ್ನಮೇಲೆ ರವೆಯಷ್ಟೂ ಆಗ್ರಹವಿಲ್ಲ. ಅವನು ನನ್ನ ಮೇಲೆ ಆಗ್ರಹಗೊಂಡಿದ್ದಾನೆ" ಎಂದು ಹೇಳಿದನು. ಮಲ್ಲಿಗೆಯ ಮುಖವು ಬಿಳಿಚಿಕೊಂಡಿತು. "ಮಹಾಪ್ರಭೂ! ಅದು ಪ್ರಮಾದವೇ ಸರಿ! ಮಹಾಪ್ರಭುಗಳ ಶೀಲಸ್ವಭಾವಗಳನ್ನು ಬಾಲ್ಯದಿಂದಲೂ ಅರಿತಿರುವ ಪಂಡಿತನು ಮಹಾಸ್ವಾಮಿಗಳಮೇಲೆ ಆಗ್ರಹಗೊಂಡಿದ್ದಾನೆಂದರೆ, ಅದು ಪ್ರಮಾದದ ವಿಷಯವೇ ಸರಿ."

" ಮಲ್ಲಿಗೆ! ನನ್ನ ಶೀಲ ಸ್ವಭಾವಗಳಿಗಾಗಿ ಪಂಡಿತನು ಆಗ್ರಹ ಗೊಂಡಿಲ್ಲ. ಜನದ ಕೋಪತಾಪವೈಷಮ್ಯಗಳಿಗಾಗಿ ಪಂಡಿತನು ವ್ಯಗ್ರನಾಗಿದ್ದಾನೆ"

" ಮಹಾಪ್ರಭೂ! ಪ್ರಜೆಗಳಿಗೇಕೆ ಕೋಪ. ಯಾರಮೇಲೆ ಕೋಪ? ಈ ರಾಜ್ಯದಲ್ಲಿ ಅಂತಹ ಅಪರಾಧವೇನು ನಡೆದಿದೆ?"

" ಮಲ್ಲಿಗೆ! ಅದೆಲ್ಲವೂ ನಿನಗೆ ತಿಳಿಯುವುದಿಲ್ಲ. ನಮ್ಮ ರಾಜ್ಯ ದಲ್ಲಿ ಶೈವ ವೈಷ್ಣವ ವಿರೋಧವು ಮೊದಲಿನಿಂದಲೂ ಬೆಳೆದುಬಂದಿದೆ. ರಾಜರು ಎರಡು ಮತಗಳ ಸಂಪ್ರದಾಯವನ್ನು ಅನುಸರಿಸುತ್ತಾ ಸರ್ವ ಸಮ ಭಾವದಿಂದ ರಾಜ್ಯಪರಿಪಾಲನೆ ಮಾಡುತ್ತ ಬಂದಿದ್ದಾರೆ. ಈಗ ವೈಷ್ಣವರು ಕುಪಿತರಾಗಿ ದೇಶತ್ಯಾಗ ಮಾಡಿ ವಲಸೆ ಹೋಗುವ ಸ್ಥಿರ ಸಂಕಲ್ಪವನ್ನು ಮಾಡಿದ್ದಾರಂತೆ!"

" ಮಹಾರಾಜನೇ! ವೈಷ್ಣವರಿಗೆ ಈ ರಾಜ್ಯದಲ್ಲಿ ಏನು ಅಪ ಚಾರ ನಡೆಯಿತು? ನಿಜವಾಗಿಯೂ ಅಂತಹ ಅಪರಾಧವು ನಡೆದಿದ್ದರೆ ಧರ್ಮದ್ರೋಹಿಗಳಿಗೆ ಶಿಕ್ಷೆಯಾಗಬೇಕಲ್ಲವೇ?"

ಚಿಕ್ಕಪ್ಪಾಜಿಯು ಮೃದುವಾದ ನಗುವನ್ನು ನಕ್ಕನು. " ಮಲ್ಲಿಗೆ! ಈ ತ್ರಿಣೇಶ್ವರ ದೇವಾಲಯದ ಜೀರ್ಣೋದ್ಧಾರ ಕಾರ್ಯದಲ್ಲಿ ನಾನೇ ಸ್ವತಃ ಆಸಕ್ತನಾಗಿರುವುದು ಅವರಿಗೆ ಭ್ರಾಂತಿಯನ್ನುಂಟು ಮಾಡಿದೆ. ಈ ನಿನ್ನ ಗುರುವಾದ ನೀಲಕಂಠಾಚಾರ್ಯನಿಗೆ ನಾನು ಶಿಷ್ಯನಾಗಿದ್ದೇ

ನೆಂದೂ ಅದರಿಂದಲೇ ಈ ಶಿವಾಲಯದ ಕಾರ್ಯದಲ್ಲಿ ನಾನು ತೊಡಗಿದ್ದೇ ನೆಂದೂ ಅವರು ನನ್ನ ಮೇಲೆ ಅಪವಾದವನ್ನು ಹೊರಸಿದ್ದಾರೆ. ಅದೇ ಇಷ್ಟು ಅನರ್ಥಕ್ಕೆ ಕಾರಣ."

"ಪಂಡಿತನು ಈಗ ಅದಕ್ಕೇನುಪಾಯ ಮಾಡಬೇಕೆನ್ನುತ್ತಾನೆ?"

"ಏನೂ ಇಲ್ಲ. ನಾನೇ ರಾಜಧಾನಿಗೆ ಬಂದು ಆ ವೈಷ್ಣವ ಆಚಾರ್ಯರುಗಳನ್ನು ಸಮಾಧಾನಗೊಳಿಸಬೇಕೆಂದು ಹೇಳುತ್ತಾನೆ."

"ಅದು ಯುಕ್ತವಾಗಿಯೇ ಇದೆ. ನ್ಯಾಯವಾಗಿದೆ. ಮಹಾ ರಾಜರು ಯಾವಾಗ ರಾಜಧಾನಿಗೆ ಬಿಜಯ ಮಾಡೋದಾಗುತ್ತದೆ?"

"ನಾಳೆ! ನಾಳೆಯ ಪ್ರಾತಃಕಾಲ!"

"ನಾನು ಆ ಪಂಡಿತಾರಾಧ್ಯನನ್ನು ನೋಡಿ ಬಹುದಿನಗಳಾಗಿವೆ. ಒಂದುಬಾರಿ ಆತನನ್ನು ನೋಡಿ ಮಾತನಾಡಿಸಬೇಕೆಂದು ಇಚ್ಛೆಯುಂಟಾ ಗಿದೆ. ನಾನು ಆತನನ್ನು ನೋಡಬಹುದೇ?"

"ಅಗತ್ಯವಾಗಿ ನೋಡಬಹುದು. ಪಂಡಿತನು ನಿನ್ನನ್ನು ವಿಶ್ವಾಸ ದಿಂದ ಕಾಣುತ್ತಾನೆ. ನಿನ್ನ ಸಖಿ ಚಾಮುಂಡಿಯು ಹೇಳಿದ ವೃತ್ತಾಂತ ವನ್ನು ಅವನಿಗೆ ತಿಳಿಸು. ಕೇಳಿ ಸಂತೋಷಪಡುತ್ತಾನೆ" ಎಂದು ಹೇಳಿದನು.

ಮಲ್ಲಿಗೆಯು ರಾಜನ ಸಮ್ಮುಖದಿಂದ ತನ್ನ ಅಲಂಕಾರ ಗೃಹ ದೊಳಗೆ ಹೊರಟುಹೋದಳು

ಅಲ್ಲಿ ತಲೆಯನ್ನು ಬಾಚಿ ಹೆರಳು ಕಟ್ಟಿದಳು. ಮಲ್ಲಿಗೆಯ ಮೊಗ್ಗುಗಳನ್ನು ಕಟ್ಟಿ ಆ ಹೆರಳನ್ನು ಅಲಂಕರಿಸಿದಳು. ಬಿಳಿಯ ಸೀರೆಯನ್ನುಟ್ಟು ಕೇಸರಿಯ ಬಣ್ಣದ ರವಿಕೆಯನ್ನು ತೊಟ್ಟಳು. ಕೊರಳಲ್ಲಿ ಮೂರೆಳೆಯ ಮುಕ್ತಾಹಾರವನ್ನು ಧರಿಸಿದಳು ಕಿವಿಗಳಿಗೆ ನೀಲಮಣಿ ಯನ್ನು ಧರಿಸಿದಳು. ಎರಡು ಕೈಗಳಲ್ಲಿಯೂ ಮುತ್ತಿನ ಬಳೆಗಳನ್ನಿಟ್ಟು ಅಲಂಕರಿಸಿಕೊಂಡಳು. ಒಂದು ಬಾರಿ ಕನ್ನಡಿಯ ಮುಂದೆನಿಂತು ತನ್ನ ರೂಪವನ್ನು ತಾನೇ ನೋಡಿಕೊಂಡಳು. ಹಿಂದೆ ಪಂಡಿತನನ್ನು

ಭೇಟಿ ಮಾಡಿದ್ದ ದಿನ ಅವಳ ಮುಖವು ಹೇಗಿದ್ದಿತೋ ಆ ನೆನಪನ್ನು ಮನಸ್ಸಿನಲ್ಲಿ ತಂದುಕೊಂಡು ಇಂದಿನ ರೂಪಕ್ಕೆ ಮನಸ್ಸಿನಲ್ಲಿಯೇ ಏನನ್ನೋ ಸೆಸೆದು ಸಣ್ಣ ನಗುವನ್ನು ನಕ್ಕಳು. ಅಂದಿನರೂಪವೇ ಚೆನ್ನಾಗಿತ್ತು ಎಂದು ಅವಳ ಮನಸ್ಸಿಗೆ ತೋರಿತು. ಆರಾಧ್ಯನ ನೆನಪು ಬಂದಿತು. ಅಂದಿಗೂ ಇಂದಿಗೂ ನನ್ನ ಅವಸ್ಥೆಯಲ್ಲಿ ಬಹಳ ಪ್ರಭೇದ ಉಂಟಾಗಿದೆ. 'ಅಂದು ನಾನು ಗಾಯಕಿ! ಇಂದು ಮಹಾರಾಜನ ಬಂಗಾರದ ಪತ್ನಿ! ಆದರೆ ಪಂಡಿತನಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಅಂದು ಆ ಗಾಯಕಿಯನ್ನು ಅಷ್ಟು ಮನ್ನಣೆ ಮಾಡಿದ ಪಂಡಿತನು ಇಂದು ನನ್ನನ್ನು ಎಷ್ಟೋ ಪುರಸ್ಕರಿಸುವನು' ಎಂದು ಭಾವಿಸಿದಳು ಚಿನ್ನದ ತಟ್ಟೆಯಲ್ಲಿ ಫಲಪುಷ್ಪಗಳನ್ನು ತೆಗೆದುಕೊಂಡು ಅರಮನೆಯ ಎಡಪಾರ್ಶ್ವದಲ್ಲಿ ಆರಾಧ್ಯನಿಗಾಗಿ ಏರ್ಪಡಿಸಿದ್ದ ಬಿಡಾರಕ್ಕೆ ಹೋದಳು.

ಹಜಾರದಲ್ಲಿ ದೀಪಗಳು ಬೆಳಗುತ್ತಿದ್ದವು. ಮೇಲೆ ಕಂದೀಲು ದೀಪಗಳು ಬಣ್ಣ ಬಣ್ಣದ ಪ್ರಕಾಶವನ್ನು ಬೀರುತ್ತಿದ್ದವು. ಹಜಾರದಲ್ಲಿ ಮೃದುವಾದ ರತ್ನಗಂಬಳಿಯು ಹಾಸಲ್ಪಟ್ಟಿದ್ದಿತು. ಕುತ್ತನೆಯ ಲೋಡು ದಿಂಬುಗಳಿಂದ ಅಲಂಕೃತವಾಗಿದ್ದಿತು. ಎದುರುಗಡೆ ಬೆಳ್ಳಿಯ ಕಾಲು ಮಣೆಯ ಮೇಲೆ ಚಿನ್ನದ ಗಿಡವು ಇಡಲ್ಪಟ್ಟಿದ್ದಿತು. ಆ ಗಿಡದಲ್ಲಿ ಸುವಾಸನೆಯ ಊದು ಬತ್ತಿಗಳು ಗಮ ಗಮಿಸುತ್ತಿದ್ದವು ಪಂಡಿತನು ಲೋಡು ದಿಂಬುಗಳಮೇಲೆ ಅರ್ಧಶಾಯಿತಾವಸ್ಥೆಯಲ್ಲಿ ಕುಳಿತಿದ್ದನು. ದ್ವಾರಪಾಲಕನು ಮೈಸೂರಿನ ರಾಣಿಯವರು ದರ್ಶನಾರ್ಥವಾಗಿ ಬಂದಿದ್ದಾರೆಂದು ತಿಳಿಸಿದನು. ಪಂಡಿತನು ಎದ್ದು ಬಾಗಿಲಬಳಿಗೆ ಬಂದು ಮಲ್ಲಿಗೆಯನ್ನು ಹಜಾರದೊಳಗೆ ಕರೆದೊಯ್ದನು. ಮಲ್ಲಿಗೆಯು ಆ ಫಲಪುಷ್ಪಗಳ ಹರಿವಾಣವನ್ನು ಪಂಡಿತನ ಮುಂದಿಟ್ಟು ಕೈಮುಗಿದು "ಮಹಾನುಭಾವನೇ! ಬಹುದಿವಸಗಳ ಮೇಲೆ ದರ್ಶನವಾಯಿತು. ನನ್ನ ನೆನಪಿದೆಯೇ?" ಎಂದು ಕೇಳಿದಳು.

ಪಂಡಿತನು ಆ ಮಧುರ ಧ್ವನಿಯನ್ನು ಕೇಳಿದನು. ಆ ಮೋಹಕ ವಾದ ರೂಪವನ್ನು ನೋಡಿದನು ! ಆ ನಿಷ್ಕಳಂಕವಾದ ಮುಖ ಮಂಡಲ ವನ್ನು ದಿಟ್ಟಿಸಿ ನೋಡಿದನು ! ಆ ವಿಶಾಲವಾದ ನೇತ್ರಯುಗ್ಮವನ್ನು ಮತ್ತೊಮ್ಮೆ ನೋಡಿದನು ! ಆ ಕೆಂದುಟಿಗಳು ! ಆ ಎಳ್ಳಿನಾದ ಮೂಗು! ಆ ನೀಲಮಣಿಯಿಂದ ಅಲಂಕೃತವಾದ ಕಿವಿಗಳು ! ಮುಕ್ತಾಹಾರದಿಂದ ಅಲಂಕೃತವಾದ ಆ ಕಂಠಪ್ರದೇಶ ! ಆ ಉಬ್ಬಿದ ಎದೆ ! ಆ ನೀಳವಾದ ಶರೀರ ! ಆ ಎಳನಾದ ಹಸ್ತಗಳು ! ಆ ಬಿಳಿಯ ದುಕೂಲದಿಂದ ಹೊರ ಹೊಮ್ಮುತ್ತಿರುವ ಆ ಶರೀರಕಾಂತಿ ! ಎಲ್ಲವನ್ನೂ ದಿಟ್ಟಿಸಿ ನೋಡಿದನು. ಮಲ್ಲಿಗೆ ಪ್ರಸಿದ್ಧಳಾದ ಗಾಯಕಿ !' ಎಂದು ಮನಸ್ಸಿನಲ್ಲಿಯೇ ಅಂದು ಕೊಂಡನು. ಮೃದುವಾಣಿಯಿಂದ "ಮಲ್ಲಿಗೆ ! ಜ್ಞಾಪಕವಿಲ್ಲದೇ ಏನು ? ಬಾ ಕುಳಿತುಕೋ. ನೀನು ಇಲ್ಲಿ ದರ್ಶನವಿತ್ತುದು ನನಗೆಷ್ಟೋ ಸಂತೋಷ !" ಎಂದು ಹೇಳಿದನು.

ಮಲ್ಲಿಗೆಯು ಆ ರತ್ನಗಂಬಳಿಯ ಮೇಲೆಯೇ ಕುಳಿತುಕೊಂಡಳು. ಪಂಡಿತನು ಲೋಡಿನ ಮೇಲೆ ಕುಳಿತುಕೊಳ್ಳಬೇಕೆಂದು ಒಂದೆರಡು ಬಾರಿ ಸೂಚಿಸಿದರೂ, ಮಲ್ಲಿಗೆಯು ತಲೆದೂಗಿ, "ಸರಿಯಾಗಿ ಕುಳಿತಿದ್ದೇನೆ" ಎಂದು ಹೇಳಿದಳು.

ಪಂಡಿತನು ಲೋಡಿನ ಮೇಲೆ ಗಂಭೀರವಾಗಿ ಕುಳಿತುಕೊಂಡು ಮಲ್ಲಿಗೆಯ ಮುಖವನ್ನು ನೋಡುತ್ತಾ, "ಮಲ್ಲಿಗೆ ಈಗ ನೀನು ನನಗೆ ದರ್ಶನವಿತ್ತುದರ ಕಾರಣವೇನು ? ನೀನು ಅಂತಃಪುರಸ್ತ್ರೀಯೆಂದು ಕೇಳಿದ್ದೇನೆ."

"ಹೌದು ! ಪಂಡಿತನೇ ನನ್ನ-ನಿನ್ನ ಬಾಂಧವ್ಯದಲ್ಲಿ ಏನೂ ವ್ಯತ್ಯಾಸವಾಗಿಲ್ಲ ನಿನಗೆ ನನ್ನ ಮೇಲೆ ಆಗ್ರಹಉಂಟಾಗಿದೆಯೆಂದು ನಾನು ಕೇಳಿದೆ. ನಿನ್ನಲ್ಲಿ ಕ್ಷಮಾಪ್ರಾರ್ಥನೆ ಮಾಡಲು ಬಂದಿದ್ದೇನೆ" ಎಂದಳು.

ಪಂಡಿತನು ಆಶ್ಚರ್ಯಭಾವದಿಂದ ನೋಡಿ "ಮಲ್ಲಿಗೇ ನಿನ್ನಮೇಲೆ

ಆಗ್ರಹಕ್ಕೆ ಕಾರಣವೇನಿದೆ? ಚಿಕ್ಕಪ್ಪಾಜಿಯು ತಾನಾಗಿ ಬಯಸಿ ನಿನ್ನನ್ನು ಪಡೆದಿದ್ದಾನೆ. ನಿನ್ನ ವಿದ್ಯೆ, ಕಲೆ, ರೂಪ, ಯೌವನಗಳಿಗೆ ತಕ್ಕ ಸ್ಥಾನವನ್ನು ನೀನು ಪಡೆದಿದ್ದೀ. ನನಗೆ ಇದರಿಂದ ಆಗ್ರಹವೂ ಇಲ್ಲ. ಆಶ್ಚರ್ಯವೂ ಇಲ್ಲ. ನಾನು ಮೊದಲು ಇದನ್ನರಿತಿದ್ದೆ. ಚಿಕ್ಕಪ್ಪಾಜಿಯೇ ಗರಳಪುರಿಗೆ ಹೋಗಿ ನಿನ್ನನ್ನು ಪ್ರಾರ್ಥನೆಮಾಡಿ ಕರೆತಂದು ಅರಮನೆಯಲ್ಲಿ ಇಟ್ಟುಕೊಳ್ಳಬೇಕೆಂದು ಹಂಬಲಿಸುತ್ತಿದ್ದ. ದೈವವಶಾತ್ ನೀನಾಗಿ ಬಂದು ಸೇರಿದೆ. ಇದನ್ನೆಲ್ಲಾ ನಾನು ಮೊದಲೇ ಊಹಿಸಿದ್ದೆ " ಎಂದನು

ಮಲ್ಲಿಗೆಯು "ಪಂಡಿತನೇ! ಬಹಳ ಸಂತೋಷವಾಯಿತು. ಆದರೆ ನನ್ನಿಂದ ಅರಿಯದೇ ಒಂದು ಅಪರಾಧವಾಗಿದೆ ಅವನ್ನು ನೀನು ಕ್ಷಮಿಸಬೇಕು " ಎಂದು ಹೇಳಿದಳು.

ಪುನಃ ಪಂಡಿತನನ್ನುದ್ದೇಶಿಸಿ, "ಅಮಾತ್ಯವರ್ಯಾ! ರಾಜಧಾನಿಯಲ್ಲಿ ವೈಷ್ಣವರು ರಾಜರಮೇಲೆ ಕೋಪಗೊಂಡಿದ್ದಾರಂತೆ. ಅದಕ್ಕೆ ಈ ತ್ರಿಣೇಶ್ವರನ ಗುಡಿಗೋಪುರಗಳ ನಿರ್ಮಾಣವೇ ಕಾರಣವಂತೆ!" ಎಂದಳು.

ಪಂಡಿತನು ನಗುತ್ತಾ "ಅಹುದು ಮಲ್ಲಿಗೆ, ಅದುನಿಜ. ವೈಷ್ಣವರು ಕೋಪಗೊಂಡಿದ್ದಾರೆ " ಎಂದನು.

"ತ್ರಿಣೇಶ್ವರನ ದೇವಾಲಯ ನಿರ್ಮಾಣ ಕಾರ್ಯವು ಪಾಪ ಕಾರ್ಯವೇ ?"

"ಅಲ್ಲ! ತ್ರಿಣೇಶ್ವರನ ಗುಡಿಯ ಕೆಲಸವು ತನ್ನಷ್ಟಕ್ಕೆ ತಾನು ನಡೆಯುತ್ತಿದ್ದರೆ ಅದರಲ್ಲಿ ಪ್ರಮಾದವೇನೂ ಇರುತ್ತಿರಲಿಲ್ಲ. ಮಹಾರಾಜನು ಆ ಸೇವೆಯನ್ನು ತಲೆಯಮೇಲೆ ಹೊತ್ತು ನಡೆಸುತ್ತಿರುವುದರಿಂದ ಮತಪಕ್ಷಪಾತವು ಎದ್ದುಕಾಣುತ್ತದೆ. ಅದರಿಂದ ವೈಷ್ಣವಾಚಾರ್ಯರು ಅಪಮಾನಿತರಾಗಿದ್ದೇವೆಂದು ಭಾವಿಸುವುದು ಲೋಕಸಂಪ್ರದಾಯಕ್ಕೆ ತಕ್ಕ ಹಾಗೆಯೇ ಇದೆ. ಇಲ್ಲಿ ನೀಲಕಂಠ ಶಿವಾಚಾರ್ಯ

ನಿಗೂ ಚಿಕ್ಕಪ್ಪಾಜಿಗೂ ಏನು ಸಂಬಂಧವಿದೆಯೋ ನಾನರಿಯೆ. ರಾಜನು ಶಿವಾಚಾರ್ಯನ ಶಿಷ್ಯನಾಗಿದ್ದಾನೆಂದೂ ಲಿಂಗವಂತನಾಗಿದ್ದಾನೆಂದೂ ವೈಷ್ಣವರು ಅಪವಾದವನ್ನು ಹೊರಿಸಿದ್ದಾರೆ. ವೈಷ್ಣವರಿಗೆ ಅದು ವಿಶೇಷ ಉದ್ರೇಕವನ್ನುಂಟುಮಾಡಿದೆ ಶಿವಭಕ್ತರ ರಾಜ್ಯದಲ್ಲಿ ವೈಷ್ಣವರು ಇರುವುದಿಲ್ಲವೆಂಬುದು ಅವರಿಗೆ ಸಹಜವಾಗಿಯೇ ಇದೆ"

"ಪಂಡಿತನೇ ನೀನರಿಯೆ! ಜಂಗಮದೇವನು ಎಲ್ಲ ಮಾನವರಂತೆ ಮಾನವನಲ್ಲ. ಎಲ್ಲ ಗುರುಗಳಂತೆ ಗುರುವಲ್ಲ. ಅವನು ಯೋಗಸಿದ್ಧನಾಗಿದ್ದಾನೆ. ಪರಮೇಶ್ವರನಂತೆ ಪ್ರಭಾವಶಾಲಿಯಾಗಿದ್ದಾನೆ. ಸೂರ್ಯದೇವನಂತೆ ತೇಜಸ್ವಿಯಾಗಿದ್ದಾನೆ. ಅವನು ಯಾರನ್ನೂ ಶಿವಭಕ್ತರನ್ನಾಗಿ ಮಾಡಿಲ್ಲ. ಆದರೆ ಅವನ ದರ್ಶನಮಾಡಿದವರೆಲ್ಲಾ ಆ ಯೋಗೀಶ್ವರನ ಭಕ್ತರಾಗುತ್ತಾರೆ."

ಪಂಡಿತನು "ಸರಿ! ಸರಿ ಒಳ್ಳೆಯ ಚತುರಳಾದ ಶಿಷ್ಯಳನ್ನೇ ಸಂಪಾದಿಸಿದ್ದಾನೆ. ದೇವಾಲಯದಲ್ಲಿರುವ ತ್ರಿಣೇಶ್ವರನು ಹೆಚ್ಚೋ ನಿನ್ನ ಗುರುವಾದ ಜಂಗಮದೇವನು ಹೆಚ್ಚೋ?"

"ಪಂಡಿತನೇ ವಿದ್ವಾಂಸನಾದ ನೀನು ಹೀಗೆ ಪರಿಹಾಸ್ಯ ಮಾಡಬಾರದು. ನೀನು ನನ್ನೊಡನೆ ಬಾ! ನಾನು ಆ ಯೋಗಸಿದ್ಧನ ದರ್ಶನವನ್ನು ಮಾಡಿಸುತ್ತೇನೆ. ನೀನೇ ಪರೀಕ್ಷೆಮಾಡಿ ನೋಡು!"

"ಮಲ್ಲಿಗೇ, ನಾನೇಕೆ ಬರಬೇಕು. ನಾನು ಯೋಗಾಭ್ಯಾಸವನ್ನು ಕಲಿಯಬೇಕೆಂದು ಆಸಕ್ತನಾಗಿಲ್ಲ ನನಗೆ ಎಲ್ಲ ಮಾನವರೂ ಸಮಾನರು. ನಾನು ಈ ಲೋಕವ್ಯಾಪಾರವನ್ನು ಸಂಪೂರ್ಣವಾಗಿ ತ್ಯಜಿಸಿದ ಮೇಲೆ ಯೋಗ! ಜ್ಞಾನ! ವಿಭೂತಿಗಳ ವಿಷಯವನ್ನು ಆಲೋಚಿಸುತ್ತೇನೆ. ಆ ಜಂಗಮನು ಅಂತಹ ಸಿದ್ಧಪುರುಷನಾಗಿದ್ದರೆ ಈ ತ್ರಿಣೇಶ್ವರನ ಗುಡಿಯ ಹಂಬಲವು ಅವನಿಗೇಕೆ? ಆ ಕಾರ್ಯಸಾಧನೆಗಾಗಿ ನಿನ್ನ ಸಹಾಯವೇಕೆ? ರಾಜನ ಆಶ್ರಯವೇಕೆ?"

"ಇದೇನು ಪಂಡಿತನೇ! ಹೀಗೆ ಮಾತನಾಡುವೆ? ನೀನು ಈ

ಇಡೀ ಭಾರತವರ್ಷವನ್ನು ಸಂಚಾರಮಾಡಿರುವಿಯಲ್ಲವೇ ? ರಾಮ ಸೇತುವಿನಿಂದ ಗೌರೀಶಂಕರದವರೆಗೆ ಇರುವ ಪುಣ್ಯಕ್ಷೇತ್ರಗಳು, ತೀರ್ಥ ಗಳು, ಗುಡಿಗೋಪುರಗಳು ಇವೆಲ್ಲವೂ ಮಹಾತಪಸ್ವಿಗಳಾದ ಸಿದ್ಧಪುರುಷ ರಿಂದಲೇ ನಿರ್ಮಿತವಾದವುಗಳಲ್ಲವೇ ? ಕೃತಯುಗದಿಂದ ಇಂದಿನವರೆಗೆ ಎಲ್ಲ ಧರ್ಮರಾಜ್ಯಗಳೂ ಮಹಾತಪಸ್ವಿಗಳ ತಪಸ್ಸಿನಿಂದಲೇ ಪ್ರತಿಷ್ಠಾ ಪಿತವಾದವುಗಳಲ್ಲವೇ ? ಈ ಕರ್ಣಾಟಕ ಸಿಂಹಾಸನವು ವಿದ್ಯಾರಣ್ಯ ಮಹಾಮುನಿಗಳಿಂದಲೇ ಸ್ಥಾಪಿತವಾದುದಲ್ಲವೇ ?"

"ಮಲ್ಲಿಗೆ ನಿಲ್ಲಿಸು! ರಾಗದಮೇಲೆ ರಾಗ, ಪಲ್ಲವಿಯಮೇಲೆ ಪಲ್ಲವಿ ಯನ್ನು ಹಾಡುವಂತೆ ಪುರಾಣ ಪುಣ್ಯಕಥೆಗಳ ಉಪದೇಶವನ್ನು ನನಗೆ ಮಾಡಬೇಡ ಹಳೆಯ ಕಥೆಗಳೇ ಬೇರೆ ಹೊಸಕಾಲವೇ ಬೇರೆ. ನಾನು ಪುರಾಣದ ಗೊಡ್ಡು ವೈದಿಕನೆಂದು ತಿಳಿಯಬೇಡ. ಮತ ವೈಷಮ್ಯಗಳಿರುವ ಕಾಲದಲ್ಲಿ ರಾಜನು ದೂರವಾಗಿರಬೇಕಾದುದು ರಾಜಧರ್ಮ."

"ಪಂಡಿತನೇ ನೀನು ನಾಸ್ತಿಕನಂತೆ ಇದ್ದೀಯೆ. ರಾಜನು ನಿನ್ನವನು; ರಾಜ್ಯವು ನಿನ್ನದು. ನೀನು ಏನು ಬೇಕಾದರೂ ಮಾಡು. ಆದರೆ ಧರ್ಮವನ್ನು ಅಲ್ಲಗಳೆಯಬೇಡ !"

"ಇಲ್ಲ ಮಲ್ಲಿಗೆ ! ಧರ್ಮವು ಧರ್ಮವೇ ! ಅದು ಶಾಶ್ವತವಾಗಿದೆ. ಆದರಿಂದಲೇ ಸೂರ್ಯಚಂದ್ರರು ಹುಟ್ಟಿ ಮುಳುಗುತ್ತಾರೆ. ಭೂಮಾತೆಯು ಸಸ್ಯಶಾಲಿನಿಯಾಗಿದ್ದಾಳೆ. ಅಮೃತವು ಅಮೃತವಾ ಗಿದೆ. ವಿಷವು ವಿಷವಾಗಿದೆ. ನಿನ್ನ ಜಂಗಮದೇವನು ಇಂದು ಧರ್ಮ ವನ್ನು ಸೃಷ್ಟಿಸಲಿಲ್ಲ. ನಿನ್ನ ತ್ರಿಣೇಶ್ವರದೇವಾಲಯದಿಂದ ಇಂದು ಮಾನವ ಜಗತ್ತು ಉದ್ಧಾರವಾಗುವುದಿಲ್ಲ. ನಾನು ನಾಸ್ತಿಕನಾದರೆ ನನ್ನ ನಾಸ್ತಿಕತೆಯಿಂದ ಯಾರಿಗೂ ಹಾನಿಯಿಲ್ಲ. ನೀನು ತಿಳಿದಿರುವ ಮೂಢಭಾವನೆಯ ಆಸ್ತಿಕತೆಯಿಂದ ನಮ್ಮ ರಾಜ್ಯದಲ್ಲಿ ಆಂದೋಳನ ವೆದ್ದಿದೆ."

ಮಲ್ಲಿಗೆಯು ನಡುಗಿದಳು. "ಪಂಡಿತನೇ! ಬಾಯಿ ಜಾರಿ ನಿನ್ನನ್ನು ನಾಸ್ತಿಕನೆಂದೆ! ಕ್ಷಮಿಸು" ಎಂದು ಕೈಮುಗಿದಳು.

ಪಂಡಿತನು ನಗುತ್ತಾ, "ಮಲ್ಲಿಗೆ ನೀನು ನಾಸ್ತಿಕನೆಂದರೆ ನನಗೇನು? ಎಷ್ಟೋ ಮೂಢ ಮತಾಭಿಮಾನಿಗಳು ನನ್ನನ್ನು ನಾಸ್ತಿಕ ನೆನ್ನುವರು. ಅದರಿಂದ ನನಗೇನು? ನಾನೊಂದು ರಹಸ್ಯವನ್ನು ಕೇಳುವೆನು ಹೇಳುವೆಯಾ?"

"ಪಂಡಿತನೇ! ನನ್ನಲ್ಲಿ ರಹಸ್ಯವೇನಿದೆ? ನಾನು ರಹಸ್ಯವಾಗಿ ಮುಚ್ಚಿಟ್ಟರೂ ನೀನು ಅದನ್ನು ಅರಿಯಬಲ್ಲೆ! ಕೇಳು ಏನು ಕೇಳಿದರೂ ಸ್ಪಷ್ಟವಾಗಿ ಹೇಳುವೆನು. ನನ್ನ ಜೀವನದಲ್ಲಿ ಅಂತಹ ಗೂಢ ರಹಸ್ಯ ವೇನೂ ಇಲ್ಲ."

"ಮಲ್ಲಿಗೆ ನೀನು ಗರಳಪುರಿ ಕ್ಷೇತ್ರದಲ್ಲಿ ನಿನ್ನ ಸರ್ವಸ್ವವನ್ನೂ ದಾನಮಾಡಿದೆಯೆಂದು ಕೇಳಿದೆ. ಅದು ನಿಜವೇ? ಅದಕ್ಕೆ ಕಾರಣ ವೇನು?"

"ಪಂಡಿತನೇ ಅದುನಿಜ. ಅದರಲ್ಲಿ ಡಾಂಭಿಕತೆಯೇನೂ ಇಲ್ಲ. ಮಾತೃಸೇವೆ ಈಶಪ್ರೇರಣೆಗಳಿಂದ ಸರ್ವಸ್ವವನ್ನೂ ದಾನ ಮಾಡಿದೆ. ಅದರಲ್ಲಿ ದೋಷವೇನಾದರೂ ಇದೆಯೇ?"

"ಏನೂ ಇಲ್ಲ. ಹಾಗೆ ಸರ್ವಸ್ವ ದಾನಮಾಡಿದವರು ಪುನಃ ಐಶ್ವರ್ಯವನ್ನು ಬಯಸಬಾರದು. ನೀನೀಗ ಐಶ್ವರ್ಯದಲ್ಲಿ ಮುಳುಗಿ ತೇಲುತ್ತಿರುವೆ. ನೀನು ಮಾಡಿದ ದಾನವೆಲ್ಲಾ ಸುಳ್ಳಾಗಬೇಕು. ಅಥವಾ ಈ ಐಶ್ವರ್ಯದ ಬೀಜವೇ ಆ ದಾನವಾಗಿರಬೇಕು. ನೀನು ಸಂನ್ಯಾಸಿನಿಯಾಗುವೆಯೆಂದು ಕೇಳಿದ್ದೆ."

"ಅಹುದು ಮಂತ್ರಿವರ! ನಾನು ಸಂನ್ಯಾಸಿನಿಯಾಗಬೇಕೆಂದು ನಿಶ್ಚಯಮಾಡಿದ್ದೆ."

"ಅದೇಕೆ ತಪ್ಪಿಹೋಯಿತು?"

"ಜಂಗಮದೇವನು ಈ ತ್ರಿಣೇಶ್ವರದೇವಾಲಯದ ನಿರ್ಮಾಣ

ಕ್ಕಾಗಿ ಹತ್ತು ಸಹಸ್ರ ವರಹಗಳ ಸ್ವರ್ಣದಾನವನ್ನು ಕೇಳಿದನು ವಾಗ್ದಾನ ಮಾಡಿಬಿಟ್ಟೆ. ಪುನಃ ನನ್ನ ಸಂಕಲ್ಪವೆಲ್ಲವೂ ವಿಕಲ್ಪ ವಾಯಿತು."

"ಮಲ್ಲಿಗೆ! ಸಂತೋಷ. ಏನಾಗಬೇಕಾಗಿದ್ದಿತೋ ಅದೇ ಆಯಿತು. ಈ ಮಧ್ಯದಲ್ಲಿ ನಡೆದುದೆಲ್ಲಾ ಸುಳ್ಳು. ಮಾಯೆ. ಅದನ್ನು ನೀನು ಅರಿಯಬಲ್ಲೆಯಾ ?"

" ಅಮಾತ್ಯನೇ ಯಾವುದು ಸುಳ್ಳು ? ಯಾವುದು ಮಾಯೆ ?"

"ಮಲ್ಲಿಗೆ ನಿನ್ನ ಸರ್ವಸ್ವದಾನದ ಸಂಕಲ್ಪವು ಸುಳ್ಳು. ಏಕೆಂದರೆ ನೀನು ಪುನಃ ಐಶ್ವರ್ಯವನ್ನು ಸಂಪಾದಿಸಿದ್ದಿ. ಈಗ ಹೇಳು ನೀನು ಸರ್ವಸ್ವ ದಾನಮಾಡಿದಂತಾಯಿತೇ ? ಆದುದರಿಂದ ನಿನ್ನ ಸರ್ವಸ್ವ ದಾನವು ಸುಳ್ಳು. ನೀನು ಸಂನ್ಯಾಸಿನಿಯಾಗಬೇಕೆಂದು ಸಂಕಲ್ಪಿಸಿದ್ದೆ. ಪುನಃ ಈಗ ಗೃಹಸ್ಥಾಶ್ರಮವನ್ನು ಪಡೆದು ಸಂತೋಷದಿಂದಿರುವಿ. ಆ ಸಂನ್ಯಾಸಧರ್ಮ ಸ್ವೀಕಾರದ ಸಂಕಲ್ಪವು ಸುಳ್ಳು. ನಿನ್ನ ಜಂಗನು ದೇವನು ಯೋಗಸಿದ್ಧನೆಂದು ಹೇಳುತ್ತಿ. ಅವನು ನಿನ್ನಲ್ಲಿ ಬಂದು ಸ್ವರ್ಣದಾನವನ್ನು ಬೇಡಿದನು. ಧನವಿಲ್ಲದವರಲ್ಲಿ ದಾನವನ್ನು ಬೇಡು ವುದು ಮಾಯೆಯಲ್ಲದೇ ಮತ್ತೇನು ? ಸಿದ್ಧಪುರುಷನು ಒಬ್ಬ ಹೆಂಗಸಿ ನಲ್ಲಿ ಯಾಚನೆ ಮಾಡುವುದು ಮೋಸವಲ್ಲದೇ ಮತ್ತೇನು ? ಈಗ ನೀನು ಯೋಚನೆಮಾಡಿನೋಡು. ಈ ಸುಳ್ಳು ಮೋಸಗಳಿಂದ ನಿರ್ಮಾಣ ವಾದ ದೇವಾಲಯವು ಎಂತಹ ಪುಣ್ಯಕ್ಷೇತ್ರವಾಗುವುದೋ ನೀನೇ ಯೋಚಿಸಿ ನೋಡು " ಎಂದನು.

ಮಲ್ಲಿಗೆಯ ಮುಖವು ಕೆಂಪೇರಿತು. "ಪಂಡಿತನೇ ನೀನು ನಾಸ್ತಿಕನೆಂದು ಕೇಳಿದ್ದೆ. ನಾನು ನಂಬಿರಲಿಲ್ಲ. ಇಂದು ನೀನು ನನಗೆ ಉಪದೇಶ ಮಾಡುತ್ತಿರುವ ವಾದವು ಶುದ್ಧ ನಾಸ್ತಿಕವಾದ. ನೀನು ಶುದ್ಧ ನಾಸ್ತಿಕ. ಪಾಷಂಡ !" ಎಂದು ಹೇಳಿ ಆಸನದಿಂದ ಎದ್ದಳು.

ಪಂಡಿತನು ನಗುತ್ತಾ "ಮಲ್ಲಿಗೆ, ನಾಸ್ತಿಕರ ಮಾತು ನಾಸ್ತಿಕರಿಗೇ

ರುಚಿಸುತ್ತದೆ. ನನ್ನ ಮಾತು ನಿನಗೆ ರುಚಿಸುವುದಿಲ್ಲ ನೀನು ಹೋಗಿ ಬಾ ! ನಿನ್ನ ಕೋಪವು ಆಸ್ತಿಕರ ಕೋಪ. ತನ್ನಷ್ಟಕ್ಕೆ ತಾನೇ ಶಮನ ವಾಗುತ್ತದೆ" ಎಂದು ಹೇಳಿದನು.

ಮಲ್ಲಿಗೆಯು ಅಳುತ್ತ ಹೊರಟು ಹೋದಳು.

## ೧೫

ಮಹಾರಾಜಾ ಚಿಕ್ಕದೇವರಾಜನೂ, ಪಂಡಿತಾರಾಧ್ಯನೂ ಶ್ರೀರಂಗ ಪಟ್ಟಣಕ್ಕೆ ಬಂದರು. ಅಂದು ರಾಜಧಾನಿಯಲ್ಲೆಲ್ಲಾ ಗಡಿಬಿಡಿ. ಅರಮನೆಯಲ್ಲೆಲ್ಲಾ ಸಡಗರ. ರಾಣೀವಾಸದಲ್ಲಿ ಸಂಭ್ರಮ. ಎಲ್ಲೆಲ್ಲಿಯೂ ರಾಜನು ಬಂದ ಮಾತೇ ಮಾತು. ಜಂಗಮನ ಮಾಯಾಪಾಶದಿಂದ ಪಂಡಿತನು ಅರಸನನ್ನು ಬಿಡಿಸಿಕೊಂಡು ಬಂದನು ಎಂದು ಹಲವರು ಆಡಿಕೊಳ್ಳುತ್ತಿದ್ದರು. ವೈಷ್ಣವರಿಗೆ ವಿಜಯವಾಗುತ್ತದೆ ಎಂದು ಮತ್ತೆ ಕೆಲವರು ವಿಜಯಿದುಂದುಭಿಯನ್ನೇ ಬಾರಿಸಿ ಬಿಟ್ಟರು. ಆದಿನ ಸಂಧ್ಯಾಕಾಲ ರಾಜನು ರಾಜ ಪರಿವಾರದೊಡನೆ ಶ್ರೀರಂಗನಾಥನ ದರ್ಶನಕ್ಕೆ ವೈಭವದಿಂದ ಹೋಗಿಬಂದನು. ಅರ್ಚಕರು ಕೊಟ್ಟ ತೀರ್ಥಪ್ರಸಾದಗಳನ್ನು ಆದರದಿಂದ ಸ್ವೀಕರಿಸಿದನು ರಾಜನ ಮುಖ ದಲ್ಲಿ ಆನಂದೋತ್ಸಾಹಗಳು ಬೆಳಗುತ್ತಿದ್ದವು. ರಾಜನು ದೇವಾಲಯ ದಿಂದ ಹಿಂತಿರುಗಿದಮೇಲೆ ಅಂತಃಪುರದಲ್ಲಿ ರಾಣೀವಾಸದವರ ಕೋಲಾ ಹಲ ! ಅಪರಿಮಿತವಾದ ಸಂಭ್ರಮ. ಆ ಅಂತಃಪುರದಲ್ಲಿ ಪೂರ್ಣ ಚಂದ್ರೋದಯವಾದಂತಾಯಿತು. ಎಲ್ಲಿಯೋ ಮಾಯವಾಗಿ ಹೋಗಿದ್ದ ರಾಜನು ಪ್ರತ್ಯಕ್ಷನಾದಂತೆ ಎಲ್ಲರೂ ಸಂತಸಗೊಂಡರು.

ಮಾರನೆಯ ದಿನ ಪ್ರಾತಃಕಾಲ ರಾಜನು ಸ್ನಾನಾದಿಗಳನ್ನು

ತೀರಿಸಿಕೊಂಡು ಸಭಾಮಂದಿರಕ್ಕೆ ಚಿತ್ತೈಸಿದನು. ಪುರೋಹಿತರೂ, ವಿದ್ವಾಂಸರೂ, ಋತ್ವಿಜರೂ, ಧರ್ಮಾಧಿಕಾರಿಗಳೂ, ವೈದಿಕರೂ ಬಂದು ನೆರೆದಿದ್ದರು ಆ ಸಮಯಕ್ಕೆ ಸರಿಯಾಗಿ ಮಂತ್ರಿ ಪಂಡಿತಾರಾಧ್ಯನು ರಾಜಸಭೆಗೆ ಬಂದು ರಾಜನಿಗೆ ಅಭಿವಂದಿಸಿ ವಿದ್ವನ್ಮಂಡಲಿಗೆ ನಮಸ್ಕರಿಸಿ ಆಸನದಲ್ಲಿ ಕುಳಿತುಕೊಂಡನು. ವೈಷ್ಣವ ಗುರುವಾದ ನಾರಾಯಣಾಚಾರ್ಯನು ರಾಜನುರ್ಯಾವೆಗಳೊಡನೆ ಸಭೆಗೆ ಬಂದನು. ರಾಜನು ಎದ್ದು ನಿಂತು ಕೈಮುಗಿದು ಗೌರವದಿಂದ ನಾರಾಯಣಾಚಾರ್ಯನನ್ನು ಆಸನದಲ್ಲಿ ಕುಳ್ಳಿರಿಸಿದನು. ಪಂಡಿತನು ಎದ್ದು ನಿಂತು "ಆಚಾರ್ಯರೇ, ವೈಷ್ಣವರ ದೂರು ಏನಿದೆ ? ಮಹಾರಾಜರವರಲ್ಲಿ ಅರಿಕೆಮಾಡಿರಿ" ಎಂದು ಹೇಳಿದನು

ನಾರಾಯಣಾಚಾರ್ಯನು "ವಿದ್ವಾಂಸ ! ತೇಜಸ್ವಿ !" ಅವನು ಗಂಭೀರ ವಾಣಿಯಿಂದ ಹೇಳಿದನು. "ಮಂತ್ರಿವರ್ಯನೇ ! ರಾಜನು ರಾಜಧಾನಿಯನ್ನು ಬಿಟ್ಟು ಬಹುಕಾಲ ದೂರವಿದ್ದುದು ನಮಗೆಲ್ಲಾ ಅಸಮ್ಮತವಾಗಿದ್ದಿತು. ಶೈವರ ಮಧ್ಯದಲ್ಲಿ ಸೇರಿಕೊಂಡು ಶಿವ ಕೈಂಕರ್ಯದಲ್ಲಿಯೇ ಮಹಾರಾಜನು ಮುಳುಗಿಹೋಗಿದ್ದಾನೆಂದೂ ಇದರಿಂದ ರಾಜ್ಯದಲ್ಲೆಲ್ಲಾ ಶೈವ ಪಕ್ಷಪಾತವು ವ್ಯಾಪಿಸಿ ಶೈವ-ವೈಷ್ಣವ ವಿರೋಧವು ಪ್ರಬಲಿಸಿ ಅನಾಹುತಕ್ಕೆ ಕಾರಣವಾಗುತ್ತವೆಂದೂ ವೈಷ್ಣ ವರ ಶಂಕೆ ! ನಾವು ಶ್ರೀರಂಗನಾಥನ ಸೇವೆಯಲ್ಲಿರತಕ್ಕವರು. ಇಲ್ಲಿ ಶ್ರೀರಂಗನಾಥನಿಗೆ ನಮ್ಮ ಸೇವೆಯನ್ನು ಕೈಗೊಳ್ಳುವ ಅನುಗ್ರಹ ಬಾರದಿದ್ದರೆ, ಶ್ರೀರಂಗಕ್ಕೆ ಹೊರಟುಹೋಗಬೇಕೆಂದು ಸಂಕಲ್ಪಿ ಸಿದ್ದೇವೆ" ಎಂದು ಹೇಳಿದನು.

ಮಹಾರಾಜನು "ಆಚಾರ್ಯರೇ! ತಮ್ಮ ಸ್ಪಷ್ಟೋಕ್ತಿಯು ನಮಗೆ ತಿಳಿಯಿತು. ತಮ್ಮ ಪೂರ್ವಜರುಗಳ ಕಾಲದಿಂದಲೂ ಶ್ರೀರಂಗನಾಥನು ತಮ್ಮಸೇವೆಯನ್ನು ಕೈಗೊಂಡು ನಮ್ಮಮೇಲೂ, ನಮ್ಮಪ್ರಜೆಗಳ ಮೇಲೂ ಅನುಗ್ರಹವನ್ನು ಕರುಣಿಸಿದ್ದಾನೆ. ತಾವುಗಳು ಶ್ರೀರಂಗಪಟ್ಟಣವನ್ನು

ಪರಿತ್ಯಜಿಸಿಹೋದರೆ, ಶ್ರೀರಂಗನಾಥನ ಸಾನ್ನಿಧ್ಯವು ಕೊರತೆಯಾದೀತು. ತಾವು ನಿತ್ಯ ಕರ್ಮಾನುಷ್ಠಾನಗಳನ್ನು ಮಾಡಿಕೊಂಡು ಭಗವತ್ ಕೈಂಕರ್ಯವನ್ನು ನೆರವೇರಿಸುತ್ತ ಇರಬೇಕೆಂಬುದೇ ನಮ್ಮ ಪೂರ್ವಜರ ಆಶೆ! ಅದನ್ನು ನಡೆಸಿಕೊಂಡು ಬರುವುದು ನಮ್ಮ ಧರ್ಮ! ನಮ್ಮ ರಾಜ್ಯದಲ್ಲಿ ಶಿವ–ವೈಷ್ಣವ ಪಕ್ಷಪಾತವಿಲ್ಲ. ಎಲ್ಲಿಯಾದರೂ ಅಂತಹ ದೋಷವು ಕಂಡು ಬಂದರೆ ಅದಕ್ಕೆ ನಾವು ಹೊಣೆ. ಮೈಸೂರಿನಲ್ಲಿ ತ್ರಿಣೇಶ್ವರನ ದೇವಸ್ಥಾನದ ಜೀರ್ಣೋದ್ಧಾರಕಾರ್ಯವು ಭಗವತ್ಪ್ರೇರಣೆ ಯಿಂದ ನಡೆಸಲ್ಪಡುತ್ತಿದೆ. ಇಂದು ಪ್ರಾತಃಕಾಲದ ಧರ್ಮದಲ್ಲಿ ಮೈಸೂರಿನಲ್ಲಿರುವ ಶ್ರೀವರಾಹಸ್ವಾಮಿ ದೇವಾಲಯ ನಿರ್ಮಾಣಕ್ಕಾಗಿ ಹತ್ತು ಸಹಸ್ರ ಹೊನ್ನಿನ ವರಹಗಳನ್ನು ದಾನಮಾಡಿದ್ದೇವೆ" ಎಂದು ಹೇಳಿದನು

ವೈದಿಕರೂ ವಿದ್ವಾಂಸರೂ ಎಲ್ಲರೂ ಜಯ ಜಯಕಾರ ಮಾಡಿದರು. ನಾರಾಯಣಾಚಾರ್ಯನು ಎದ್ದು ಮಹಾರಾಜನಿಗೆ ಆಶೀರ್ವದಿಸಿದನು. ಪ್ರಾತಃಕಾಲದ ಆ ವಿದ್ವತ್ಸಭೆಯು ಭರಖಾಸ್ತಾಯಿತು. ವೈದಿಕರೂ, ವಿದ್ವಾಂಸರೂ, ಪುರೋಹಿತರೂ ಮರ್ಯಾದೆ ದಕ್ಷಿಣೆ ತಾಂಬೂಲಗಳನ್ನು ಪಡೆದು ಹೊರಟುಹೋದರು ನಾರಾಯಣಾಚಾರ್ಯನೂ ರಾಜ ಮರ್ಯಾದೆಗಳೊಂದಿಗೆ ತನ್ನ ಆವಾಸಕ್ಕೆ ತೆರಳಿದನು. ರಾಜಧಾನಿಯಲ್ಲೆಲ್ಲಾ ಮಹಾರಾಜನ ಔದಾರ್ಯ ದೈವಭಕ್ತಿ ಸರ್ವಸಮಭಾವಗಳನ್ನು ಪುರ ನಿವಾಸಿಗಳು ಬಣ್ಣಿಸಿ ಕೊಂಡಾಡಿದರು.

ಮಹಾರಾಜನು ಒಂದೆರಡು ವಾರಗಳು ಕಳೆದನಂತರ ಪಂಡಿತಾರಾಧ್ಯನನ್ನು ಕರೆಸಿಕೊಂಡು ಅಂತರಂಗದಲ್ಲಿ ಸಂಭಾಷಣೆ ಮಾಡಿದನು.

"ಮಿತ್ರನೇ! ಈಗ ಜನರೇನೆನ್ನುತ್ತಾರೆ? ನನ್ನನ್ನು ಜನರು ವೈಷ್ಣವನೆನ್ನುತ್ತಾರೆಯೇ? ಶಿವಭಕ್ತನೆನ್ನುತ್ತಾರೆಯೇ? ನೀನೇನೆನ್ನುವಿ? ನಾನು ಈ ಜನರ ಆಗ್ರಹಕ್ಕಿಂತಲೂ ನಿನ್ನ ಆಗ್ರಹವನ್ನು ಮಿಗಿ

ಲಾಗಿ ಭಾವಿಸುತ್ತೇನೆ." ಎಂದು ಹೇಳಿದನು.

ಆರಾಧ್ಯನು "ಚಿಕ್ಕಪ್ಪಾಜಿ! ಜನರ ಕೋಪಕ್ಕೆ ಕಾರಣವಿರಬೇಕೆಂಬುದಿಲ್ಲ. ಜನಕೋಪವು ಬಂದ ಮೇಲೆ ಶಮನ ಮಾಡುವುದೂ ಬುದ್ಧಿವಂತರ ಲಕ್ಷಣವೇನೋ ಹೌದು! ಆದರೆ ಜನಕೋಪಕ್ಕೆ ಆಸ್ಪದವಿಲ್ಲದಂತೆ ಸರ್ವದಾ ಜಗರೂಕರಾಗಿರುವುದು ಪ್ರಜ್ಞಾಶಾಲಿಗಳ ಲಕ್ಷಣ. ಅದನ್ನೇ ನಾನು ಎಚ್ಚರಿಸಲು ಮೈಸೂರಿಗೆ ಬಂದೆ. ನಿಮ್ಮ ಮೇಲೆ ಆಗ್ರಹವೆಲ್ಲಿ ಬಂತು? ನಿಜವಾದ ಆಗ್ರಹವು ಬಂದರೆ ನೀನು ಈ ಪ್ರಪಂಚದಲ್ಲೇ ನನ್ನನ್ನು ನೋಡಲಾರೆ" ಎಂದು ಹೇಳಿದನು.

ರಾಜನು "ಆರಾಧ್ಯನೇ! ನೀನು ಮಲ್ಲಿಗೆಯನ್ನು ಹಿಂದೆಯೂ ನೋಡಿದ್ದೆ. ಮೊನ್ನೆ ಮೈಸೂರರಮನೆಯಲ್ಲಿಯೂ ನೋಡಿದೆ. ಅವಳ ವಿಚಾರದಲ್ಲಿ ನಿನ್ನ ಮನಸ್ಸು ಪರಿವರ್ತನವಾಗಿರುವುದೇನು?"

"ಚಿಕ್ಕಪ್ಪಾಜಿ! ಬ್ರಹ್ಮಾಂಡ ಪರಿವರ್ತನೆಯಾಗಿದೆ. ಅಂದು ಮಲ್ಲಿಗೆಯು ಗಾಯಕಿ! ವೇಶ್ಯೆ! ಇಂದು ಮಹಾರಾಜರ ಬಂಗಾರದ ಪತ್ನಿ. ಅವೆರಡಕ್ಕೂ ಮಹದಂತರವಿದೆ."

ರಾಜನು ಸ್ವಲ್ಪ ನಾಚಿದನು. ಅಂತರಂಗಮಿತ್ರನಾದ ಪಂಡಿತನಲ್ಲಿ ಆ ನಾಚಿಕೆಯು ಬಹಳ ಹೊತ್ತು ಇರಲಿಲ್ಲ. "ಪಂಡಿತನೇ! ಅಂದು ನಾವು ಮೈಸೂರಿನಿಂದ ಹಿಂತಿರುಗುವ ದಿನದ ಹಿಂದಿನ ರಾತ್ರಿ ಮಲ್ಲಿಗೆಯು ನಿನ್ನ ದರ್ಶನಾರ್ಥವಾಗಿ ಬಂದಿದ್ದಳು. ಅವಳೇನೋ ನಿನ್ನೊಡನೆ ಬಹಳ ಮಾತನಾಡಬೇಕೆಂದು ಬಂದಿದ್ದಳು ಏನು ಮಾತನಾಡಿದಳು?"

ಪಂಡಿತನು ನಗುತ್ತಾ "ಯಥಾರ್ಥವನ್ನು ನುಡಿದಳು. ನನ್ನನ್ನು ನಾಸ್ತಿಕ! ನಾಸ್ತಿಕ! ಎಂದು ನೂರುಬಾರಿ ಜರಿದಳು. ತಾನು ಮಹಾ ದೈವಭಕ್ತಳೆಂದೂ ಧರ್ಮಾತ್ಮಳೆಂದೂ ಹೇಳಿಕೊಂಡಳು. ಅವಳ ಗುರು ಜಂಗಮದೇವನು ಕೈಲಾಸದಿಂದ ಇಳಿದುಬಂದಿರುವ ಸಾಕ್ಷಾತ್ ಪರಮೇಶ್ವರನೆಂದು ಹೇಳಿದಳು" ಎಂದನು.

ರಾಜನು, "ಬಹಳ ಅತ್ಯುಕ್ತಿ! ಬಹಳ ಅತಿಶಯೋಕ್ತಿ!"

"ಚಿಕ್ಕಪ್ಪಾಜಿ! ಅತಿಶಯೋಕ್ತಿಯ ಲವಲೇಶವೂ ಇಲ್ಲ. ಇದು ಯಥಾರ್ಥ. ಅವಳು ಅದನ್ನು ಪೂರ್ತಿಯಾಗಿ ನಂಬಿದ್ದಾಳೆ. ಅದೇ ಮೂಢ ನಂಬಿಕೆಯೆನ್ನುವುದು."

"ಪಂಡಿತನೇ! ಮಲ್ಲಿಗೆಯು ಮೂಢಳೆಂಬುವೆಯಾ?"

"ಅವಳು ಮೂಢಳೋ ಜ್ಞಾನಿಯೋ ಅದರಿಂದೇನು? ಮಲ್ಲಿಗೆಯು ಮಲ್ಲಿಗೆ! ಗಾಯಕಿ! ನರ್ತಕಿ! ರಾಜನ ಪ್ರಿಯತಮೆ! ಇಷ್ಟೇ ನನ್ನ ಭಾವನೆ. ವಾಸ್ತವವೂ ಅಷ್ಟೇ!" ಎಂದನು.

ರಾಜನು "ಪಂಡಿತನೇ ನಿಜವಾಗಿಯೂ ನಾನು ಆ ಮಲ್ಲಿಗೆಯನ್ನು ಬಿಟ್ಟಿರಲಾರೆ. ಅವಳನ್ನು ಈ ರಾಜಧಾನಿಗೆ ಈ ಅರಮನೆಗೆ ಕರೆಸಿಬಿಟ್ಟು ಕೊಳ್ಳಬೇಕೆಂಬ ಆಶೆಯಿದೆ ಅದಕ್ಕೆ ನೀನೇನು ಹೇಳುವಿ?"

"ಚಿಕ್ಕಪ್ಪಾಜಿ! ಈ ಆಶೆಯು ಇಂದಿನ ಆಶೆಯೇನೂ ಅಲ್ಲ. ಬಹುದಿನಗಳ ಆಸೆ! ಆಶೆಯು ಉಪಭೋಗದಿಂದ ಶಮನವಾಗುವುದಿಲ್ಲ. ಇಷ್ಟು ದಿನಗಳು ಮಲ್ಲಿಗೆಯೊಡನೆ ಕಾಲಕಳೆದೆಯಲ್ಲವೇ? ನಿನ್ನ ಆಶೆಯು ಶಮನವಾಯಿತೇನು? ಅದು ಕಾಮದ ಸ್ವಭಾವ! 'ನಜಾತು ಕಾಮಃ ಕಾಮಾಯ ಉಪಭೋಗೆ ನಶಾಮ್ಯತಿ' ಎಂದು ಉಪನಿಷತ್ತು ಹೇಳುವುದಿಲ್ಲವೇ? ಅದಕ್ಕಿಂತಲೂ ದೊಡ್ಡ ಮಾತನ್ನು ನಾನೇನು ಹೇಳಬಲ್ಲೆ?"

"ಪಂಡಿತನೇ ನೀನು ನಿಜವಾದ ವೇದಾಂತಿ! ಕರ್ಮಯೋಗಿ! ನಾನು ವೇದಾಂತದ ಉಪದೇಶವನ್ನು ಪಡೆಯುತ್ತಿಲ್ಲ. ಆ ಮಲ್ಲಿಗೆಯು ಈ ಅರಮನೆಗೆ ಬಂದರೆ ರಾಜಧಾನಿಯ ಜನರು ಪುನಃ ಗದ್ದಲವೆಬ್ಬಿಸುತ್ತಾರಲ್ಲವೇ ಎಂದು ನಿನ್ನೊಡನೆ ಆಲೋಚನೆ ಮಾಡುತ್ತಿದ್ದೇನೆ."

"ಹೌದು ಜನರ ಸ್ವಭಾವವೇ ಅಂತಹುದು. ಯಾವುದಾದರೊಂದು ಹೊಸ ಪ್ರಕರಣವು ಬಂದರೆ ಅದು ಲೋಕ ವಿರುದ್ಧವಾಗಿದ್ದರೆ ಜನರು ಗದ್ದಲಮಾಡುತ್ತಾರೆ. ಹಾಗೆಯೇ ಆ ಗದ್ದಲವು ತಣ್ಣಗಾಗುತ್ತದೆ. ನಿನ್ನಂತಹ ಮಹಾರಾಜನು ಭೂರಿ ದಕ್ಷಿಣೆಗಳನ್ನು ದಾನಮಾಡಿಬಿಟ್ಟರೆ ಈ ಜನರು ಇಂದ್ರ ಚಂದ್ರ ದೇವೇಂದ್ರನೆಂದು ಹೊಗಳುತ್ತಾರೆ.

ಆ ದಾನವನ್ನು ಮಲ್ಲಿಗೆಯ ಕೈಯಿಂದಲೇ ಮಾಡಿಸಿ ಬಿಟ್ಟರಂತೂ ಅವಳು ವೈಕುಂಠದಿಂದಲೇ ಇಳಿದು ಬಂದಿರುವ ಮಹಾಲಕ್ಷ್ಮಿಯೆಂದು ಹೊಗಳುತ್ತಾರೆ ರಾಜರಿಗೆ ಇದೂ ಒಂದು ವಿಧವಾದ ಅಲಂಕಾರ ಪ್ರಾಯವೇ ಆಗುತ್ತದೆ. ಇದೆಲ್ಲಾ ಲೋಕ ಸ್ವಭಾವ."

"ಪಂಡಿತನೇ ನಿನ್ನನ್ನು ಮಾತಿನಲ್ಲಿ ಗೆಲ್ಲುವುದು ಕಷ್ಟ. ಮಲ್ಲಿಗೆಯು ಈ ಅರಮನೆಗೆ ಬರಲು ನೀನು ಅನುಮತಿಯನ್ನೀಯುವೆಯಾ ? ಸ್ಪಷ್ಟ ವಾಗಿ ಹೇಳು."

"ಚಿಕ್ಕಪ್ಪಾಜಿ ನೀನು ಅಪೇಕ್ಷಿಸಿದರೆ ಈ ಗಾಯಕಿಯು ಎಲ್ಲಿ ಬೇಕಾ ದರೂ ಇರಬಹುದು. ಅದು ನಿನ್ನ ಇಷ್ಟಾನಿಷ್ಟಗಳಿಗೆ ಸಂಬಂಧ ಪಟ್ಟುದು. ಮಲ್ಲಿಗೆಯು ವಿದ್ಯಾವತಿಯಿರಬಹುದು. ದೈವಭಕ್ತಳಿರ ಬಹುದು ಚಿಕ್ಕಪ್ಪಾಜಿಯ ಬಂಗಾರದಪತ್ನಿಯಾಗಿರಬಹುದು. ಅವಳಿಗಿಂತಲೂ ಈ ಜಗತ್ತಿನಲ್ಲಿ ನಿನಗೆ ಪ್ರಿಯವಸ್ತುವು ಬೇರೊಂದಿಲ್ಲದಿರ ಬಹುದು. ಆದರೆ ಲೋಕಾರಾಧನೆಗೆ ಅಡ್ಡ ಬರುವುದಾದರೆ ಅಂದು ಕಠಿಣ ಮನಸ್ಸಿನಿಂದ ನಾನು ಮಲ್ಲಿಗೆಯನ್ನು ಪರಿತ್ಯಜಿಸಬೇಕೆಂದು ಹೇಳುವ ಕಾಲವು ಬರಬಹುದು ಕಠೋರ ಪರಿಸ್ಥಿತಿಯು ಬಂದರೆ ಆ ಗಾಯಕಿಯನ್ನು ಶೂಲಕ್ಕೇರಿಸಬೇಕೆಂದು ನಾನು ಕೇಳಬಹುದು. ರಾಜನಿಗೆ ಲೋಕಾರಾಧನೆಯೇ ಪ್ರಥಮಧರ್ಮ. ಆ ಲೋಕಾರಾಧನೆಯ ಪೂಜಾರಿಯು ನಾನು " ಎಂದು ಹೇಳಿದನು.

ರಾಜನಿಗೆ ಆ ಮಾತುಗಳು ಬಹಳ ಬಿರುನಾಗಿದ್ದವು. ಈ 'ಪಂಡಿತ ನಿಗೆ ಮೃದು ಭಾಷೆಯೇ ಬಾರದು. ನನ್ನಲ್ಲಿ ಇವನಿಗೆ ಸಾರಳ್ಯವು ಬಹಳ. ಅದರಿಂದ ಕಠಿಣವಾಗಿ ಮಾತನಾಡುತ್ತಾನೆ. ಇವನ ಹೃದ ಯವು ಕೋಮಲವಾದುದು. ಮಲ್ಲಿಗೆಯು ನನ್ನೊಡನೆ ಹೇಳದಿರುವ ಅಂತರಂಗವೇ ಇಲ್ಲ. ಈ ಪಂಡಿತನು ಆಮರಣಾಂತ ಸೋದರೀಪ್ರೇಮ ವನ್ನು ತೋರುವುದಾಗಿ ಮಲ್ಲಿಗೆಗೆ ಭಾಷೆ ಕೊಟ್ಟಿದ್ದಾನೆ. ಮಲ್ಲಿಗೆಯು ನನ್ನ ಬಂಗಾರದವಳಾಗುವುದಕ್ಕಿಂತಲೂ ಪೂರ್ವದಲ್ಲಿಯೇ ಈ ಪಂಡಿತನು

ಅವಳನ್ನು ನನ್ನ ಬಂಗಾರದ ಪತ್ನಿಯಾಗಿ ಭಾವಿಸಿದ್ದಾನೆ. ಆದರೂ ಅವನ ಶಾಠ್ಯವನ್ನು ಅವನು ಬಿಡುವುದಿಲ್ಲ.' ಎಂದುಕೊಂಡನು.

ಮಂತ್ರಿಯೊಡನೆ ಯಥೋಚಿತ ಸಂಭಾಷಣೆಯನ್ನು ಮಾಡಿ ಕಳುಹಿಸಿಕೊಟ್ಟನು.

ಅನಂತರ ಅನೇಕ ಸನ್ನಾಹಗಳನ್ನು ಮಾಡಿ ಮಲ್ಲಿಗೆಯನ್ನು ಶ್ರೀರಂಗಪಟ್ಟಣದ ಅರಮನೆಗೆ ಕರೆಸಿಕೊಂಡನು ಮೊದಮೊದಲು ರಾಣೀವಾಸವೆಲ್ಲವೂ ಪ್ರಕ್ಷುಬ್ಧವಾಗಿದ್ದಿತು. ಮಲ್ಲಿಗೆಯ ು ವಿವಾಹಿತಳಾದ ಧರ್ಮಪತ್ನಿಯಲ್ಲದಿದ್ದರೂ ಅರಮನೆಯಲ್ಲಿ ರಾಜನಪತ್ನಿಗೆ ಸಲ್ಲುವ ಸ್ಥಾನಮಾನಗಳೆಲ್ಲವೂ ಸಲ್ಲುತ್ತಿದ್ದವು. ಪರಿಚಾರಿಕೆಯರೂ ಸಖಿಯರೂ ಇವರೆಲ್ಲರೂ ಮಲ್ಲಿಗೆಯ ಗುಣಗಳನ್ನು ಪ್ರಶಂಸಿಸುತ್ತಿದ್ದರು. ರಾಜನ ಪಟ್ಟಮಹಿಷಿಯವರಾದ ಸುಗುಣಾಂಬೆಯವರಿಗೂ ಆ ಮಲ್ಲಿಗೆಯನ್ನು ನೋಡಬೇಕೆಂಬ ಕುತೂಹಲವಿದ್ದಿತು. ಸುಗುಣಾಂಬೆಯವರು ಮಲ್ಲಿಗೆಯ ಅಂತಃಪುರಕ್ಕೆ ಹೋಗಲು ಹಿಂತೆಗೆಯುತ್ತಿದ್ದರು ಕುಲದಲ್ಲಿ ಮಲ್ಲಿಗೆಯು ವೇಶ್ಯೆ ! ಅವಳಂತಃಪುರಕ್ಕೆ ಪಟ್ಟಮಹಿಷಿಯು ಹೋದರೆ ಅರಮನೆಯಲ್ಲೆಲ್ಲಾ ಗುಲ್ಲೇಳುತ್ತದೆ. ಅವರು ತಮ್ಮ ಮನದಾಶೆಯನ್ನು ಬಹು ದಿವಸಗಳು ತಡೆದಿಡಲು ಸಮರ್ಥರಾಗಲಿಲ್ಲ ಆಪ್ತಳಾದ ಪರಿಚಾರಿಕೆಯೊಬ್ಬಳನ್ನು ಮಹಾರಾಣಿಯವರೇ ಮಲ್ಲಿಗೆಯ ಅಂತಃಪುರಕ್ಕೆ ಕಳುಹಿಸಿಕೊಟ್ಟರು. ಆ ದಾದಿಯು ಬಂದು ಮಲ್ಲಿಗೆಯನ್ನು ಕಂಡು ಕೈ ಮುಗಿದು "ಚಿಕ್ಕರಾಣಿಯವರೇ, ಮಹಾರಾಣಿಯವರು ತಮ್ಮನ್ನು ನೋಡಲಪೇಕ್ಷಿಸುತ್ತಾರೆ" ಎಂದು ತಿಳಿಸಿದಳು. ಮಹಾರಾಣಿಯವರಿಗೆ ಮಲ್ಲಿಗೆಯು ಬರುತ್ತಾಳೋ ಗರ್ವಿಷ್ಟಳಾಗಿ ತಿರಸ್ಕರಿಸುತ್ತಾಳೋ ಎಂಬ ಸಂಶಯವಿದ್ದಿತು. ದಾದಿಯ ಮಾತುಗಳನ್ನು ಕೇಳಿ ಮಲ್ಲಿಗೆಯು ಹಿಡಿಸಲಾರದಷ್ಟು ಹರ್ಷಗೊಂಡಳು. ವಸ್ತ್ರಾಭರಣಗಳನ್ನು ಧರಿಸಿ ಅಲಂಕರಿಸಿಕೊಳ್ಳಲಿಲ್ಲ. ತಲೆಯನ್ನು ಬಾಚಿ ಗಂಟಿಕ್ಕಲಿಲ್ಲ. ಮಹಾರಾಣಿಯ ಆಜ್ಞೆಯು ಬಂದಾಗ ಹೇಗಿದ್ದಳೋ ಹಾಗೆಯೇ ಎದ್ದು

ದಾದಿಯೊಡನೆ ಮಹಾರಾಣಿಯವರ ಅಂತಃಪುರಕ್ಕೆ ಮಲ್ಲಿಗೆಯು ಓಡಿ ಬಂದಳು. ಮಹಾರಾಣಿಯವರು ಅಂತಃಪುರದಲ್ಲಿ ಚಿತ್ರವನ್ನು ಬರೆಯುತ್ತಾ ಕುಳಿತಿದ್ದರು, ಮಲ್ಲಿಗೆಯು ಬಂದು ಮಹಾರಾಣಿಯವರ ಪಾದಗಳನ್ನು ಮುಟ್ಟಿ ಅಭಿವಂದಿಸಿದಳು. ಮಲ್ಲಿಗೆಯು ಸಾಧಾರಣ ವಸನವನ್ನುಟ್ಟಿದ್ದಳು. ತನ್ನಂತಃಪುರದಿಂದ ಓಡಿಬರುವ ಸಡಗರದಲ್ಲಿ ತಲೆಯಗಂಟು ಬಿಚ್ಚಿ ಆ ಕೇಶರಾಶಿಯು ಹಾರುತ್ತಿದ್ದಿತು. ನಿರಾಭರಣೆಯಾಗಿದ್ದಳು. ಅವಳನ್ನು ಕಂಡು ಮಹಾರಾಣಿಯವರು "ನೀನಾರೆ ತಾಯಿ ! ನಿನಗೇನು ಬೇಕು?" ಎಂದು ಕೇಳಿದರು.

ಮಲ್ಲಿಗೆಯು ತಲೆಬಾಗಿಸಿ ನಗುಮೊಗದಿಂದ ನಿಂತುಕೊಂಡಳು. ಪರಿಚಾರಿಕೆಯು "ಮಹಾರಾಣಿಯವರೇ ! ಇವರೇ ಚಿಕ್ಕರಾಣಿಯವರು" ಎಂದು ಹೇಳಿದಳು. ಮಹಾರಾಣಿಯು ನಂಬಲಿಲ್ಲ. ಅವರೆದ್ದು ಮಲ್ಲಿಗೆಯನ್ನು ತಬ್ಬಿಕೊಂಡು ಆಸನದಲ್ಲಿ ಕುಳ್ಳಿರಿಸಿದರು. "ತಂಗಿ ! ನಿನ್ನನ್ನು ಕಾಣಬೇಕೆಂಬ ಆಸೆಯು ಬಹು ದಿನಗಳಿಂದ ಇದ್ದಿತು. ನೀನು ಪರಮ ಸುಂದರಿಯೆಂದು ಕೇಳಿದ್ದೆ" ಎಂದಳು. ಮಲ್ಲಿಗೆಯು ಪುನಃ ನಾಚಿ ತಲೆಬಾಗಿಸಿದಳು. ಮಹಾರಾಣಿಯು "ತಂಗೀ ನಿನ್ನ ಹೆಸರು ಮಲ್ಲಿಗೆಯಲ್ಲವೆ ? ಮುದ್ದಾದ ಹೆಸರು !" ಎಂದು ಹೇಳಿದಳು. ಮಲ್ಲಿಗೆಯು "ಹೌದು, ಮಹಾರಾಣಿಯವರೇ ? ಅದೇ ನನ್ನ ಹೆಸರು. ನಾನು ತಮ್ಮ ದರ್ಶನಕ್ಕಾಗಿ ಬರಬೇಕೆಂದು ಎಷ್ಟೋ ಸಾರಿ ಪ್ರಭುಗಳಲ್ಲಿ ತಿಳಿಸಿದೆ. ಅವರು ತಾನೇ ಮಹಾರಾಣಿಯವರ ಸನ್ನಿಧಿಗೆ ಕರೆದೊಯ್ಯುವುದಾಗಿ ಹೇಳಿ ಇಷ್ಟು ದಿನ ಕಳೆದರು. ಈ ದಿನ ತಮ್ಮ ಅಪ್ಪಣೆಯನ್ನು ಕೇಳಿ ನಾನೇ ಹೊರಟುಬಂದಿದ್ದೇನೆ" ಎಂದು ಹೇಳಿದಳು ಮಹಾರಾಣಿಯವರು ಒಂದು ಉಯ್ಯಾಲೆಯ ಮೇಲೆ ಕುಳಿತಿದ್ದರು. ಮಲ್ಲಿಗೆಯನ್ನು ಅದೇ ಉಯ್ಯಾಲೆಯ ಮಣೆಯಮೇಲೆ ಕುಳ್ಳಿರಿಸಿಕೊಂಡಿದ್ದರು. ಉಯ್ಯಾಲೆಯು ಕೊಂಚ ಕೊಂಚ ಆಡಿದಾಗಲೆಲ್ಲಾ ಮಲ್ಲಿಗೆಯ ಕೇಶಧಾಮವು ಪಸರಿಸಿ ಅವಳ ಮೈ ಮುಚ್ಚುತ್ತಿದ್ದಿತು. ಮಹಾರಾಣಿ

ಕಣ್ಣುಹಾರಿಸಿ ಪರಿಚಾರಿಕೆಗೆ ಸನ್ನೆ ಮಾಡಿದಳು. ಪರಿಚಾರಿಕೆಯು ಬಂದು ತಲೆಯಕೂದಲನ್ನು ಗಂಟುಹಾಕಿದಳು. ಮಲ್ಲಿಗೆಯು "ನಾನು ಮರೆತುಬಿಟ್ಟೆ" ಎಂದು ಹೇಳಿ ತನ್ನ ಕೂದಲನ್ನು ಸವರಿಸಿಕೊಂಡು ಮತ್ತೊಮ್ಮೆ ಗಂಟುಹಾಕಿಕೊಂಡಳು. "ಮಹಾರಾಣಿಯವರೇ! ನಾನು ತಲೆಬಾಚಿ ಹೆರಳು ಕಟ್ಟಿ ಹೂಮುಡಿದು ಅಲಂಕರಿಸಿಕೊಂಡು ಬಂದಿದ್ದರೆ ಚೆನ್ನಾಗಿತ್ತು. ನನ್ನ ಆತುರದಲ್ಲಿ ನನಗೆ ಅದೊಂದೂ ತೋರಲಿಲ್ಲ" ಎಂದು ಹೇಳಿದಳು. ಮಹಾರಾಣಿಯು "ಅದೇನೂ ಇಲ್ಲ. ಅಲಂಕಾರವಿಲ್ಲದೆಯೇ ಎಷ್ಟೋ ಚೆನ್ನಾಗಿದ್ದೆ" ಎಂದು ಹೇಳಿ ತಲೆಸವರಿದರು. ರಾಣಿಯು ಮಲ್ಲಿಗೆಯನ್ನು ಮಾತನಾಡಿಸುತ್ತಾ ತಮ್ಮ ಅಲಂಕಾರ ಗೃಹದೊಳಗೆ ಕರೆದೊಯ್ದಳು. ಅಲ್ಲಿ ಸಖಿಯರನ್ನು ಕರೆದು ಮಲ್ಲಿಗೆಗೆ ತಲೆಬಾಚಿ, ಅಲಂಕರಿಸುವಂತೆ ಅಪ್ಪಣೆ ಮಾಡಿದಳು. ಸಖಿಯರು ಸುವಾಸನೆಯ ಎಣ್ಣೆಗಳನ್ನು ಹಚ್ಚಿ ಮಲ್ಲಿಗೆಯ ತಲೆಬಾಚಿ ಹೂ ಮುಡಿಸಿದರು. ಮುಖಕ್ಕೆ ಕಸ್ತೂರಿಯ ತಿಲಕವನ್ನಿಟ್ಟರು. ಮಹಾರಾಣಿಯು ತನ್ನ ಆಭರಣಗಳನ್ನಿಟ್ಟು ಅಲಂಕರಿಸಿದಳು. ಸಖಿಯರು ಮಹಾರಾಣಿಯವರಿತ್ತ ದುಕೂಲವನ್ನು ಉಡಿಸಿದರು. ಮೇಲೆ ಜರತಾರಿಯ ಮೇಲುದುವನ್ನು ಹೊದಿಸಿ, "ಮಲ್ಲಿಗೆ ರಾಜಸ್ತ್ರೀಯರು ಹೀಗಿರಬೇಕು" ಎಂದು ಹೇಳಿ ಮಲ್ಲಿಗೆಯ ಕೈಗಳನ್ನು ಹಿಡಿದು ಎಳೆದುಕೊಂಡು ಅಪ್ಪಿ ಮುದ್ದಿಟ್ಟರು. ಕನ್ನಡಿಯಮುಂದೆ ನಿಲ್ಲಿಸಿ 'ಮಲ್ಲಿಗೆ ಹೇಗಿದ್ದೀ ನೋಡಿಕೋ!' ಎಂದು ಹೇಳಿ ನಕ್ಕರು. ಮಲ್ಲಿಗೆಯು ಆ ಕನ್ನಡಿಯಲ್ಲಿ ಓರೆಗಣ್ಣಿನಿಂದ ತನ್ನ ಮುಖವನ್ನು ನೋಡಿಕೊಂಡಳು. ಅವಳ ಪಕ್ಕದಲ್ಲಿಯೇ ಮಹಾರಾಣಿಯವರ ಪ್ರತಿಬಿಂಬವನ್ನು ನೋಡಿದಳು. 'ಆಹಾ, ಮಹಾರಾಣಿಯ ಸೌಂದರ್ಯವು ಎಂತಹ ಅಮೋಘವಾದ ಸೌಂದರ್ಯ' ಎಂದುಕೊಂಡು ನಾಚಿ ಹಿಂದಕ್ಕೆ ಬಂದಳು. "ಮಹಾರಾಣಿಯು "ಏಕೆ ಮಲ್ಲಿಗೆ, ಈ ಅಲಂಕಾರವು ನಿನಗೆ ಚೆನ್ನಾಗಿ ಕಾಣಲಿಲ್ಲವೆ?" ಮಲ್ಲಿಗೆಯು ನಾಚಿಕೆಯಿಂದ "ತಾವು ಕೊಟ್ಟ ಅಲಂಕಾರವು

ಚೆನ್ನಾಗಿಲ್ಲದೇ ಏನು? ಎಷ್ಟೋ ಚೆನ್ನಾಗಿದೆ ನನಗೇಕೋ ನಾಚಿಕೆ ಯಾಯಿತು" ಎಂದು ಹೇಳಿ ಸಣ್ಣನಗುವನ್ನು ನಕ್ಕಳು. ಮಹಾರಾಣಿಯು "ಮಲ್ಲಿಗೆ ನಿಜವಾಗಿಯೂ ಈ ದುಕೂಲಾಭರಣಗಳು ನಿನಗೆ ಒಪ್ಪುತ್ತವೆ. ಇವೆಲ್ಲವೂ ನಿನ್ನ ಅಂಗಾಂಗಗಳಿಂದಲೇ ಎದ್ದುಬಂದಂತೆ ಅಳವಡಿಸಿವೆ" ಎಂದು ಹೇಳಿ ತಮ್ಮ ಅಂತರಂಗದ ಕೋಣೆಗೆ ಕರೆದೊಯ್ದು, ಪರ್ಯಂಕದ ಮೇಲೆ ಕುಳ್ಳಿರಿಸಿಕೊಂಡು ತಾನೂ ಕುಳಿತುಕೊಂಡು ಮಲ್ಲಿಗೆಯ ಬೆನ್ನಿನ ಮೇಲೆ ಕೈಯಾಡಿಸುತ್ತಾ "ಚಿಕ್ಕರಾಣಿ! ನೀನು ಶಿವಭಕ್ತಳೆಂದು ಕೇಳಿದ್ದೇನೆ. ಅಹುದೇನು?" ಎಂದು ಕೇಳಿದಳು. "ದೇವಿ! ನಾನು ಮನಸಾರ ಪ್ರಭುಗಳ ಭಕ್ತಳು, ಪ್ರಭುಗಳಿಗಿಂತ ದೊಡ್ಡ ದೇವರಿಲ್ಲ ಎಂದು ತಿಳಿದಿದ್ದೇನೆ" ಎಂದು ಹೇಳಿದಳು. ರಾಣಿಗೆ ಬಲುಸಂತೋಷವಾಯಿತು. ರಾಣಿಯು ಬಹಳ ಹೊತ್ತು ಮಲ್ಲಿಗೆಯೊಡನೆ ಮಾತನಾಡುತ್ತಿದ್ದಳು. ಮಲ್ಲಿಗೆಯು ಹೊರಡುವ ಸಮಯದಲ್ಲಿ ಮಹಾರಾಣಿಯು "ತಂಗಿ, ನೀನು ಒಳ್ಳೆಯ ಸಂಗೀತಗಾರಳೆಂದು ಕೇಳಿದ್ದೇನೆ. ಒಂದು ಕೃತಿಯನ್ನು ಹಾಡಬಾರದೇ" ಎಂದು ಕೇಳಿದಳು ಮಲ್ಲಿಗೆಯು ತಲೆದೂಗುತ್ತಾ "ದೇವಿಯವರೇ! ಬರಿಯ ಬಾಯಿಯಲ್ಲಿ ಹಾಡುವುದಕ್ಕೆ ಬರುವುದಿಲ್ಲ. ತಂಬೂರಿ, ತಾಳ, ಮೃದಂಗಗಳಿರಬೇಕು" ಎಂದು ಹೇಳಿದಳು. ಮಹಾರಾಣಿಯು "ಹಾಗಾದರೆ ನಿನ್ನ ಸಂಗೀತವನ್ನು ಕೇಳುವುದಾವಾಗ?" "ಯಾವಾಗಬೇಕಾದರೂ ಬಂದು ಹಾಡುತ್ತೇನೆ. ಪಕ್ಕವಾದ್ಯಗಳಿಲ್ಲದಿದ್ದರೆ ಶೋಭಿಸುವುದಿಲ್ಲ. ಈಗ ಪಕ್ಕವಾದ್ಯದವರೊಡನೆ ಸದರಿನಲ್ಲಿ ಕುಳಿತುಕೊಳ್ಳಲು ನಾಚಿಕೆಯಾಗುತ್ತದೆ. ಬಹುದಿನಗಳಿಂದ ಆ ಅಭ್ಯಾಸವೇ ತಪ್ಪಿಹೋಗಿದೆ"

"ಹಾಗಾದರೆ ಮಹಾರಾಜರು ಈಗ ನಿನ್ನ ಸಂಗೀತವನ್ನು ಕೇಳುವುದಿಲ್ಲವೇನು?"

"ಕೇಳದೇ ಏನು. ಅವರ ವಿಷಯವನ್ನು ನೀವರಿಯರಾ? ಅವರು ಯಾವಾಗಲೂ ಸಂಗೀತಪ್ರಿಯರು. ತಂಬೂರಿಯನ್ನು ಹಿಡಿದು ನಾನೊ

ಬ್ಬಳೇ ಹಾಡುತ್ತೇನೆ. ಅದು ಅಷ್ಟು ಶೋಭಿಸುವುದಿಲ್ಲವೆಂದು ನನ್ನ ಭಾವನೆ. ಪ್ರಭುಗಳೇನೋ ಅದನ್ನೇ ಮೆಚ್ಚುತ್ತಾರೆ. ನಾನೂ ಮೆಚ್ಚುತ್ತೇನೆ."

"ತಂಬೂರಿಯನ್ನು ತರಿಸಿಕೊಡಲೇ ?" ಎಂದು ಮಹಾರಾಣಿಯು ಕೇಳಿದಳು.

"ದೇವಿ ! ಇಂದು ಕ್ಷಮಿಸಬೇಕು. ನಾಳೆ ನಾನೇ ನನ್ನ ತಂಬೂರಿಯನ್ನು ತಂದು ತಮ್ಮ ಸೇವೆಮಾಡುತ್ತೇನೆ."

"ಇಂದೇಕೆ ಹಾಡಲಾಗುವುದಿಲ್ಲ ತಂಗಿ ? ಇಂದೇ ನಿನ್ನ ಸಂಗೀತವನ್ನು ಕೇಳಬೇಕೆನ್ನಿಸುತ್ತದೆ."

"ದೇವಿ ! ಇಂದು ತಮ್ಮ ಪ್ರೇಮದಿಂದ ನಾನು ಪುಲಕಾಂಕಿತಳಾಗಿದ್ದೇನೆ ಕಂಠವು ಗದ್ಗದಿತವಾಗಿದೆ. ನನ್ನ ಕಂಠದಲ್ಲಿ ಧ್ವನಿಯೇಳುವಂತಿಲ್ಲ" ಎಂದು ಹೇಳಿದಳು. ಮಗುವು ತಾಯಿಯನ್ನಪ್ಪುವಂತೆ ಮಹಾರಾಣಿಯು ಮಲ್ಲಿಗೆಯ ಗಲ್ಲವನ್ನು ಹಿಡಿದು ಮುಖವನ್ನೆತ್ತಿ ಮುತ್ತಿಟ್ಟಳು. ಮಲ್ಲಿಗೆಯನ್ನು ಅವಳ ಅಂತಃಪುರಕ್ಕೆ ಕಳುಹಿಸಿ ಕೊಟ್ಟಳು.

ಮಲ್ಲಿಗೆಯು ತನ್ನ ಅಂತಃಪುರಕ್ಕೆ ಹೋಗಿ ತನ್ನ ಅಂತಃಗೃಹದಲ್ಲಿ ಅಸ್ತ್ರವ್ಯಸ್ತವಾಗಿ ಮಲಗಿದಳು. ಆಗ ಅವಳ ಅವಸ್ಥೆಯು ಏನಾಗಿದ್ದಿತೆಂಬುದನ್ನು ಅವಳೇ ಅರಿಯಲಾರದೇ ಹೋದಳು. ಆ ಮಹಾರಾಣಿಯ ಔದಾರ್ಯವು ತನ್ನ ಮಾತೃಪ್ರೇಮಕ್ಕಿಂತಲೂ ಅತಿಶಯವಾದುದೆಂದು ಅವಳಿಗೆ ಬೋಧೆಯಾಯಿತು. ಮಹಾರಾಣಿಯ ಪ್ರತಿಯೊಂದು ಮಾತನ್ನೂ ನೆನೆನೆನೆದು ಪುನಃಪುನಃ ಹರ್ಷಪುಲಕಿತಳಾದಳು.

ಆ ರಾತ್ರಿ ಮಲ್ಲಿಗೆಯು ಊಟಮಾಡಲಿಲ್ಲ. ತನ್ನ ಮೈಮೇಲಿದ್ದ ಆಭರಣ ದುಕೂಲಗಳನ್ನೆಲ್ಲಾ ಬಿಚ್ಚಿಟ್ಟು ಬೇರೆ ವಸ್ತ್ರಗಳನ್ನು ಧರಿಸಿದಳು. ಅಷ್ಟು ಹೊತ್ತಿಗೆ ರಾತ್ರಿ ಸುಮಾರು ಹತ್ತು ಘಂಟೆಯಾಗಿರಬಹುದು. ಚಿಕ್ಕಪ್ಪಾಜಿಯು ಮಲ್ಲಿಗೆಯ ಅಂತಃಪುರಕ್ಕೆ ಬಂದನು. ಅಂದಿನ

ಮಲ್ಲಿಗೆಯ ಅವಸ್ಥೆಯು ಏನೋ ಒಂದು ವಿಧವಾಗಿದ್ದಿತು. ಚಿಕ್ಕಪ್ಪಾಜಿಯು 'ಇದೇಕೆ ಇಂದು ಈ ಮಲ್ಲಿಗೆಯು ಹೀಗಾಗಿದ್ದಾಳೆ' ಎಂದುಕೊಂಡನು. ಮಲ್ಲಿಗೆಯಪಕ್ಕದಲ್ಲಿ ಕುಳಿತುಕೊಂಡು

"ಮಲ್ಲಿಗೆ, ಸಂಗೀತವನ್ನು ಹಾಡುವೆಯಾ ?" ಎಂದು ಕೇಳಿದನು.

"ಪ್ರಭುವೇ ಕ್ಷಮಿಸಬೇಕು. ಇಂದು ನನಗೆ ಹಾಡುವ ಶಕ್ತಿಯಿಲ್ಲ" ಎಂದು ಹೇಳಿದಳು.

ಚಿಕ್ಕಪ್ಪಾಜಿಯು ಎಷ್ಟೋ ಮಾತನಾಡಿಸಿದನು ಮಲ್ಲಿಗೆಯು ವಿನಯದಿಂದ ಉತ್ತರಕೊಡುತ್ತಿದ್ದಳು. ಆದರೆ ಏನೋ ಮಾತು, ಏನೋ ಉತ್ತರ. ಅವಳ ಹೃದಯದಲ್ಲಿ ಮಹಾರಾಣಿಯಪ್ರೇಮವು ತುಂಬಿದ್ದಿತು. ಚಿಕ್ಕಪ್ಪಾಜಿಯ ಪ್ರೇಮವನ್ನು ಅದರೊಂದಿಗೆ ಬೆರೆಸಿಕೊಳ್ಳುವ ಶಕ್ತಿಯು ಮಲ್ಲಿಗೆಗೆ ಇಲ್ಲದೇಹೋಯಿತು. ಹಾಗೆಯೇ ರಾತ್ರಿಯು ಕಳೆಯಿತು. ಆ ರಾತ್ರಿ ಮಲ್ಲಿಗೆಯು ಅನೇಕ ಸುಖಸ್ವಪ್ನಗಳನ್ನು ಕಂಡಳು.

## ೧೬

ಮಾರನೆಯ [illegible]ಸ ಪ್ರಾತಃಕಾಲದಿಂದಲೂ ಮಹಾರಾಣಿಯು ಎಷ್ಟುಹೊತ್ತಿಗೆ ಹೇಳಿಕಳುಹಿಸುವಳೋ ಎಂದು ಮಲ್ಲಿಗೆಯು ಕಾದಿದ್ದಳು. ಮಧ್ಯಾಹ್ನ ಸುಮಾರು ನಾಲ್ಕು ಘಂಟೆಯ ಸಮಯದಲ್ಲಿ ಮಹಾರಾಣಿಯವರ ಅಂತಃಪುರದಿಂದ ಚೇಟಿಯು ಬಂದು ಚಿಕ್ಕರಾಣಿಗೆ ವಂದಿಸಿ ಮಹಾರಾಣಿಯವರ ಅಂತಃಪುರಕ್ಕೆ ಬರಬೇಕೆಂದು ಕರೆಯಿತ್ತಳು. ಮಲ್ಲಿಗೆಯು ಸಂಭ್ರಮದಿಂದ ಅಲಂಕರಿಸಿಕೊಂಡು ತನ್ನ ತಂಬೂರಿಯನ್ನು ಆ ಚೇಟಿಯ ಕೈಗೆ ಕೊಟ್ಟು ತೆಗೆಸಿಕೊಂಡು ಮಹಾರಾಣಿಯ

ಅಂತಃಪುರಕ್ಕೆ ಹೋದಳು. ಮಹಾರಾಣಿಯು ಮಲ್ಲಿಗೆಯನ್ನು ಆದರ ದಿಂದ ಕುಳ್ಳಿರಿಸಿಕೊಂಡಳು. ಅಂದು ಆ ಅಂತಃಪುರದಲ್ಲಿ ಸಂಗೀತಕ್ಕೆ ತಕ್ಕ ವ್ಯವಸ್ಥೆಗಳೆಲ್ಲಾ ಅಣಿಮಾಡಲ್ಪಟ್ಟಿದ್ದವು. ಮಹಾರಾಣಿಯು ಮಹಾರಾಜರಿಗೆ ಆ ದಿನ ತಮ್ಮ ಅಂತಃಪುರಕ್ಕೆ ಬಂದೇಬರಬೇಕೆಂದು ಸಖಿಯ ಮುಖಾಂತರ ಹೇಳಿಕಳುಹಿಸಿದ್ದಳು. ಮಲ್ಲಿಗೆಯನ್ನು ಅಂತಃ ಪುರದ ಹೊರ ಹಜಾರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಸಿದ್ಧವಾಗಿದ್ದ ಸದರಿನಮೇಲೆ ಮಲ್ಲಿಗೆಯನ್ನು ಕುಳ್ಳಿರಿಸಿದಳು. ತಾನೂ ಎದುರಿಗೆ ಕುಳಿತುಕೊಂಡಳು. ಅರಮನೆಯಲ್ಲಿ ಅಂದು ಚಿಕ್ಕರಾಣಿಯವರ ಸಂಗೀತವಾಗುವುದೆಂದು ಹೆಂಗಸರಿಗೆಲ್ಲಾ ತಿಳಿದುಹೋಗಿದ್ದಿತು. ಅನೇಕರು ಬಂದು ಹೊರಗಿನ ಹಜಾರದಲ್ಲಿಯೂ ವಾತಾಯನಗಳ ಸಮೀಪದಲ್ಲಿಯೂ ಆಸಕ್ತಿಯಿಂದ ಕಾದುಕುಳಿತಿದ್ದರು. ಸಮಯಕ್ಕೆ ಸರಿಯಾಗಿ ಮಹಾರಾಜನ ಸವಾರಿಯು ಆ ಅಂತಃಪುರಕ್ಕೆ ಬಂದಿತು: ಸವಾರಿಯು ಬರುತ್ತಿದೆಯೆಂದು ಸಖಿಯು ಮಹಾರಾಣಿಗೆ ಸನ್ನೆಮಾಡಿ ತಿಳಿಸಿದಳು. ಮಹಾರಾಜನು ನಿಧಾನವಾಗಿ ಅಡಿಯಿಡುತ್ತಾ ಅಂತಃ ಪುರದ ಒಳಹಜಾರವನ್ನು ಪ್ರವೇಶಿಸಿದನು ದೊಡ್ಡರಾಣಿಯು ಎದ್ದು ನಿಂತಳು. ಮಲ್ಲಿಗೆಯೂ ಎದ್ದು ನಿಂತಳು. ರಾಜನು ಆ ಅಂತಃಪುರ ದಲ್ಲಿ ಅವರಿಬ್ಬರನ್ನೂ ಕಂಡು ಸ್ತಂಭಿತನಾದನು. ಅವನು ಮಲ್ಲಿಗೆಯನ್ನು ಅಲ್ಲಿ ಕಾಣಬಹುದೆಂದು ಕನಸಿನಲ್ಲಿಯೂ ನೆನೆದಿರಲಿಲ್ಲ ಅವನಿಗೆ ಮಹಾ ರಾಣಿಯ ಅಂತಃಪುರದಲ್ಲಿ ಸಂಗೀತವೆಂದರೆ ಏನೂ ಅರ್ಥವಾಗಿರ ಲಿಲ್ಲ. ಮಹಾರಾಣಿಯು ಏಕೆ ತನ್ನನ್ನು ಬರಲೇಬೇಕೆಂದು ಹೇಳಿ ಕಳುಹಿಸಿದ್ದಳೋ ಅದು ಅವನಿಗೆ ಅರ್ಥವಾಗಿರಲಿಲ್ಲ. ಈಗ ತಂಬೂರಿ ಯೊಡನೆ ಸದರಿನಮೇಲೆ ಕುಳಿತಿರುವ ಮಲ್ಲಿಗೆಯನ್ನು ನೋಡಿ ಅವನು ಅಚ್ಚರಿಗೊಂಡನು. ರಾಣಿಯು ರಾಜನಿಗೆ ಹಸ್ತಲಾಘವವನ್ನು ನೀಡಿ ರೇಶಿಮೆಯ ಮೆತ್ತೆಯಮೇಲೆ ಕುಳ್ಳಿರಿಸಿದಳು. ಮಹಾರಾಜನು ದಿಂಬ ನ್ನೊರಗಿಕೊಂಡು ಕುಳಿತನು. "ದೇವಿಯವರೇ ಈ ಮಲ್ಲಿಗೆಯು ಇಲ್ಲಿಗೆ

ಹೇಗೆ ಬಂದಳು? ಇವಳ ಸಂಗೀತವನ್ನು ತಮ್ಮ ಅಂತಃಪುರದಲ್ಲಿ ಹೇಗೆ ಏರ್ಪಡಿಸಿದಿರಿ? ನನ್ನನ್ನು ಏತಕ್ಕೆ ಕರೆಸಿದಿರಿ? ಇವೆಲ್ಲವೂ ಆಶ್ಚರ್ಯವಾಗಿದೆ" ಎಂದು ಹೇಳಿದನು. ಮಲ್ಲಿಗೆಯು ರಾಣಿಯವರ ಅಂತಃಪುರದಲ್ಲಿ ಮಹಾರಾಜನನ್ನು ಕಂಡು ಲಜ್ಜಿತಳಾದಳು. ಹಿಂದಿನ ದಿನ ತಾನು ಮಹಾರಾಣಿಯವರ ಭೇಟಿಮಾಡಿದುದನ್ನು ರಾಜರಿಗೆ ಹೇಳದೆ ವಂಚನೆ ಮಾಡಿದೆನೆಂದು ಅವಳಿಗೆ ಮತ್ತೂ ನಾಚಿಕೆಯಾಯಿತು. ಮಹಾರಾಣಿಯು "ಈ ಮಲ್ಲಿಗೆಯು ಈ ಅಂತಃಪುರಕ್ಕೆ ಬಂದಾಗಿನಿಂದಲೂ ನೋಡುವ ಕುತೂಹಲವಿದ್ದಿತು. ಇವಳ ಸಂಗೀತ ಕೇಳಬೇಕೆಂಬ ಆಸೆಯಿದ್ದಿತು ಇವೆರಡನ್ನೂ ಮಹಾರಾಜರ ಸಮ್ಮುಖದಲ್ಲಿಯೇ ಮಾಡಬೇಕೆಂಬ ಕುತೂಹಲವಿದ್ದಿತು. ಅದನ್ನು ಬಹು ಪ್ರಯಾಸಪಟ್ಟು ಇಂದು ಸಾಧಿಸಿದ್ದೇನೆ. ಇದರಿಂದ ನಾನು ನಿಮ್ಮಿಬ್ಬರನ್ನೂ ಗೆದ್ದಂತೆ ಆಗಲಿಲ್ಲವೆ?" ಎಂದು ಹೇಳಿ ನಕ್ಕಳು. ರಾಜನು ಸಣ್ಣ ನಗುವನ್ನು ನಕ್ಕು "ನನಗೂ ಆ ಅಭಿಲಾಷೆಯಿದ್ದಿತು" ಎಂದು ಹೇಳಿ ಲಜ್ಜಿತನಾಗಿ ಮಲ್ಲಿಗೆಕಡೆ ತಿರುಗಿ "ಮಲ್ಲಿಗೆ, ನೀನು ಮೊದಲೇ ರಾಣಿಯವರ ಆಹ್ವಾನವನ್ನು ಪಡೆದಿದ್ದೀಯೆ. ನಾನು ಇಲ್ಲಿ ಆಗಂತುಕನಾಗಿ ಬಂದಿದ್ದೇನೆ. ನಿನ್ನ ಸಂಗೀತವು ಆರಂಭವಾಗಲಿ. ಅದನ್ನು ಕೇಳಿ ಬಹುದಿನಗಳಾದವು ಇಂದು ಮಹಾರಾಣಿಯವರ ಸನ್ನಿಧಾನದಲ್ಲಿ ನಿನ್ನ ಗಾನಸುಧೆಯನ್ನು ಅನುಭವಿಸುವುದು ಅತ್ಯಂತ ಸುಖವೆಂದು ಭಾವಿಸುತ್ತೇನೆ" ಎಂದು ಹೇಳಿದನು. ಮಲ್ಲಿಗೆಗೆ ಇದೆಲ್ಲವೂ ಒಂದು ವಿಚಿತ್ರ ಪ್ರಪಂಚದಂತೆ ಬೋಧವಾಯಿತು. ಈ ಸನ್ನಿವೇಶದಲ್ಲಿ ಮಲ್ಲಿಗೆಯು ಲಜ್ಜಿತಳಾಗಿದ್ದರೂ ಮಹಾರಾಣಿಯವರ ಸನ್ನಿಧಾನದಲ್ಲಿ ಗಾನಕಲೆಯಿಂದ ಮಹಾರಾಜರನ್ನು ಮೆಚ್ಚಿಸಬೇಕೆಂಬ ಕುತೂಹಲವು ಉತ್ಪನ್ನವಾಯಿತು. ಅವಳು ಸದರಿನ ಮೇಲೆ ಕುಳಿತುಕೊಂಡು ತಂಬೂರಿಯನ್ನು ಮೀಟಲಾರಂಭಿಸಿದಳು. ಒಂದೆರಡು ಕ್ಷಣಗಳಲ್ಲಿ ತಂಬೂರಿಯ ಸ್ವರವು ಅಂತಃಪುರವನ್ನೆಲ್ಲಾ ತುಂಬಿತು. ಮಲ್ಲಿಗೆಯ ಕಂಠದಿಂದ ದಿವ್ಯಗಾನವು

ಹೊರಟಿತು. ಮಲ್ಲಿಗೆಯು ಆರಂಭದಲ್ಲಿ ಕೊಂಚ ಕೊಂಚ ತಲ್ಲಣಿಸುತ್ತಿದ್ದಳು. ಹತ್ತಿಪ್ಪತ್ತು ನಿಮಿಷಗಳು ಕಳೆದ ತರುವಾಯ ಮಲ್ಲಿಗೆಯು ತನ್ನ ಪೂರ್ಣಸ್ವರೂಪವನ್ನು ಪಡೆದಳು. ಆ ಮಾಧುರ್ಯದಲ್ಲಿ ಆ ವಿಲಾಸದಲ್ಲಿ ಆ ಮನೋಹರವಾದ ಸನ್ನಿವೇಶದಲ್ಲಿ ಮಲ್ಲಿಗೆಯು ಮೈಮರೆತಳು. ರಾಜನೂ ಮಹಾರಾಣಿಯೂ ಅಪೂರ್ವ ಆನಂದದಲ್ಲಿ ಮುಳುಗಿದವರಾದರು. ಸುಮಾರು ಒಂದು ಜಾವ ಹೊತ್ತು ಮಲ್ಲಿಗೆಯ ಸಂಗೀತವಾಯಿತು ಮಲ್ಲಿಗೆಯು ಬಳಲಿದ್ದಾಳೆಂದು ಮಹಾರಾಣಿಗೆ ತೋರಿತು. ಅವಳು ಬಂದು ಮಲ್ಲಿಗೆಯ ಪಕ್ಕದಲ್ಲಿ ಕುಳಿತುಕೊಂಡು, ಮಲ್ಲಿಗೆಯ ಬೆನ್ನಿನ ಮೇಲೆ ಮೃದುವಾಗಿ ತಟ್ಟುತ್ತಾ "ಭಲಾ, ಚಿಕ್ಕ ರಾಣಿಯೇ, ನೀನು ಸರಸ್ವತಿಯ ಅವತಾರದಂತಿದ್ದೀಯೆ. ನಿನಗೆ ಎಲ್ಲ ಪುರಸ್ಕಾರಗಳೂ ಸಲ್ಲುತ್ತವೆ. ನಂದನವನದ ದಿವ್ಯ ಕುಸುಮದಂತಹ ನಿನ್ನ ರೂಪಿಗೂ ಅಮೃತಧಾರೆಯಂತಹ ನಿನ್ನ ಕಂಠಸ್ವರಕ್ಕೂ ಈ ಜಗತ್ತಿನಲ್ಲಿ ಸೋಲದವರಾರು ? ನಿಜವಾಗಿಯೂ ನೀನು ಜಗನ್ಮೋಹಿನಿ" ಎಂದು ಹೇಳುತ್ತಾ ತಾನು ಕಂಠದಲ್ಲಿ ಧರಿಸಿದ್ದ ರತ್ನಹಾರವನ್ನು ತೆಗೆದು ಮಲ್ಲಿಗೆಯ ಕೊರಳಿಗೆ ಹಾಕಿದಳು.

ಮಲ್ಲಿಗೆಯ ಸಂಗೀತವು ಪೂರೈಸಿತು. ಚಿಕ್ಕಪ್ರಾಜಿಯು ರಾಣಿಯ ಮಾತುಗಳನ್ನು ಕೇಳುತ್ತಿದ್ದನು. ಅವಳ ಪ್ರೀತಿ ಔದಾರ್ಯಗಳನ್ನು ನೋಡಿ ಆಶ್ಚರ್ಯಚಕಿತನಾದನು. ಮಹಾರಾಣಿಯನ್ನು ಕುರಿತು ಚಿಕ್ಕಪ್ರಾಜಿಯು "ದೇವಿ, ದಿವ್ಯವಾದ ಸಂಗೀತ" ಎಂದು ಹೇಳಿದನು. ಮಲ್ಲಿಗೆಯು ತನ್ನ ಅಂತಃಪುರಕ್ಕೆ ಹೋಗಲು ಅರಸಿಯ ಅನುಮತಿಯನ್ನು ಬೇಡಿದಳು. ರಾಣಿಯು ಇಬ್ಬರು ಪರಿಚಾರಿಕೆಯರನ್ನು ಕರೆದು ಚಿಕ್ಕ ರಾಣಿಯವರನ್ನು ಅವರ ಅಂತಃಪುರಕ್ಕೆ ಕರೆದೊಯ್ದು ಬಿಟ್ಟು ಬನ್ನಿರಿ ಎಂದು ಹೇಳಿದಳು. ಸಖಿಯರು ತಂಬೂರಿಯನ್ನೂ ವೀಳಯದ ತಟ್ಟೆಯನ್ನೂ ತೆಗೆದುಕೊಂಡು ಹೊರಟರು. ರಾಣಿಯು ಮಲ್ಲಿಗೆಯ ಕೈ ಹಿಡಿದು, ಅಂತಃಪುರದ ಹೊರಬಾಗಿಲಿನವರೆಗೆ ಸಾಗು ಕಳುಹಿಸಲು

ಹೋದಳು. ಆ ಹಜಾರವನ್ನು ಬಿಟ್ಟು ಹೋಗುವಾಗ ಮಲ್ಲಿಗೆಯು ರಾಜನ ಕಡೆ ಓರಿಗಣ್ಣಿನಿಂದ ತಿರುಗಿ ನೋಡಿ, ಸಣ್ಣ ನಗುವನ್ನು ನಕ್ಕು ಹೊರಟು ಹೋದಳು. ಆ ನಗುವಿನ ಮಾಧುರ್ಯವು ಗಾನ ಮಾಧುರ್ಯಕ್ಕಿಂತಲೂ ಅತಿಶಯವಾಗಿದ್ದಿತು. ಮಲ್ಲಿಗೆಯೂ ಮಹಾರಾಣಿಯೂ ಹೊರ ಹಜಾರಕ್ಕೆ ಹೊರಟಾಗ ರಾಜನೊಬ್ಬನೇ ಆ ಅಂತಃಪುರದ ಕೋಣೆಯಲ್ಲಿ ಏಕಾಕಿಯಾಗಿ ಉಳಿದನು. ಅವನ ಮನಸ್ಸಿನಲ್ಲಿ ಆಶ್ಚರ್ಯ ಆನಂದಗಳು ಮೇಲಾಟವಾಡುತ್ತಿದ್ದವು. ಮಹಾರಾಣಿಯು ಮಲ್ಲಿಗೆಯನ್ನು ಇಷ್ಟೊಂದು ಪ್ರೀತಿಸುವಳೆಂದು ಅವನೆಂದೂ ತಿಳಿದಿರಲಿಲ್ಲ. ಈ ಮಲ್ಲಿಗೆ ಮಹಾರಾಣಿಯ ಪರಿಚಯವು ಇಷ್ಟೊಂದು ಬೆಳೆದಿದೆ ಎಂದು ಅವನು ಅರಿತೇ ಇರಲಿಲ್ಲ. ಎಲ್ಲದಕ್ಕಿಂತಲೂ ಅತಿಶಯವಾಗಿ ಮಲ್ಲಿಗೆಯು ಮಹಾರಾಣಿಯವರ ಪರಿಚಯವನ್ನು ತನ್ನಲ್ಲಿ ಇಷ್ಟು ನಿಗೂಢವಾಗಿ ಇಟ್ಟಿರುವುದಂತೂ, ಮಹಾರಾಜನಿಗೆ ಆಶ್ಚರ್ಯವುಂಟಾಯಿತು.

ರಾಣಿಯು ಪುನಃ' ಅಂತಃಪುರಕ್ಕೆ ಬರುತ್ತಲೇ ಅವಳ ಅಪ್ಪಣೆಯನ್ನು ಪಡೆದು ತಾನು ಇಲ್ಲಿಂದ ಹೊರಡಬಹುದೇ ಎಂದು ಆಲೋಚಿಸದನು. ಇಲ್ಲಿಂದ ಎಲ್ಲಿಗೆ ಹೋಗಬೇಕು? ಇಲ್ಲಿಂದ ಈಗ ಹೊರ ಹೊರಟರೆ ತಾನು ಮಲ್ಲಿಗೆಯ ಅಂತಃಪುರಕ್ಕೆ ಹೋಗುವದೇನೋ ಖಂಡಿತ. ಅದರಿಂದ ಮಹಾರಾಣಿಯ ಮನಸ್ಸು ನೋಯದಿರುವುದೇ? ಎಂದು ಭಯಭಟ್ಟನು. ಅಷ್ಟರಲ್ಲಿ ರಾಣಿಯು ಆ ಒಳಹಜಾರಕ್ಕೆ ಬಂದು ಚಿಕ್ಕಪ್ಪಾಜಿಯ ಪಕ್ಕದಲ್ಲಿ ಕುಳಿತುಕೊಂಡು ಮಹಾರಾಜರಿಗೆ ಆನಂದವಾಗಲೆಂದೇ ನಾನು ಈ ಸಂಗೀತವನ್ನೇರ್ಪಡಿಸಿದುದು ಎಂದು ಹೇಳಿದಳು. ರಾತ್ರಿ ಭೋಜನದ ವೇಳೆಯಾಗಿದೆಯೆಂದು ತನ್ನ ಅಂತಃಪುರದಲ್ಲಿಯೇ ಭೋಜನಕ್ಕೇಳಬೇಕೆಂದು ಮಹಾರಾಜನನ್ನು ಪ್ರಾರ್ಥಿಸಿದಳು. ಮಹಾರಾಜನು ಸಂತೋಷದಿಂದ ಅಂಗೀಕರಿಸಿದನು. ಮಹಾರಾಣಿಯ ಇಷ್ಟದಂತೆ ಆ ರಾತ್ರಿ ಭೋಜನವನ್ನು ತೀರಿಸಿ ಆ ಅಂತಃಪುರದಲ್ಲಿಯೇ

ಇದ್ದನು. ಆ ರಾತ್ರಿಯೆಲ್ಲಾ ಅವರಿಬ್ಬರೂ ಮಲ್ಲಿಯ ವಿಚಾರವಾಗಿಯೇ ಮಾತನಾಡುತ್ತಿದ್ದರು. ಗರಳಪುರಿಯಲ್ಲಿ ಮಲ್ಲಿಗೆಯು ಮಾಡಿದ ಮಹಾ ದಾನದ ವಿಚಾರವನ್ನು ರಾಣಿಯೇ ಎತ್ತಿದಳು. ರಾಜನು ಆ ದಾನದ ಪರಿಯನ್ನು ಬಣ್ಣಿಸಿ ಶ್ಲಾಘಿಸಿದನು ರಾಣಿಯು "ಮಹಾರಾಜನೇ ಆ ಮಹಾದಾನವು ನಿಷ್ಫಲವಾಗಲಿಲ್ಲ. ಅವಳು ಮಹಾರಾಜರ ಸಾನ್ನಿಧ್ಯ ವನ್ನು ಪಡೆದು ದಾನದ ಫಲವನ್ನು ಪ್ರತ್ಯಕ್ಷವಾಗಿಯೇ ಅನುಭವಿಸಿದಂತಾ ಯಿತು" ಎಂದು ಹೇಳಿದಳು. ಅದರಲ್ಲಿ ಹಾಸ್ಯವೂ ತೋರಿದ್ದಿತು. ರಾಜನು ಸ್ವಲ್ಪ ಲಜ್ಜಿತನಾದನು. ಪುನಃ ಮಹಾರಾಣಿಯೇ ಮಾತನೆತ್ತಿ ದಳು. "ಮಹಾಪ್ರಭುಗಳೇ ಆ ಮೈಸೂರಿನ ಚಾಮುಂಡೀ ಬೆಟ್ಟದ ಜಂಗಮನಾರು ?" ಎಂದು ಕೇಳಿದಳು

ಅವನು ಮಹಾ ಮಹಿಮನೆಂದೂ ಯೋಗ ಸಿದ್ಧಿಗಳೆಲ್ಲವೂ ಆತನಿಗೆ ಇದೆಯೆಂದೂ, ಅವನು ನಿರೀಹಸತ್ಪುರುಷನೆಂದೂ, ರಾಜನು ಹೇಳಿದನು. ಅಷ್ಟೇ ಅಲ್ಲದೆ, ಮಹಾರಾಣಿಯನ್ನೂ ಒಮ್ಮೆ ಮೈಸೂರಿಗೆ ಕರೆದೊಯ್ದು — ಆ ಜಂಗಮನ ದರ್ಶನಮಾಡಿಸ ಬೇಕೆಂದಿರುವುದಾಗಿ ರಾಜನು ಹೇಳಿದನು. "ಇಲ್ಲ; ಪ್ರಭುಗಳೇ ಈ ಜಗತ್ತಿನಲ್ಲಿ ಶ್ರೀರಂಗನಾಥನಿಗಿಂತಲೂ ದೊಡ್ಡ ದೇವರಿಲ್ಲವೆಂದೂ, ತಮಗಿಂತಲೂ ಮಹಾಪುರುಷರಿಲ್ಲವೆಂದೂ ನಾನು ದೃಢವಾಗಿ ನಂಬಿ ದ್ದೇನೆ. ನಾನೇಕೆ ಜಂಗಮನ ದರ್ಶನ ಮಾಡಬೇಕು? ಅವನಿಂದ ಯಾವ ವರವನ್ನು ಪಡೆಯಬೇಕು ? ನಿಮಗಿಂತಲೂ ಮಹತ್ತರವಾದ ವರವಾವುದಿದೆ" ಎಂದು ಕೇಳಿದಳು. ಮಹಾರಾಜನು ಪುನಃ ಅಭಿಭೂತ ನಾಗಿ ರಾಣಿಯನ್ನು ಆಲಿಂಗಿಸಿ ಕಪೋಲಗಳನ್ನು ಚುಂಬಿಸಿದನು.

ರಾಣಿಯು "ಪ್ರಭುಗಳೇ ! ಮೈಸೂರಿನಿಂದ ತಮ್ಮನ್ನು ಮಂತ್ರಿಯು ಕರೆತಂದನಷ್ಟೆ. ಈ ಸಮಾಚಾರವನ್ನು ಅರಮನೆಯ ಪರಿಜನರು ನಾನಾ ವಿಧವಾಗಿ ಮಾತನಾಡಿಕೊಳ್ಳುತ್ತಾರೆ. ಇದರ ನಿಜಾಂಶವನ್ನು ತಿಳಿದುಕೊಳ್ಳಬೇಕೆಂದು ನಾನೂ ಕುತೂಹಲವುಳ್ಳವನಾಗಿದ್ದೇನೆ"

ಎಂದಳು. ಚಿಕ್ಕಪ್ಪಾಜಿಯು ಸಾಲಿಗೆಯಿಂದ ತುಟಿಗಳನ್ನು ಸವರಿಕೊಳ್ಳುತ್ತಾ "ದೇವಿ! ಅದೆಲ್ಲಾ ಜನರ ಭ್ರಾಂತಿ! ಜಂಗಮದೇವನು ಮೈಸೂರಿನ ತ್ರಿಣೇಶ್ವರ ದೇವಾಲಯದ ಗುಡಿ ಗೋಪುರಗಳನ್ನು ಕಟ್ಟಿಸಬೇಕೆಂದು ಪ್ರಾರ್ಥನೆ ಮಾಡಿದನು. ನಾನು ವಚನವಿತ್ತು ಆ ಕಾರ್ಯವನ್ನು ಶ್ರದ್ಧೆಯಿಂದ ನಡೆಸುವಂತೆ ಅಧಿಕಾರಿಗಳಿಗೆ ಅಪ್ಪಣೆಯಿತ್ತೆನು. ರಾಜಧಾನಿಯಲ್ಲಿರುವ ವೈಷ್ಣವರೆಲ್ಲರೂ ಗುಲ್ಲೆಬ್ಬಿಸಿದರು. ನಮ್ಮ ರಾಜ್ಯವನ್ನು ಬಿಟ್ಟುಹೋಗುವುದಾಗಿ ಹಟತೊಟ್ಟರು. ಈ ಸಮಾಚಾರವನ್ನು ಆರಾಧ್ಯನು, ತಂದು ನನ್ನೊಡನೆ ತಿಳಿಸಿದನು. ಆ ವೈಷ್ಣವರನ್ನು ಸಮಾಧಾನಗೊಳಿಸಲು ಇಲ್ಲಿಗೆ ಹಿಂತಿರುಗಿ ಬಂದೆ. ಇಷ್ಟೇ ನಿಜವಾದ ವೃತ್ತಾಂತ."

"ಹಾಗಾದರೆ ಮಹಾರಾಜರು ಶಿವಭಕ್ತರಾದರೆಂಬುದು ಸುಳ್ಳೆ?"

"ಶುದ್ಧ ಸುಳ್ಳು, ಪರಮೇಶ್ವರನಲ್ಲಿ ಭಕ್ತಿಯಿದ್ದ ಮಾತ್ರಕ್ಕೆ ಶಿವಭಕ್ತರಾಗುವರೇ? ಅದೆಲ್ಲಾ ವೈಷ್ಣವ ಆಚಾರ್ಯರ ಕುಕಲ್ಪನೆಗಳು."

"ಪ್ರಭುವೇ, ಈ ಮಲ್ಲಿಗೆಯು, ಚಿಕ್ಕರಾಣಿಯು, ಶಿವಭಕ್ತಳೆಂಬುದು ನಿಜವೇ?"

"ಶುದ್ಧ ಸುಳ್ಳು. ಕಟ್ಟು ಕಥೆ. ಅವಳು ಪರಮೇಶ್ವರನ ಭಕ್ತಳು. ಗರಳಪುರಿಯ ಶ್ರೀಕಂಠೇಶ್ವರನನ್ನು ಪ್ರತ್ಯಕ್ಷ ದೇವರೆಂದು ನಂಬಿದವಳು. ಅಷ್ಟೆ."

ಅಲ್ಲಿಗೆ ಆ ಸತಿಪತಿಯರ ಮಾತು ಪೂರೈಸಿತು. ಇಬ್ಬರಿಗೂ ಒಂದೊಂದು ವಿಧವಾಗಿ ಸಮಾಧಾನವಾಯಿತು ಇಬ್ಬರಲ್ಲಿ ರಾಜನು ಹೆಚ್ಚು ಸಂತುಷ್ಟನಾದನು. ಏಕೆಂದರೆ ರಾಣಿಯು ಮಲ್ಲಿಗೆಯ ಗುಣಗಳನ್ನು ಮೆಚ್ಚಿದ್ದಾಳೆ. ಅದರಿಂದ ರಾಜನಿಗೆ ಉಂಟಾದ ಸಮಾಧಾನವು ಮತ್ತಾವುದರಿಂದಲೂ ಉಂಟಾಗುತ್ತಿರಲಿಲ್ಲ. ರಾಜನು ಉದಯಕಾಲದಲ್ಲಿ ರಾಣಿಯ ಅಂತಃಪುರದಿಂದ ತನ್ನ ಅಂತಃಪುರಕ್ಕೆ ಎದ್ದು ಹೊರಟು ಹೋದನು.

ಚಿಕ್ಕಪ್ಪಾಜಿಯು ಮಲ್ಲಿಗೆಯ ಅಂತಃಪುರಕ್ಕೆ ಹೋಗಿ ದರ್ಶನ ವಿತ್ತಾಗ ಮಲ್ಲಿಗೆಯು ಪುಷ್ಪಹಾರವನ್ನು ಕಟ್ಟುತ್ತಿದ್ದಳು. ರಾಜನು ಮಲ್ಲಿಗೆಯನ್ನು ಕಂಡು "ಮಲ್ಲಿಗೆ ಇದೇನು ? ಗಾಯಕಿಯ ಪಾತ್ರದಿಂದ ಹೂವಾಡಿಗಿತ್ತಿಯ ಪಾತ್ರಕ್ಕೆ ಅಣಿ ಮಾಡುತ್ತಿರುವೆ" ಎಂದು ಹಾಸ್ಯ ಮಾಡಿದನು.

"ಪ್ರಭುವೇ, ಈ ಹಾರವನ್ನು ಮಹಾರಾಣಿಗೆ ಒಪ್ಪಿಸಲು ನಾನೇ ಕೈಯಿಂದ ಕಟ್ಟುತ್ತಿದ್ದೇನೆ. ಅವರು ನನಗೆ ಆಭರಣಗಳನ್ನೂ ಪೀತಾಂಬರವನ್ನೂ ಪ್ರೀತಿಯಿಂದ ಕೊಟ್ಟರು. ನಾನು ಅವರಿಗೆ ಪ್ರತಿಯಾಗಿ ಏನನ್ನೂ ಕೊಡಬೇಡವೆ ?" ಎಂದು ಹೇಳುತ್ತಾ ಆ ಹಾರ ವನ್ನೆತ್ತಿ ರಾಜನಿಗೆ ತೋರಿಸಿದಳು.

"ಮಲ್ಲಿಗೆ, ನೀನು ಗಾಯಕಿ. ಮನೋಹರವಾದ ಸಂಗೀತವನ್ನು ಹಾಡಿ ಪುರಸ್ಕಾರವನ್ನು ಪಡೆದುಕೊಂಡೆ. ರಾಣಿಗೇಕೆ ಪುರಸ್ಕಾರ ?" ಎಂದು ಕೇಳಿದನು.

ಮಲ್ಲಿಗೆಯು "ನಾಥಾ ! ಆ ಔದಾರ್ಯಕ್ಕಾಗಿ, ಪ್ರೀತಿಯಿಂದ ತುಂಬಿದ ವಿಶಾಲ ಹೃದಯಕ್ಕಾಗಿ ನನ್ನ ಮೇಲೆ ಅವರು ತೋರಿದ ಪ್ರೀತಿ ವಾತ್ಸಲ್ಯಗಳಿಗಾಗಿ, ನಿಮ್ಮ ಮೇಲೆ ಮಹಾರಾಣಿಯವರು ಇಟ್ಟಿ ರುವ ಭಕ್ತಿಗಾಗಿ" ಎಂದು ಹೇಳಿದಳು.

ರಾಜನು ಮಲ್ಲಿಗೆಯನ್ನು ಬಾಚಿತಬ್ಬಿ "ಮಲ್ಲಿಗೆ, ನನ್ನ ಇಷ್ಟಾ ರ್ಥವು ಇಂದು ಪೂರೈಸಿದಂತಾಯಿತು. ಇಂದು ನಿಜವಾಗಿಯೂ ನೀನು ರಾಜಾಂತಃಪುರದ ರಮಣಿಯೆನ್ನಿಸಿಕೊಂಡೆ. ಮಹಾರಾಣಿಯ ಮೆಚ್ಚಿ ಗೆಯನ್ನು ಪಡೆದೆ. ನಾನು ಇದು ಇಷ್ಟು ಸುಲಭಸಾಧ್ಯವಾದ ಕಾರ್ಯವೆಂದು ಭಾವಿಸಿಯೇ ಇರಲಿಲ್ಲ. ನಿನ್ನನ್ನು ರಾಣಿಯಾಗಿ ಮಾಡಬೇಕೆಂಬ ನನ್ನ ಇಷ್ಟಾರ್ಥವು ಈ ಪೂಮಾಲಿಕೆಯನ್ನು ಎತ್ತಿದಂತೆ ಸುಲಭವಾಗಿ ಕೈಗೂಡಿತು" ಎಂದು ಹೇಳಿ ಅರಳಿದ ಪದ್ಮದಂತೆ ಪ್ರಫುಲ್ಲಿತವಾಗಿದ್ದ ಮಲ್ಲಿಗೆಯ ಮುಖವನ್ನು ಚುಂಬಿಸಿದನು.

## ೧೭

ಮೈಸೂರಿನಲ್ಲಿ ತ್ರಿಣೇಶ್ವರ ದೇವಾಲಯದ ಗುಡಿ ಗೋಪುರ ಗಳು ಪೂರೈಸಿದವು. ಹಾಗೆಯೇ ನೀಲಕಂಠಶಿವಾಚಾರ್ಯನ ದಿವ್ಯ ವಾದ ಜಂಗಮವಾಡಿಯು ಪೂರೈಸಿತು. ಈಗ ಜಂಗಮನು ಸಾಮಾನ್ಯ ನಂತಿಲ್ಲ. ಅವನ ಜಂಗಮವಾಡಿಯು ಚಿಕ್ಕ ಅರಮನೆಯಂತೆ ಶೋಭಿ ಸುತ್ತಿದೆ. ಜಂಗಮರಿಗೆ ಪ್ರತಿದಿನವೂ ಆ ಜಂಗಮವಾಡಿಯಲ್ಲಿ ದಿವ್ಯ ವಾದ ಭೋಜನವು ದೊರೆಯುತ್ತದೆ. ಜಂಗಮದೇವನ ಶಿವಪೂಜೆ, ಮಂತ್ರ-ತಂತ್ರ ಇವೆಲ್ಲವೂ ಅಟ್ಟಹಾಸದಿಂದ ಜರುಗುತ್ತಿವೆ ಮಲ್ಲಿ ಗೆಯ ಸಖಿಯಾದ ಚಾಮುಂಡಿಯೆ ಇವೆಲ್ಲ ಕಾರ್ಯಗಳಿಗೂ ಅಧಿ ಷ್ಠಾತ್ರಿ. ಅವಳು ಕಾಶಾಯವನ್ನು ಧರಿಸಿದ್ದಾಳೆ. ಅವಳನ್ನು ಯಾರೂ ಚಾಮುಂಡಿಯೆಂದು ಕರೆಯುವುದಿಲ್ಲ. ಕಾತ್ಯಾಯಿನಿದೇವಿ ಎಂದು ಕರೆಯುತ್ತಾರೆ. ಅದು ಜಂಗಮನು ಅವಳಿಗಿಟ್ಟ ಹೆಸರು.

ಜಂಗಮನು ಆಗಾಗ ತ್ರಿಣೇಶ್ವರ ದೇವಾಲಯದ ಕೆಲಸಗಳನ್ನು ಹೋಗಿ ನೋಡಿಕೊಂಡು ಬರುತ್ತಿದ್ದನು. ಕೆಲಸಗಳೆಲ್ಲವೂ ಪೂರೈ ಸುತ್ತಾ ಬಂದಿದ್ದವು ವರಾಹಸ್ವಾಮಿಯ ದೇವಾಲಯದ ಕೆಲಸಗಳು ಭರದಿಂದ ನಡೆಯುತ್ತಿದ್ದವು. ದೇವಾಲಯ ಕಾರ್ಯಗಳು ಪಂಡಿತಾ ರಾಧ್ಯನ ನಿರ್ಮಾಣವೆಂದು ಜನರು ಮಾತನಾಡಿಕೊಳುತ್ತಿದ್ದರು ನೀಲ ಕಂಠಶಿವಾಚಾರ್ಯನು ಅದು ತನ್ನಿಂದಲೇ ಆದುದೆಂದು ಹೆಮ್ಮೆಪಡು ತ್ತಿದ್ದನು. ತನಗೆ ಶೈವ-ವೈಷ್ಣವ ಪ್ರಭೇಧವಿಲ್ಲವೆಂದು ಹೇಳಿಕೊಳ್ಳು ತ್ತಿದ್ದನು. ತ್ರಿಣೇಶ್ವರ ದೇವಾಲಯದ ಕುಂಭಾಭಿಷೇಕ ಸಮಯಕ್ಕೆ ಮಲ್ಲಿಗೆಯನ್ನೂ ಮಹಾರಾಜನನ್ನೂ ಕರೆಸಬೇಕೆಂದು ಚಾಮುಂಡಿಯು ಸಂಕಲ್ಪಮಾಡಿದ್ದಳು. ಅವಳೇ ಒಬ್ಬ ಬ್ರಾಹ್ಮಣನ ಮುಖೇನ ಮಲ್ಲಿಗೆಗೆ ಈ ಅಭಿಷೇಕ ಉತ್ಸವಗಳಿಗೆ ಬರಬೇಕೆಂದು ಹೇಳಿ ಕಳುಹಿ

ಸಿದಳು. ರಾಜರಿಗೂ ಸ್ವತಃ ಕರೆಕಳುಹಿಸುವ ಧೈರ್ಯವು ಚಾಮುಂಡಿಗೆ ಇರಲಿಲ್ಲ ಹೇಗಾದರೂ ಮಾಡಿ ರಾಜರನ್ನೂ ಕರೆತರ ಬೇಕೆಂದು ಮಲ್ಲಿಗೆಗೆ ಹೇಳಿಕಳುಹಿಸಿದ್ದಳು. ಮಲ್ಲಿಗೆಯು ರಾಜನ ಸಮಯವನ್ನು ನೋಡಿ ಮೈಸೂರಿಗೆ ಹೋಗಬೇಕೆಂದು ಅಭಿಲಾಷೆ ಯನ್ನು ಸೂಚಿಸಿದಳು. ರಾಜನು ಮೈಸೂರಿನ ಅರಮನೆಯ ಅಂತಃ ಪುರದಲ್ಲಿ ಮಲ್ಲಿಗೆಗೆ ಬೇಕಾದ ಸೌಕರ್ಯಗಳೆಲ್ಲವನ್ನೂ ಸಿದ್ಧಪಡಿಸುವಂತೆ ಮೈಸೂರರಮನೆಯ ಮುನೀಬರಿಗೆ ಅಪ್ಪಣೆಯನ್ನು ಬರೆದು ಕಳುಹಿಸು ವಂತೆ ಮುತ್ಸದ್ದಿಗಳಿಗೆ ಹೇಳಿದನು. ಮಲ್ಲಿಗೆಗೆ ಬೇಕಾದಷ್ಟು ಹಣವನ್ನು ಚಿನ್ನದ ವರಹಗಳನ್ನು ಕೊಡಿಸಿ ಮೈಸೂರಿಗೆ ಕಳುಹಿದನು.

ಮಲ್ಲಿಗೆಯು ಮೈಸೂರಿಗೆ ಹೋದ ಮೂರನೆಯ ದಿನವೇ ತ್ರಿಣೇ ಶ್ವರನ ದೇವಾಲಯದ ಗೋಪುರಗಳನ್ನೆಲ್ಲಾ ನೋಡಿಕೊಂಡು ಬಂದಳು. ಮಧ್ಯಾಹ್ನಾತ್ಪರ ಜಂಗಮವಾಡಿಗೆ ಹೋಗಿ ಜಂಗಮದೇವನನ್ನು ದರ್ಶನಮಾಡಿದಳು. ಜಂಗಮನು ಮಲ್ಲಿಗೆಯನ್ನು ಕಂಡು ಹರ್ಷಿತ ನಾದನು. "ರಾಣೀ, ದೇವಾಲಯ ಗೋಪುರಗಳನ್ನು ನೋಡಿದೆಯಾ ?" ಎಂದು ಪ್ರಶ್ನೆ ಮಾಡಿದನು.

ಮಲ್ಲಿಗೆಯು ಕೈಮುಗಿದು "ನೋಡಿದೆ ಗುರುದೇವಾ. ನನ್ನ ಜನ್ಮವು ಸಾರ್ಥಕವಾಯಿತು. ನಾನು ನನ್ನಿಂದ ಇಂಥದೊಂದು ಶಾಶ್ವತವಾದ ಪುಣ್ಯಕಾರ್ಯವು ನಡೆಯುವುದು ಕನಸು ಮನಸಿನಲ್ಲಿಯೂ, ಎಣಿಸಿರ ಲಿಲ್ಲ. ಇದೆಲ್ಲವೂ ನಿಮ್ಮ ಅನುಗ್ರಹದಿಂದ ಲಭಿಸಿತು" ಎಂದು ಹೇಳಿದಳು.

ಜಂಗಮನು ಮಲ್ಲಿಗೆಯನ್ನು ಜಂಗಮವಾಡಿಯ ಮತ್ತೊಂದು ಕೋಣೆಗೆ ಕರೆದೊಯ್ದು ಅಲ್ಲಿ ಸಿದ್ಧಮಾಡಿಟ್ಟಿದ್ದ ಶಿಲಾಶಾಸನವೊಂದನ್ನು ತೋರಿಸಿದನು. ಆ ಶಿಲಾಶಾಸನದಲ್ಲಿ ಸಂಪ್ರದಾಯ ಪ್ರಕಾರ 'ಈ ದೇವಾಲಯ ಗುಡಿಗೋಪುರಗಳ ನಿರ್ಮಾಣದ ಪುಣ್ಯಕಾರ್ಯವು ರಾಜಾಧಿರಾಜ ಚಿಕ್ಕದೇವರಾಜ ಒಡೆಯರವರ ಬಂಗಾರದಪತ್ನಿಯವ ರಾದ ಶ್ರೀ ಮಲ್ಲಿಕಾಂಬೆಯವರ ಧರ್ಮದಿಂದ ನಡೆದುದು. ಆ ಚಂದ್ರಾ

ರ್ಗವಾಗಿ ಈ ಧರ್ಮವು ಶಾಶ್ವತವಾಗಿರಲಿ' ಎಂದು ಕೆತ್ತಲ್ಪಟ್ಟಿದ್ದಿತು.
ಅದನ್ನು ಜಂಗಮದೇವನು ತೋರಿಸಿದನು. "ಮಲ್ಲಿಗೆ ಓದಿನೋಡು"
ಎಂದು ಹೇಳಿದನು. ಮಲ್ಲಿಗೆಯು ಆ ಶಾಸನವನ್ನು ಓದಿದಳು. ಹೃದ
ಯವು ನಡುಗಿತು ಕಣ್ಣಿಗೆ ಮಂಜುಕವಿಯಿತು. ಮಲ್ಲಿಗೆಯು ತೊದ
ಲುವ ಮಾತುಗಳಿಂದ "ಗುರುದೇವಾ, ನನ್ನ ಹೆಸರು ಶಿಲಾಶಾಸನವಾಗು
ವುದು ಬೇಡ" ಎಂದು ಹೇಳಿ ಕೈಮುಗಿದಳು. ಕಣ್ಣುಗಳಲ್ಲಿ ಅಶ್ರು
ಬಿಂದುಗಳು ಉದುರುತ್ತಿದ್ದುವು. ತುಟಿಗಳು ನಡುಗುತ್ತಿದ್ದುವು. ಆ
ಸಲಕ್ಷಣಭಾವವನ್ನು ಜಂಗಮನು ನೋಡಿ ಬೆರಗಾದನು. ರಾಣಿ "ಇದು
ಪ್ರಾಚೀನ ಸಂಪ್ರದಾಯ. ಈ ಶಿಲಾಶಾಸನವು ಇರುವವರೆಗೆ ನಿನ್ನ
ಪುಣ್ಯವು ಬೆಳೆಯುತ್ತದೆ ಎಂದು ಪೂರ್ವಿಕರ ನಂಬುಗೆ" ಎಂದು ಹೇಳಿ
ದನು. ಮಲ್ಲಿಗೆಯು "ಗುರುದೇವಾ, ನಾನು ಅಂತಹ ಪುಣ್ಯಫಲವನ್ನು
ಬಯಸಿಲ್ಲ. ಆಮರಣಾಂತ ಸೇವಾಧರ್ಮವನ್ನು ಪಾಲಿಸುತ್ತೇನೆ.
ಅದು ನಿಷ್ಕಾಮಕರ್ಮವಾಗಿರಲಿ. ನಾನು ಈ ಶಿಲಾಶಾಸನವನ್ನು
ನೋಡಲಾರೆ. ಜನರು ಇದನ್ನು ನೋಡದಿರಲಿ. ಈ ಶಾಸನವು
ನಕ್ಷರ ಕಣ್ಣಿಗೆ ಬೀಳದಿರಲಿ. ಯುಗಯುಗಾಂತರಗಳ ಕಾಲ ನನ್ನ
ಹೆಮ್ಮೆಯು ಹೆಪ್ಪುಕಟ್ಟಿ ಈ ಶಿಲಾರೂಪದಿಂದ ಭೂತದಂತೆ ಕಾಣ
ದಿರಲಿ" ಎಂದು ಪ್ರಾರ್ಥಿಸಿದಳು ಚಾಮುಂಡಿಯು ಅಲ್ಲಿಗೆ ಬಂದು
ಮಲ್ಲಿಗೆಯನ್ನು ಸಂತೈಸಿ ಕರೆದುಕೊಂಡು ಹೋಗಿ ಅರಮನೆಗೆ ಬಿಟ್ಟ
ಳಂದಳು.

ವೈದೀಕರು ಕುಂಭಾಭಿಷೇಕಕ್ಕೆ ಮೂಹೂರ್ತವನ್ನು ಕಟ್ಟಿದರು.
ಶಾಸ್ತ್ರೋಕ್ತವಾಗಿ ಪ್ರತಿಷ್ಠಾಕಾರ್ಯಗಳೆಲ್ಲವೂ ನೆರವೇರಿದವು. ಆ
ಸಮಯದಲ್ಲಿ ಮಲ್ಲಿಗೆಯು ದೇವಾಲಯಕ್ಕೆ ಹೋಗಲಿಲ್ಲ. ಮೂರನೆಯ
ದಿನ ಪ್ರಾತಃಕಾಲ ಸ್ನಾನಾದಿಗಳನ್ನು ಪೂರೈಸಿಕೊಂಡು ಮಲ್ಲಿಗೆಯು
ದೇವಾಲಯಕ್ಕೆ ಚಾಮುಂಡಿಯೊಡನೆ ಹೋಗಿ ಪೂಜಾದಿಕಾರ್ಯ
ಗಳನ್ನು ಮಾಡಿಸಿದಳು. ಭೂರಿದಕ್ಷಿಣೆಯನ್ನು ಇತ್ತಳು. ಮೂರು

ದಿನಗಳು ದೇವಾಲಯದಲ್ಲಿ ಬ್ರಾಹ್ಮಣ ಸಂತರ್ಪಣೆಯು ನಡೆಯಿತು. ಜಂಗಮವಾಡಿಯಲ್ಲಿ ಗಣಾರಾಧನೆಯು ನಡೆಯಿತು. ಜನರೆಲ್ಲರೂ ಆ ಉತ್ಸವಕ್ಕೆ ಮಹಾರಾಜರು ಬರುವರೆಂದು ನಿರೀಕ್ಷಿಸಿದ್ದರು. ಮಹಾ ರಾಜರ ಸವಾರಿಯು ಬರಲಿಲ್ಲ. ಮುಂದಿನ ತಿಂಗಳಿನಲ್ಲಿ ಮಹಾರಾಜರು ಬಂದು ದೇವತಾರಾಧನೆ ಸಂತರ್ಪಣೆಗಳನ್ನು ನಡೆಸುವರೆಂದು ನಿರೂಪವು ಬಂದಿತು. ಜನರೆಲ್ಲರಿಗೂ, ಸ್ವಲ್ಪಮಟ್ಟಿಗೆ ಆಶಾಭಂಗವಾದಾಗ್ಯೂ ಹೇರಳವಾದ ಮೃಷ್ಟಾನ್ನ ಸಂತರ್ಪಣೆಗಳಿಂದಲೂ ಭೂರಿದಕ್ಷಿಣೆ ಗಳಿಂದಲೂ ಜನರು ಸಂತುಷ್ಟರಾದರು. ಭಕ್ತಾದಿಗಳೆಲ್ಲರೂ ಜಂಗಮ ದೇವನ ಪ್ರಭಾವಗಳನ್ನು ಹೊಗಳುತ್ತಿದ್ದರು. ಮಲ್ಲಿಗೆಯ ಸ್ತೋತ್ರ ದಲ್ಲಿಯೂ ಕಡಿಮೆಯೇನೂ ಇರಲಿಲ್ಲ.

ಮಲ್ಲಿಗೆಯು ಪ್ರತಿಷ್ಠಾಕಾರ್ಯಗಳೆಲ್ಲವೂ ಪೂರೈಸಿದ ಮೇಲೆ ಏಕಾಂತದಲ್ಲಿ ಜಂಗಮದೇವನ ದರ್ಶನಮಾಡಿ ರಾಜಧಾನಿಗೆ ಹೊರ ಡಲು ಅಪ್ಪಣೆ ಬೇಡಿದಳು. ಜಂಗಮನು ಮಲ್ಲಿಗೆಗೆ ಅನುಜ್ಞೆಯನ್ನು ಕೊಡಲಿಲ್ಲ. ಮುಂದಿನ ತಿಂಗಳು ಮಹಾರಾಜರು ಬರುವರೆಂದೂ, ಅವರ ಸೇವೆಯು ಪೂರೈಸಿದ ನಂತರ ಮಲ್ಲಿಗೆಯು ರಾಜಧಾನಿಗೆ ಹೋಗ ಬಹುದೆಂದೂ, ಈಗ ರಾಜಧಾನಿಗೆ ಹೋದರೆ ಮಲ್ಲಿಗೆಗೆ ಅಮಂಗಳ ಉಂಟಾಗುವುದೆಂದೂ ಹೇಳಿದನು. ಜಂಗಮದೇವನ ಬಾಯಿಯಲ್ಲಿ ಬಂದ ಅಮಂಗಳ ಎಂಬ ಶಬ್ದದಿಂದ ಅವಳ ಹೃದಯ ಚುಚ್ಚಿದಂತಾ ಯಿತು. "ಗುರುದೇವಾ! ಅಮಂಗಳವೆಂದರೇನು ಹೇಳಲಾರಿರಾ?" ಎಂದು ದೈನ್ಯದಿಂದ ಕೇಳಿದಳು. ಜಂಗಮನು "ಅಮಂಗಳವನ್ನು ನುಡಿಯ ಬಾರದು. ನಾನು ಅದಕ್ಕೆ ಶಾಂತಿ ಕರ್ಮಗಳನ್ನು ಮಾಡುತ್ತೇನೆ. ನೀನು ಇಲ್ಲಿಯೇ ಇರು" ಎಂದು ಹೇಳಿದನು. ಮಲ್ಲಿಗೆಯು ಚಾಮುಂಡಿಯೊಡನೆ ಅರಮನೆಗೆ ಹೊರಟು ಹೋದಳು

ಮಲ್ಲಿಗೆಯು ಪ್ರತಿದಿನವೂ ಪ್ರಾತಃಕಾಲದಲ್ಲಿ ದೇವಾಲಯಕ್ಕೆ ಹೋಗಿಬರುತ್ತಿದ್ದಳು. ಸಂಧ್ಯಾಕಾಲದಲ್ಲಿ ಜಂಗಮವಾಡಿಗೆ ಹೋಗಿ

ಗುರುದೇವನ ದರ್ಶನಮಾಡಿ ಬರುತ್ತಿದ್ದಳು. ಹೀಗೆ ಎಂಟು ಹತ್ತು ದಿನಗಳು ಕಳೆದಮೇಲೆ ಒಂದು ದಿನ ಸಂಧ್ಯಾಕಾಲದಲ್ಲಿ ಜಂಗಮವಾಡಿಗೆ ಹೊರಡಲು ಮಲ್ಲಿಗೆಯು ಸಿದ್ಧಪಡಿಸಿಕೊಳ್ಳುತ್ತಿದ್ದಳು. ಅಷ್ಟರಲ್ಲಿ ಪರಿಚಾರಿಕೆಯೊಬ್ಬಳು ಬಂದು ರಾಣಿಯವರ ದರ್ಶನಾರ್ಥವಾಗಿ ಸನ್ಯಾಸಿಯೊಬ್ಬನು ಬಂದಿರುವುದಾಗಿ ತಿಳಿಸಿದಳು. ಮಲ್ಲಿಗೆಯು ಆ ಸನ್ಯಾಸಿಯನ್ನು ಅಂತಃಪುರಕ್ಕೆ ಕರೆತರುವಂತೆ ಅಪ್ಪಣೆ ಮಾಡಿದಳು. ಆ ಸನ್ಯಾಸಿಯು ಅಂತಃಪುರದೊಳಗೆ ಬಂದು ಮಲ್ಲಿಗೆಗೆ ದರ್ಶನವಿತ್ತನು. ಅವನು ಮಲ್ಲಿಗೆಯ ವಿದ್ಯಾಗುರುವಾದ ವಿಶ್ವೇಶ್ವರ. ಮಲ್ಲಿಗೆಯು ವಿಶ್ವೇಶ್ವರ ನನ್ನು ಆದರಿಸಿ ಆಸನದ ಮೇಲೆ ಕುಳ್ಳಿರಿಸಿದಳು. "ಗುರುಗಳೇ ! ಇಷ್ಟು ದಿನ ಎತ್ತಕಡೆಗೆ ಸಾಗಿದ್ದಿರಿ? ತಮ್ಮ ದರ್ಶನವಾಗಿ ಬಹುದಿನಗಳಾದುವು" ಎಂದು ಉಪಚಾರೋಕ್ತಿಗಳಿಂದ ಮಾತನಾಡಿಸಿದಳು. ವಿಶ್ವೇಶ್ವರನು "ದೇಶದೇಶಾಂತರಗಳಲ್ಲಿ ತೀರ್ಥಯಾತ್ರೆಯನೆಪದಿಂದ ಅಲೆಯುತ್ತಿದ್ದೆ. ಎಲ್ಲಿಯೂ ಮನಸ್ಸಿಗೆ ಶಾಂತಿಯು ದೊರೆಯಲಿಲ್ಲ. ಪುನಃ ದೈವವು ನಿನ್ನ ಕಡೆಗೆ ಸೆಳೆದುಕೊಂಡು ಬಂದಿದೆ."

"ಬಹಳ ಸಂತೋಷ ! ನಾನು ತಮ್ಮ ದರ್ಶನವಿಲ್ಲದೆ ಎಷ್ಟೋ ದಿನ ಗಳಿಂದ ಪೇಚಾಡುತ್ತಿದ್ದೆ. ಇಂದು ಆಕಸ್ಮಿಕವಾಗಿ ತಮ್ಮ ದರ್ಶನವು ದೊರೆತಂತಾಯಿತು."

"ಮಲ್ಲಿಗೆ, ಈಗ ನಿನ್ನ ಸಂಗೀತವು ಹೇಗಿದೆ ? ಎಲ್ಲೆಲ್ಲಿಯೂ ನಿನ್ನ ಮಾತನ್ನೇ ಆಡುತ್ತಾರೆ. ಒಂದು ಕಡೆ ನೀನು ರಾಣಿಯಾಗಿದ್ದೀಯೆಂಬ ಮಾತು. ಮತ್ತೊಂದುಕಡೆ ನೀನು ಪರಮಧರ್ಮಾತ್ಮಳಾಗಿದ್ದೀಯೆಂಬ ಪ್ರಶಂಸೆ. ಇದನ್ನೆಲ್ಲಾ ಕೇಳಿ ಪ್ರತ್ಯಕ್ಷವಾಗಿ ನಿನ್ನನ್ನೇ ನೋಡಿ ನೀನು ಹೇಗಿದ್ದೀ, ನಿನ್ನ ಮನವು ಹೇಗಿದೆಯೆಂಬುದನ್ನು ನೋಡುವ ಆಕಾಂಕ್ಷೆ ಯಿಂದ ಬಂದಿದ್ದೇನೆ."

"ಗುರುಗಳೇ, ಅಂತರಂಗದಲ್ಲೇನೂ ವ್ಯತ್ಯಾಸವಾಗಿಲ್ಲ. ಮನಸ್ಸಿನಲ್ಲಿ ಯಾವ ವ್ಯತ್ಯಾಸವೂ ಹುಟ್ಟಿಲ್ಲ. ಹೊರಗಿನ ವಿಚಾರಗಳನ್ನೆಲ್ಲಾ ನೀವೇ

ಅರಿತಿದ್ದೀರಿ"

"ನಾನು ಅರಿಯದ ಸಂಗತಿಯೊಂದು ಇದರಲ್ಲಿ ನಿಗೂಢವಾಗಿದೆ. ಅದೇ ನನಗೆ ಆಶ್ಚರ್ಯವನ್ನುಂಟುಮಾಡಿರುವ ಸಂಗತಿಯಾಗಿದೆ."

"ಏನದು ? ನನ್ನಲ್ಲಿ ಅಂತಹ ಆಶ್ಚರ್ಯವೇನಿದೆ?"

"ಕೇಳು ಮಲ್ಲಿಗೆ, ನೀನು ಗರಳಪುರಿಯಲ್ಲಿ ಅಖಂಡ ಒಂದು ಮಂಡಲ ಪರಮೇಶ್ವರನ ಸೇವೆ, ಗಣಾರಾಧನೆ ದಾನಧರ್ಮಗಳನ್ನು ನಡೆಸುತ್ತಿದ್ದೆಯಷ್ಟೆ. ಈ ಜಂಗಮನು ಬಂದು ಮಾಯೆ, ಮಂತ್ರ ಗಳಿಂದ ನಿನ್ನನ್ನು ಈ ರಾಜನಿಗೆ ದಾನ ಮಾಡಿದ್ದಾನಂತೆ. ನಿನ್ನನ್ನು ಅವನೇಕೆ ದಾನಮಾಡಬೇಕು? ಮೊದಲೇ ನೀನು ರಾಜನ ಕೃಪಾ ಪಾತ್ರಳಾಗಿದ್ದೆ ಒಂದು ಕಡೆ ಈ ರಾಜನ ಪ್ರೇಮ, ಮತ್ತೊಂದು ಕಡೆ ಜಂಗಮನ ಆಕರ್ಷಣೆ. ಇದೇ ಆ ರಹಸ್ಯವಿಚಾರ."

"ಗುರುಗಳೇ ತಾವು ನಿಜವನ್ನು ಅರಿಯಿರಿ ಜಂಗಮನು ಸಿದ್ಧ ಪುರುಷ. ನಿರೀಹ ಸತ್ಪುರುಷ ಅವನಿಗೆ ಹೊನ್ನು ಮಣ್ಣುಗಳು ಸಮಾನ. ರಾಜನು ಪರಮ ಉದಾರಿ. ಧೀರ, ಪ್ರಜಾವತ್ಸಲ. ಇವೆರಡು ಮಾರ್ಗಗಳೂ ಸಂಪೂರ್ಣವಾಗಿ ಬೇರೆಬೇರೆಯಾಗಿವೆ. ಇದರಲ್ಲಿ ರಹಸ್ಯ-ಆಶ್ಚರ್ಯಗಳಿಗೆ ಲೇಶವೂ ಆಸ್ಪದವಿಲ್ಲ."

"ಮಲ್ಲಿಗೆ, ಇದನ್ನೆಲ್ಲಾ ನಾನು ಅರಿಯದವನಲ್ಲ. ಜಂಗಮನು ನಿಜವಾದ ಸತ್ಪುರುಷನೂ ಅಲ್ಲ. ಸಿದ್ಧಪುರುಷನೂ ಅಲ್ಲ. ಅವನು ಇಂದ್ರಜಾಲಗಳನ್ನು ಕಲಿತಿರುವ ಮಾಯಾವಿ. ನಿನ್ನನ್ನು ರಾಜನ ಮುಂದಿಟ್ಟು ರಾಜನನ್ನು ಮೋಸಮಾಡುತ್ತಿದ್ದಾನೆ. ಮಾಯಾ ಮಂತ್ರ ಗಳಿಂದ ನಿನ್ನನ್ನು ಮೋಸಮಾಡುತ್ತಿದ್ದಾನೆ."

"ಶಿವ ಶಿವಾ ! ಇದನ್ನೆಲ್ಲಾ ಕೇಳಲಾರೆ. ಗುರುಗಳೇ ! ನಿಮ್ಮ ಬುದ್ಧಿಗೆ ಗ್ರಹಣಹಿಡಿದಿದೆ. ಅಮೃತವನ್ನು ವಿಷವೆಂದು ಭಾವಿಸುತ್ತೀರಿ."

"ಮಲ್ಲಿಗೆ, ಆ ಜಂಗಮನು ಮೊದಲು ವೈಷ್ಣವ. ಅಲ್ಲಿ ವೈಷ್ಣವ ರಲ್ಲಿ ದ್ವೇಷ ಕಟ್ಟಿಕೊಂಡು ಇಲ್ಲಿಗೆ ಓಡಿಬಂದಿದ್ದಾನೆ. ಮೋಡಿ, ಮಂತ್ರ

ಗಳನ್ನು ಕಲಿತು, ನಿನ್ನನ್ನು ವಶಪಡಿಸಿಕೊಂಡು ಇಲ್ಲಿ 'ರಾವಣ ಸನ್ಯಾಸಿ' ಯಾಗಿದ್ದಾನೆ. ಗವಿಯಲ್ಲಿ ಅಡಗಿದ್ದ ಈ ಜಂಗಮನಿಗೆ ಅರಮನೆಯಂಥಾ ಈ ಜಂಗಮವಾಡಿಯೇನು! ಈ ಗೋಪುರಗಳೇನು! ಈ ಅಟ್ಟಹಾಸವೇನು! ಇವನಿಂದ ಈ ರಾಜ್ಯಕ್ಕೆ ಯಾವುದೋ ಹಾನಿಯು ತಟ್ಟುತ್ತದೆ. ಅದಕ್ಕೆ ಪ್ರತ್ಯಕ್ಷವಾಗಿ ನೀನು ಕಾರಣಭೂತಳಾಗುವೆ. ರಾಜನಾದರೂ ನಿನ್ನನ್ನು ಶೂಲಕ್ಕೇರಿಸುತ್ತಾನೆ. ಜನಗಳಾದರೂ ನಿನ್ನನ್ನು ಚಿತ್ರವಧೆಮಾಡುತ್ತಾರೆ ಇದು ನಿನ್ನ ಹಣೆಯ ಬರಹ."

"ಈ ಮಾತುಗಳನ್ನು ಕೇಳಿ ಮಲ್ಲಿಗೆಯು ಅಳತೊಡಗಿದಳು. ನನ್ನ ಹಣೆಯಬರಹ! ಹಣೆಯ ಬರಹವನ್ನು ತಪ್ಪಿಸಬಲ್ಲವರಾರು? ನನ್ನಿಂದೇಕೆ ಇಷ್ಟು ಅನರ್ಥಗಳು. ನಾನೇ ಕೆರೆಯಲ್ಲಿಯೋ, ಮಡುವಿನಲ್ಲಿಯೋ ಬಿದ್ದು ಪ್ರಾಣತ್ಯಾಗ ಮಾಡುತ್ತೇನೆ. ನನಗೇಕೆ ಈ ಅಪಖ್ಯಾತಿ" ಎಂದು ಹೇಳುತ್ತಾ ಪುನಃ ಅತ್ತಳು.

ಸನ್ಯಾಸಿಯು ಮಲ್ಲಿಗೆಯನ್ನು ಎಷ್ಟೋ ವಿಧವಾಗಿ ಸಮಾಧಾನ ಗೊಳಿಸಿದನು. "ಮಲ್ಲಿಗೆ! ದುಃಖ ಪಡಲು ಕಾರಣವಿಲ್ಲ. ನೀನು ಈ ಜಂಗಮನ ಸಹವಾಸವನ್ನು ತೊರೆದರೆ ನಿನಗೆ ಕ್ಷೇಮವಾಗುತ್ತದೆ."

ಮಲ್ಲಿಗೆಯು ಮೌನದಿಂದಿದ್ದಳು. ಮಾತನಾಡಲಿಲ್ಲ. ಸನ್ಯಾಸಿಯು ಹೇಗೋ ಮಲ್ಲಿಗೆಯ ಅಪ್ಪಣೆಯನ್ನು ಪಡೆದು ಹೊರಟು ಹೋದನು.

ವಿಶ್ವೇಶ್ವರನು 'ಈ ಮಲ್ಲಿಗೆಯನ್ನು ಇಷ್ಟು ದೊಡ್ಡ ಅಂತಸ್ತಿಗೆ ತಂದ ವನು ನಾನು. ಚಿಕ್ಕಕ್ಕೆ ಸುವಾಸನೆಕಟ್ಟಿದಂತೆ ಇವಳಿಗೆ ಸಂಗೀತ ವಿದ್ಯೆಯನ್ನು ಕಲಿಸಿಕೊಟ್ಟೆ. ಇವಳು ವೇಶ್ಯೆಯಾಗಿ ಹುಟ್ಟಿದಳು. ನನ್ನಿಂದ ವಿದ್ಯಾಂಸಳೆನ್ನಿಸಿಕೊಂಡಳು. ಅಷ್ಟರಲ್ಲೇ ಇದ್ದಿದ್ದರೆ ಎಷ್ಟೋ ಚೆನ್ನಾ ಗಿತ್ತು. ನನಗೆ ಇವಳಲ್ಲಿ ಪ್ರೇಮಾಂಕುರವು ಹುಟ್ಟಿತು. ನನ್ನ ಪ್ರೇಮ ವನ್ನು ರಾಜನು ಅಪಹರಿಸಿದನು. ಅದಕ್ಕಿಂತಲೂ ಹೆಚ್ಚಾಗಿ ಈ ಜಂಗ ಮನು ಇವಳನ್ನು ವಶಪಡಿಸಿಕೊಂಡಿದ್ದಾನೆ. ಈ ಜಂಗಮನನ್ನು ಪೂರೈಸದೇ ಈ ಮಲ್ಲಿಗೆಯನ್ನು ವಶಪಡಿಸಿಕೊಳ್ಳುವುದು ಕಷ್ಟ. ಈ

ಜಂಗಮನನ್ನು ಪೂರ್ತಿಮಾಡಿಬಿಡಬೇಕು' ಎಂದುಕೊಂಡು ಹೊರಟು ಹೋದನು.

ಮಲ್ಲಿಗೆಯು ಅಂದು ಅನ್ನಾಹಾರಗಳನ್ನು ಭುಜಿಸಲಿಲ್ಲ ವಿಶ್ವೇಶ್ವರನ ಮಾತುಗಳು ಅವಳನ್ನು ಚುಚ್ಚುತ್ತಿದ್ದವು. ಆದರೆ ವಿದ್ಯಾಗುರುವಾದ ವಿಶ್ವೇಶ್ವರನ ಮೇಲೆ ಕೋಪ ಬರಲಿಲ್ಲ. 'ವಿಶ್ವೇಶ್ವರನು ಮಹಾಪಂಡಿತ. ಅಷ್ಟು ದೊಡ್ಡ ವಿದ್ವಾಂಸನ ಕಣ್ಣುಗಳು ಕಾಮದಿಂದ ಕುರುಡಾಗಿವೆ. ಆವನು ಸನ್ಯಾಸಿಯಾಗಿ ಧರ್ಮಭ್ರಷ್ಟನಾಗಿದ್ದಾನೆ. ಅದು ಅವನ ಕರ್ಮ. ನಾನೇನು ಮಾಡಲಾದೀತು' ಎಂದು ಮಲ್ಲಿಗೆಯು ಸಮಾಧಾನ ವನ್ನು ತಂದುಕೊಂಡಳು. ರಾತ್ರಿಯೆಲ್ಲಾ ಅವಳಿಗೆ ನಿದ್ದೆ ಹತ್ತಲಿಲ್ಲ. ವಿಶ್ವೇಶ್ವರನನ್ನೇ ಚಿಂತಿಸುತ್ತಿದ್ದಳು. ಅವನಿಂದ ತನಗೆ ಹಾನಿಯು ತಟ್ಟಬಹುದೆಂದು ಭಯಚಕಿತಳಾಗುತ್ತಿದ್ದಳು. ಕಣ್ಣಿಗೆ ನಿದ್ದೆ ಹತ್ತಿದಾಗ ದುಸ್ವಪ್ನಗಳನ್ನು ಕಂಡಳು.

ಮಾರನೆಯ ಪ್ರಾತಃಕಾಲ ಸ್ನಾನಾದಿಗಳನ್ನು ಪೂರೈಸಿಕೊಂಡು ಪರಿಚಾರಿಕೆಯರೊಡನೆ ದೇವಾಲಯಕ್ಕೆ ಹೋಗಿಬಂದಳು. ಮನಸ್ಸಿನ ದುಗುಡವು ಒಂದೇ ಪರಿಯಾಗಿದ್ದಿತು. ಮಧ್ಯಾಹ್ನದ ಭೋಜನ ಮಾಡಲಿಲ್ಲ. ಸೂರ್ಯಾಸ್ತವಾಗುವುದಕ್ಕಿಂತ ಮುಂಚಿತವಾಗಿಯೇ ಜಂಗಮನ ದರ್ಶನಕ್ಕೆ ಹೊರಟಳು. ಅಂದು ಪ್ರಾತಃಕಾಲದಿಂದ ಜಂಗಮನು ಯಾರಿಗೂ ದರ್ಶನವಿತ್ತಿರಲಿಲ್ಲ. ಪೂಜಾದಿಕಾರ್ಯಗಳನ್ನು ಎಸಗಿರಲಿಲ್ಲ. ಏಕಾಂತಭವನದಲ್ಲಿ ನಿರ್ವಿಣ್ಣನಾಗಿ ಕುಳಿತಿದ್ದನು. ಜಂಗಮವಾಡಿಯೊಳಗೆ ಹೋಗಿ ಚಾಮುಂಡಿಯನ್ನು ನೋಡಿದಳು. ಸಮಾಚಾರವೇನೆಂದು ವಿಚಾರಿಸಿದಳು. ಏನೂ ತಿಳಿಯಲಿಲ್ಲ. ಧೈರ್ಯ ತಂದುಕೊಂಡು ಜಂಗಮನು ಇರುವ ಕೋಣೆಯ ಬಾಗಿಲನ್ನು ಮೆತ್ತಗೆ ಸರಿಸಿ ಒಳಗೆ ಹೋದಳು. ಜಂಗಮನು ಕಣ್ಣು ಬಿಟ್ಟು ನೋಡಿದನು.

"ಮಲ್ಲಿಗೆ ಬಾ, ಸಮೀಪದಲ್ಲಿ ಕುಳಿತುಕೋ" ಎಂದು ಹೇಳಿದನು.

ಮಲ್ಲಿಗೆಯು ಹೋಗಿ ಜಂಗಮನ ಎದುರಿನಲ್ಲಿ ಕುಳಿತುಕೊಂಡಳು.

"ಗುರುದೇವಾ! ಇಂದೇಕೆ, ನಿಮ್ಮ ಪರಿಸ್ಥಿತಿಯು ಹೀಗಾಗಿದೆ. ಜಂಗ ವಾಡಿಯು ಏಕೆ ಇಷ್ಟೊಂದು ಪ್ರಕಾಶಹೀನವಾಗಿದೆ" ಎಂದು ವಿನ ದಿಂದ ಕೇಳಿದಳು.

ಜಂಗಮನು "ಮಲ್ಲಿಗೆ, ನಿಜವಾಗಿಯೂ ಇಂದು ನನಗೆ ಬಹ ಮನೋವೇದನೆಯುಂಟಾಗಿದೆ."

"ಏಕೆ ಗುರುದೇವಾ ? ನಿಮಗೆ ಯಾರೇನು ಅಪಚಾರವನ್ನು ಮಾಡಿದರು?"

"ಕೇಳು ಮಲ್ಲಿಗೆ. ಈ ದಿನ ಪ್ರಾತಃಕಾಲ ಒಬ್ಬ ಸನ್ಯಾಸಿ ಬಂದು ದರ್ಶನವಿತ್ತನು. ಅವನಿಗೆ ನಿನ್ನ ವಿಚಾರಗಳೆಲ್ಲ ತಿಳಿದಿದೆ."

ಮಲ್ಲಿಗೆಯು "ಗುರುದೇವಾ, ನನ್ನ ವಿಚಾರದಲ್ಲಿ ಗೂಢವಾದ ರಹ ವೇನಿದೆ? ಆದರಿಂದ ತಮ್ಮ ಮನಸ್ಸಿಗೆ ಖತಿಯಾಗಲು ಕಾರಣವೇನು

ಜಂಗಮನು ನಿಧಾನವಾಗಿ ಮಾತನಾಡಲಾರಂಭಿಸಿದನು. "ಏನ ಇಲ್ಲ. ಅವನು ನಿನ್ನಮೇಲೆ ಒಂದು ದೋಷವನ್ನಾದರೂ ಹೇಳಲಿ ಆದರೆ ಅವನು ನಿನ್ನನ್ನು ಚೆನ್ನಾಗಿ ಬಲ್ಲ. ರಾಜನ ಅಂತರಂಗ ಬಹಿರ ಗಳನ್ನೆಲ್ಲಾ ಚೆನ್ನಾಗಿ ಅರಿತುಕೊಂಡಿದ್ದಾನೆ. ಮಂತ್ರಿಯ ವಿಚಾ ವಾಗಿ ಅವನಿಗೆ ತಿಳಿದಿರುವಷ್ಟು ರಹಸ್ಯವು ಈ ದೇಶದಲ್ಲಿ ಮತ್ತಾರಿಗ ತಿಳಿದಿಲ್ಲ. ಅವನು ವಿದ್ವಾಂಸನಂತೆ ಕಾಣುತ್ತಾನೆ. ರಾಜನಮೇ ಅವನಿಗೆ ಶತೃತ್ವವಿರುವಂತಿದೆ. ಅಂಥಾ .ಬುದ್ಧಿವಂತನು ಶತೃವಾ ಬಹಳ ಅಪಾಯಗಳುಂಟು."

ಮಲ್ಲಿಗೆಯ ಮುಖವು ವಿವರ್ಣವಾಯಿತು. "ಗುರುದೇವ ಅದಕ್ಕೆ ಪ್ರತೀಕಾರವೇನೂ ಇಲ್ಲವೆ ?" ಎಂದು ಕೇಳಿದಳು.

"ಮಲ್ಲಿಗೆ, ಅವನಲ್ಲೇನೂ ಪ್ರತ್ಯಕ್ಷ ದೋಷಗಳು ಕಾಣುವುದಿ ಅವನ ಮಾತುಗಳಲ್ಲಿ ಸಂದೇಹ ಬರುವಂತಿದೆ ಅವನ ಅಭಿಲಾ ಯೇನೆಂದು ಅರಿಯುವುದು ಕಷ್ಟ" ಎಂದನು. "ಮಲ್ಲಿಗೆ ಅಷ್ಟೆ

ಅಲ್ಲ. ನನ್ನ ವಿಚಾರವಾಗಿಯೂ ಅವನಿಗೆ ಬಹಳ ತಿಳಿದಿದೆ. ಇದನ್ನೆಲ್ಲಾ ಹೇಗೆ ಸಂಗ್ರಹಿಸಿದ್ದಾನೆಯೋ ಅದೇಆಶ್ಚರ್ಯ."

"ಗುರುದೇವಾ ! ಇದಕ್ಕಾಗಿ ತಾವಿಷ್ಟು ಚಿಂತಿಸಲೇಕೆ? ಆ ಸನ್ಯಾಸಿಯು ಮತ್ತಾರೂ ಅಲ್ಲ. ಅವನು ನನ್ನ ವಿದ್ಯಾಗುರು. ನನ್ನ ತಾಯಿಯು ಪರಲೋಕವನ್ನೈದಿದಾಗಿನಿಂದ ಅವನೆಲ್ಲಿಯೋ ಮಾಯವಾಗಿಹೋಗಿದ್ದಾನೆ. ಅವನು ಈಗ ಪುನಃ ಇಲ್ಲಿಗೆ ಬಂದಿದ್ದಾನೆ. ನಿನ್ನೆಯ ದಿನ ನನಗೂ ದರ್ಶನವಿತ್ತಿದ್ದ. ಅವನು ಭ್ರಾಂತನಾಗಿದ್ದಾನೆ." ಎಂದು ಹೇಳಿದಳು.

ಜಂಗಮನು "ಮಲ್ಲಿಗೆ, ಈಗ ಎಲ್ಲವೂ ಸಮನ್ವಯವಾಯಿತು. ಅವನಿಂದ ನಿನ್ನ ಸರ್ವನಾಶವಾಗುವುದರಲ್ಲಿ ಸಂದೇಹವಿಲ್ಲ. ನಿನ್ನ ಈ ರಾಣಿಗಿರಿಯನ್ನು ಅವನು ಹಾರಿಸಿಬಿಡುತ್ತಾನೆ."

"ಗುರುದೇವಾ, ನನ್ನ ರಾಣಿಗಿರಿಗಾಗಿ ತಾವೇಕೆ ಇಷ್ಟು ಪೇಚಾಡಬೇಕು? ರಾಜನ ನಿಷ್ಕಳಂಕಪ್ರೇಮಕ್ಕೆ ಮಾತ್ರ ನಾನು ದಾಸಿಯಾಗಿದ್ದೇನೆ. ಈ ರಾಣಿಗಿರಿಯನ್ನು ಇಂದೇ ಪರಿತ್ಯಜಿಸಬಲ್ಲೆ."

"ಮಲ್ಲಿಗೆ, ನಾನು ನಿನ್ನ ಐಶ್ವರ್ಯ ಸೌಭಾಗ್ಯಗಳನ್ನು ಗಣನೆಗೆ ತಂದುಕೊಳ್ಳುತ್ತಿಲ್ಲ. ನಿನಗೆ ಕಷ್ಟಪರಂಪರೆಗಳು ಒದಗುವುದೆಂದು ಭಯಪಡುತ್ತೇನೆ. ಆ ಮಾತು ಹಾಗಿರಲಿ. ನೀನು ಸಂನ್ಯಾಸಿನಿಯಾಗುವೆ ಎಂದು ಸಂಕಲ್ಪ ಮಾಡಿರಲಿಲ್ಲವೆ? ಭಗವಂತನಲ್ಲಿ ಆತ್ಮಾರ್ಪಣ ಮಾಡುವ ನಿಶ್ಚಯವನ್ನು ಮಾಡಿರಲಿಲ್ಲವೆ?"

"ಹೌದು ಗುರುದೇವಾ, ಸತ್ಯವಾದ ಮಾತು."

"ಮಲ್ಲಿಗೆ ಈಗ ನೀನು ಸನ್ಯಾಸಿನಿಯಾಗು. ನಾವು ಈ ಸಂಕಟಗಳಿಂದ ಸುಲಭವಾಗಿ ಪಾರಾಗ ಬಹುದು."

"ಗುರುದೇವಾ ನಾನು ನಿಮ್ಮ ಅಪ್ಪಣೆಯಂತೆ ನಡೆಯಲು ಸರ್ವದಾ ಸಿದ್ಧಳಾಗಿದ್ದೇನೆ ಆದರೆ ಅದಕ್ಕೆ ರಾಜನು ಒಪ್ಪಬೇಡವೆ"

"ರಾಜ, ಸ್ನೇಹಿತರು, ಬಂಧುಮಿತ್ರರು ಇವರೆಲ್ಲರ ಅಪ್ಪಣೆಯನ್ನು

ಪಡೆದು ಸಂನ್ಯಾಸಿನಿಯಾಗುವುದೆಂದರೆ ಸುಳ್ಳು ಮಾತು. ನೀನು ನಿನ್ನ ಸಂಕಲ್ಪವು ನಿಜವಾಗಿದ್ದರೆ ನಿನ್ನ ಮನಸ್ಸು ಇಂದಿಗೂ ಸ್ಥಿರವಾಗಿದ್ದರೆ ಇಂದೇ ಈಗಲೇ ಸಂನ್ಯಾಸಿನಿಯಾಗು."

"ಗುರುದೇವಾ ಸಂನ್ಯಾಸಿನಿಯಾಗುವುದೆಂದರೇನು ?" ಎಂದು ಕೇಳಿದಳು.

ಗುರುವು ಶಿಷ್ಯಳ ತಲೆಯನ್ನು ಸೇವರಿಸುತ್ತಾ "ಗುರುವಿನಲ್ಲಿ ಆತ್ಮಾರ್ಪಣೆ ಮಾಡುವುದು" ಎಂದು ಹೇಳಿ ಮಲ್ಲಿಗೆಯನ್ನೆತ್ತಿ ತೊಡೆಯ ಮೇಲೆ ಕೂರಿಸಿಕೊಂಡನು. ತನ್ನ ಹಸ್ತಗಳಿಂದ ಮಲ್ಲಿಗೆಯ ಕಪೋಲ ಗಳನ್ನು ಸವರುತ್ತಾ "ಮಲ್ಲಿಗೆ, ನಾನು ಒಂದು ಅಪೂರ್ವವಾದ ಪೂಜಾ ವಿಧಾನವನ್ನು ದೇವಿಗೆ ಸಲ್ಲಿಸುವುದಾಗಿ ಸಂಕಲ್ಪಿಸಿದ್ದೇನೆ. ಆ ಪೂಜೆ ಯನ್ನು ವಿದ್ಯುಕ್ತವಾಗಿ ಪೂರ್ತಿಗೈದರೆ ಅಷ್ಟಸಿದ್ಧಿಗಳು ದೊರೆಯುವುವು. ಪಾದುಕಾಸಿದ್ಧಿ, ಪರಕಾಯ ಪ್ರವೇಶ, ಮುಂತಾದ ಸಿದ್ಧಿಗಳು ಕೈಸೇರು ವುದು. ಅದಕ್ಕೆ ಒಬ್ಬ ಸ್ತ್ರೀಯು ಜೊತೆಯಲ್ಲಿರಬೇಕು. ನೀನು ರಾಜ ಸ್ತ್ರೀಯಾಗಿರುವಿ ಇದು ಉತ್ತಮೋತ್ತಮವಾದುದು ನಾವಿಬ್ಬರೂ ಅಮರತ್ವವನ್ನು ಹೊಂದುವೆವು. ಈ ಮಾನವಜನ್ಮದಲ್ಲಿ ಅದಕ್ಕಿಂತಲೂ ಮಹಾಸಿದ್ಧಿಯು ಬೇರೊಂದಿಲ್ಲ. ಆಗ ನಾವಿಬ್ಬರೂ ಎಲ್ಲಿರಲಿ, ಎಲ್ಲಿಗೆ ಹೋಗಲಿ, ಮಾನವರ ಕಣ್ಣುಗಳಿಗೆ ಗೋಚರವಾಗುವುದಿಲ್ಲ" ಎಂದು ಉಪದೇಶಿಸುತ್ತಿದ್ದನು. ಈ ಮಾತುಗಳನ್ನು ಕೇಳುತ್ತಾ ಮಲ್ಲಿಗೆಗೆ ಜ್ಞಾನ ಶೂನ್ಯವಾದ ಅವಸ್ಥೆಯು ಬರುತ್ತಿದ್ದಿತು. ಅವಳು ತನ್ನನ್ನು ತಾನು ಮರೆತಳು. 'ತಾನು ಸಂನ್ಯಾಸಿನಿಯಾಗಿದ್ದೇನೆಂದೂ, ಗುರುದೇವನಲ್ಲಿ ಆತ್ಮಾರ್ಪಣೆ ಮಾಡಿದ್ದೇನೆಂದೂ' ಬೋಧೆಯಾಗುತ್ತಿದ್ದಿತು. ರಾಜನನ್ನೂ ಸರ್ವಸ್ವವನ್ನೂ ಮರೆತಿದ್ದಳು. ಜಂಗಮನು ಮಲ್ಲಿಗೆಯನ್ನು ಎರಡು ತೋಳುಗಳಿಂದ ಬಂಧಿಸಿ ಆಲಿಂಗಿಸಿದ್ದನು. ಅವನ ಅಧರಗಳು, ಮಲ್ಲಿಗೆಯ ಥಳಥಳಿಸುವ ಕಪೋಲಗಳ ಸಮೀಪಕ್ಕೆ ಹೋಗುತ್ತಿದ್ದವು. ಅಷ್ಟರಲ್ಲಿ ಬಾಗಿಲು ತೆರೆಯಿತು. ಚಾಮುಂಡಿಯು ಆ ದೃಶ್ಯವನ್ನು

ಆಶ್ಚರ್ಯಭಯಗಳಿಂದ ನೋಡಿದಳು. ಇಬ್ಬರೂ ದೂರ ಸರಿದು ನಿಂತರು. ಒಬ್ಬರ ಮುಖವನ್ನೊಬ್ಬರು ಒಂದು ಕ್ಷಣಹೊತ್ತು ನೋಡಿದರು. ಅಷ್ಟರಲ್ಲಿ ಮಲ್ಲಿಗೆಗೆ ಪೂರ್ವಸ್ಮರಣೆಯು ಬಂದಿತು. ತಲೆತಿರುಗಿ ಕುಸಿದುಬಿದ್ದಳು. ಜಂಗಮನು "ಚಾಮುಂಡಿ, ಈ ನಿನ್ನ ಸಖಿಯು ಅಸ್ವಾವಸ್ಥೆಯನ್ನು ಹೊಂದಿದ್ದಾಳೆ. ಇವಳನ್ನು ಅರಮನೆಗೆ ತಲುಪಿಸಿ ಬಾ" ಎಂದು ಅಪ್ಪಣೆ ಮಾಡಿದನು. ಚಾಮುಂಡಿಯು ಮಲ್ಲಿಗೆಯ ತಲೆಗೆ ನೀರುಕಟ್ಟಿ ಗಾಳಿಬೀಸಿ ಶೈತ್ಯೋಪಚಾರ ಮಾಡಿದಳು ಅರಮನೆಯಿಂದ ಮ್ಯಾನಾವನ್ನು ತರಿಸಿ, ಅದರಲ್ಲಿ ಮಲ್ಲಿಗೆಯನ್ನು ಕೂಡಿಸಿಕೊಂಡು, ತಾನೂ ಜೊತೆಯಲ್ಲಿ ಕೂತುಕೊಂಡು ಅರಮನೆಗೆ ಮಲ್ಲಿಗೆಯನ್ನು ಕರೆದುಕೊಂಡುಹೋಗಿ ಬಿಟ್ಟಳು.

ಅರಮನೆಯನ್ನು ಸೇರುತ್ತಲೇ ಮಲ್ಲಿಗೆಯು ಸಂಪೂರ್ಣ ಪ್ರಜ್ಞೆಯನ್ನು ಪಡೆದಳು ಚಾಮುಂಡಿಯೊಡನೆ ಮಾತನಾಡಲು ಲಜ್ಜಿತಳಾದಳು. ಏನೂ ಮಾತನಾಡಲಿಲ್ಲ. ಚಾಮುಂಡಿಯು "ಮಲ್ಲಿಗೆ, ನಾನು ಹೋಗಿ ಬರಲೇ?" ಎಂದು ಕೇಳಿದಳು.

ಮಲ್ಲಿಗೆಯು ಮೆಲ್ಲನೆಯ ಧ್ವನಿಯಿಂದ "ಚಾಮುಂಡಿ ಅಕ್ಕಾ, ಹೋಗಿ ಬಾ, ನನ್ನನ್ನು ರಕ್ಷಣೆ ಮಾಡುವ ಭಾರವು ನಿನ್ನ ಕೈಯಲ್ಲಿದೆ. ನನ್ನ ಪ್ರಾಣವನ್ನು ನೀನು ಉಳಿಸಬೇಕು" ಎಂದು ದೈನ್ಯದಿಂದ ಬೇಡಿದಳು

ಚಾಮುಂಡಿಯು ಮರುಮಾತನಾಡಲಿಲ್ಲ. ಮಲ್ಲಿಗೆಯ ತಲೆ ಸವರಿ ಮೃದುವಾಗಿ ಆಲಿಂಗಿಸಿದಳು. ಅರಮನೆಯಿಂದ ಹೊರಟು ಹೋದಳು.

ರಾತ್ರಿ ಜಂಗಮವಾಡಿಯಲ್ಲಿ ಏನೂ ಗಡಿಬಿಡಿಯಿರಲಿಲ್ಲ. ಶಿವಪೂಜೆಯಿಲ್ಲ. ಪ್ರಸಾದವಿಲ್ಲ. ಸನ್ಯಾಸಿಗಳು ಭಿಕ್ಷುಕರು ತಮ್ಮ ತಮ್ಮ ಸ್ಥಳಗಳಿಗೆ ನಿರಾಶರಾಗಿ ಹೊರಟುಹೋದರು. ಚಾಮುಂಡಿಯು ಬಂದು ಜಂಗಮದೇವನನ್ನು ನೋಡಿದಳು. ಅದೇ ಕೋಣೆಯಲ್ಲಿ ದೀಪವು

ಉರಿಯುತ್ತಿದ್ದಿತು. ಜಂಗಮದೇವನು ಆಸನದ ಮೇಲೆ ಕುಳಿತಿದ್ದನು. ರಾತ್ರಿ ಬಹಳ ಹೊತ್ತಾಗಿದ್ದರೂ, ಜಂಗಮನು ಆಸನದಿಂದ ಏಳಲಿಲ್ಲ. ಬಹು ಹೊತ್ತಾದ ಮೇಲೆ ಜಂಗಮನು ಕಣ್ಣು ತೆರೆದು ನೋಡಿದನು. ಚಾಮುಂಡಿಯು ಎದುರಿಗೆ ನಿಂತಿದ್ದಳು. "ಕಾತ್ಯಾಯಿನಿ, ಸಮರಾತ್ರಿಯ ಹೊತ್ತಾಗಿದೆ. ನೀನು, ಹೋಗಿ ಮಲಗಿ ವಿಶ್ರಮಿಸಿಕೋ" ಎಂದು ಹೇಳಿದನು.

ಕಾತ್ಯಾಯಿನಿಯು "ಗುರುದೇವಾ, ತಾವು ಪವಡಿಸಲಿಲ್ಲ" ಎಂದಳು

ಜಂಗಮನು, "ಕಾತ್ಯಾಯಿನಿ, ಇಂದು ನಾನು ಮಲಗುವುದಿಲ್ಲ. ನಾನು ಹೊರಗೆಹೋಗಿ ಸಂಚಾರ ಮಾಡಿಕೊಂಡು ಬರುತ್ತೇನೆ. ನೀನು ಹೋಗಿ ಮಲಗಿಕೊ" ಎಂದು ಹೇಳಿದನು.

"ಗುರುದೇವಾ, ಎಲ್ಲಿಗೆ ಸಂಚಾರ ?" ಎಂದು ಪ್ರಶ್ನೆಮಾಡಿದಳು.

ಜಂಗಮ "ಸ್ಮಶಾನಕ್ಕೆ ! ರುದ್ರಭೂಮಿಗೆ !" ಎಂದು ಉತ್ತರ ವಿತ್ತನು.

ಕಾತ್ಯಾಯಿನಿಯ ಹೃದಯವು ನಡುಗಿತು. ಅವಳಿಗೆ ಆ ಮಾತು ಗಳ ಅರ್ಥವಾಗಲಿಲ್ಲ. ಇಂದು ಜಂಗಮನಿಗೋ, ಮಲ್ಲಿಗೆಗೋ ಅಥವಾ ಇವರಿಬ್ಬರಿಗೂ ಏನೋ ಬಲವಾದ ಆಪತ್ತು ಸಂಭವಿಸುತ್ತದೆ ಎಂದು ಭಯಗ್ರಸ್ತಳಾದಳು. ಅಲ್ಲಿಂದ ಮೆಲ್ಲಗೆ ಸರಿದು ಹೋಗಿ ತನ್ನ ಕೋಣೆಯಲ್ಲಿ ಚಾಪೆಯ ಮೇಲೆ ಮಲಗಿದಳು. ನಿದ್ದೆ ಬರಲಿಲ್ಲ. ಏನೇನೋ ಭಾವನೆಗಳು ಹುಟ್ಟುತ್ತಿದ್ದುವು. ಅವೆಲ್ಲಾ ಕಾಲ್ಪನಿಕಗಳು. ಹಾಗೇ ಕಾತ್ಯಾಯಿನಿಯು ಚಾಪೆಯಮೇಲೆ ಬಿದ್ದು ಹೊರಳುತ್ತಿದ್ದಳು.

೧೮

ಬೆಳಗಾಯಿತು. ಮಲ್ಲಿಗೆಯ ಮನಸ್ಸಿನ ಪರಿಯು ರಾತ್ರಿಯೆಲ್ಲಾ ಹೇಗಿದ್ದಿತೋ ವರ್ಣಿಸುವುದು ಕಷ್ಟ. ಎರಡು ಭಾವನೆಗಳು ದ್ವಂದ್ವ ಯುದ್ಧವು ಅವಳ ಮನದಲ್ಲಿ ಆ ರಾತ್ರಿಯೆಲ್ಲಾ ನಡೆಯುತ್ತಿದ್ದಿತು. ತಾನು ಸನ್ಯಾಸಿನಿಯಾಗಿ ಜಂಗಮದೇವನಲ್ಲಿ ಆತ್ಮಾರ್ಪಣೆ ಮಾಡುವುದೇ? ಗೃಹಸ್ಥಾಶ್ರಮದಿಂದ ರಾಜನನ್ನು ಓಲೈಸುವುದೇ? ಎಂಬ ದ್ವಂದ್ವವು ತರಂಗತರಂಗವಾಗಿ ಬರುತ್ತಿದ್ದಿತು. ಬೆಳಕು ಹರಿಯುವ ಸಮಯದಲ್ಲಿ ಅವಳ ಕಣ್ಣುಗಳಿಗೆ ಜೊಂಪು ಹತ್ತಿತು. ಅದೇ ಸ್ವಪ್ನ–ಹಿಂದೆ ಕಂಡ ಸ್ವಪ್ನ. ಜಂಗಮನು ತನ್ನನ್ನು ದೇವಿಗೆ ಬಲಿಕೊಡುವ ಸ್ವಪ್ನ. ದುಃಖ ಭಯ ಮುಮುಕ್ಷಾವಸ್ಥೆಗಳ ಸಮ್ಮಿಳನ. ಮಲ್ಲಿಗೆಯು ಬೆಚ್ಚಿಬಿದ್ದು ಎದ್ದಳು. ಪರ್ಯಂಕದ ಮೇಲೆ ಕುಳಿತು ಚಿಂತಿಸತೊಡಗಿದಳು. ಚಿಂತೆಯು ಹರಿಯಲಿಲ್ಲ. ಬೆಳಕು ಹರಿಯಿತು.

ಮಲ್ಲಿಗೆಯು ಹಠಾತ್ತನೆ ಎದ್ದು ಸ್ನಾನಗೃಹಕ್ಕೆ ಹೋಗಿ ಸ್ನಾನ ಮಾಡಿದಳು. ಮಡಿಯನ್ನುಟ್ಟು, ದೇವರ ಪೂಜೆಯನ್ನು ಸಲ್ಲಿಸಿದಳು. ಅರಮನೆಯ ದರೋಗನನ್ನು ಕರೆಸಿ ತಾನು ರಾಜಧಾನಿಗೆ ಹೊರಡಲು ಸಿದ್ಧಳಾಗಿರುವುದಾಗಿಯೂ, ಆ ಕ್ಷಣವೇ ಅದಕ್ಕೆ ತಕ್ಕ ಸಿದ್ಧತೆಯನ್ನು ಮಾಡಬೇಕೆಂದೂ ಪ್ರಾರ್ಥನೆಮಾಡಿದಳು. ಎಲ್ಲವೂ ಸಿದ್ಧವಾಯಿತು. ಮಲ್ಲಿಗೆಯು ಮೆಟ್ಟಿಲುಗಳನ್ನು ಇಳಿದು ಬರುತ್ತಿದ್ದಳು. ಎದುರಿಗೆ ಚಾಮುಂಡಿಯನ್ನು ದರ್ಶನಮಾಡಿದಳು. ಮಲ್ಲಿಗೆಯು "ಚಾಮುಂಡಿ, ನಾನು ರಾಜಧಾನಿಗೆ ಹೋಗುತ್ತೇನೆ. ಅಪ್ಪಣೆಕೊಡು" ಎಂದು ಕೇಳಿದಳು.

ಚಾಮುಂಡಿಯು "ಏಕೆ ತಂಗಿ! ಏನು ಇಷ್ಟು ಹಠಾತ್ತನೆ?" ಎಂದು ಕೇಳಿದಳು.

ಮಲ್ಲಿಗೆಯು ಗದ್ಗದ ಕಂಠದಿಂದ "ಅಕ್ಕಾ ನನಗೆ ಮರಣ ಕಾಲವು ಸನ್ನಿಹಿತವಾಗಿದೆ. ರಾಜನ ಪಾದದೆಡೆಯಲ್ಲಿ ಈ ಶರೀರವನ್ನೊಪ್ಪಿಸಿ ಪರ ಲೋಕಕ್ಕೆ ಸಂತೋಷದಿಂದ ಹೋಗುತ್ತೇನೆ" ಎಂದು ಹೇಳಿದಳು.

ಇಬ್ಬರ ಕಣ್ಣುಗಳಲ್ಲಿಯೂ ಕಂಬನಿ ತುಂಬಿತು. ಚಾಮುಂಡಿಯು ಮರುಮಾತನಾಡಲಿಲ್ಲ. ಮಲ್ಲಿಗೆಯು ದಡದಡನೆ ಮೆಟ್ಟಿಲುಗಳನ್ನು ಇಳಿದು ಮ್ಯಾನಾದಲ್ಲಿ ಕುಳಿತಳು. ರಾಜಭಟರು ಮ್ಯಾನಾವನ್ನು ಎತ್ತಿ ಕೊಂಡು ಶ್ರೀರಂಗಪಟ್ಟಣದಕಡೆಗೆ ಭರದಿಂದ ನಡೆದರು ಚಾಮುಂಡಿಯು ಕಣ್ಣಿಗೆ ಕಾಣುವವರೆಗೂ ನೋಡುತ್ತಾ ಕಲ್ಲು ಬೊಂಬೆಯಂತೆ ಅರ ಮನೆಯ ಹೆಬ್ಬಾಗಿಲಿನಲ್ಲಿ ನಿಂತಿದ್ದಳು. ಮ್ಯಾನಾ ಕಣ್ಣು ಮರೆಯಾದ ಮೇಲೆ ತಲೆಯೆತ್ತಿ ಅರಮನೆಯ ಕಡೆಗೆ ತಿರುಗಿ ನೋಡಿದಳು. ಎಲ್ಲವೂ ಶೂನ್ಯವಾಗಿ ಕಂಡಿತು. ಅವಳು ಜಂಗಮವಾಡಿಗೆ ಹಿಂತಿರುಗಿದಳು. ಜಂಗಮವಾಡಿಯೊಳಗೆ ಹೋಗಿ ಜಂಗಮನ ಕೋಣೆಯಲ್ಲಿ ಗಾಬರಿಯಿಂದ ನೋಡಿದಳು. ಜಂಗಮನು ಮಾಯವಾಗಿದ್ದನು. ಚಾಮುಂಡಿಯು ತನ್ನ ಕೋಣೆಯಲ್ಲಿ ಹೋಗಿ ಅಳುತ್ತಾ ಕುಳಿತಳು.

ಮಲ್ಲಿಗೆಯು ಶ್ರೀರಂಗಪಟ್ಟಣದ ಅರಮನೆಗೆ ಹೋಗಿ ಸೇರಿದಳು. ಮ್ಯಾನಾವನ್ನು ಇಳಿಯುತ್ತಲೇ ಭರದಿಂದ ಮಹಾರಾಣಿಯ ಅಂತಃ ಪುರಕ್ಕೆ ಓಡಿಹೋದಳು. ಮಹಾರಾಣಿಯವರು ಮಲ್ಲಿಗೆಯು ಗಾಬರಿ ಯಾಗಿ ಬರುತ್ತಿರುವುದನ್ನು ಕಂಡು ಆಶ್ಚರ್ಯ ಗೊಂಡರು. ಮಲ್ಲಿಗೆಯು ಮಹಾರಾಣಿಯನ್ನು ಬಿಗಿಯಾಗಿ ಅಪ್ಪಿಕೊಂಡು ಅಳತೊಡಗಿದಳು. "ಮಲ್ಲಿಗೆ ಏಕೆ! ಏಕೆ ಭಯಪಡುವಿ" ಎಂದು ವಾತ್ಸಲ್ಯಪೂರಿತವಾದ ನುಡಿಗಳಿಂದ ಪ್ರಶ್ನೆ ಮಾಡಿದಳು.

ಮಲ್ಲಿಗೆಯು "ತಾಯೆ, ನನಗೆ ಅಂತ್ಯಕಾಲವು ಪ್ರಾಪ್ತವಾಗಿದೆ. ಮಹಾರಾಜರ ಪಾದದಲ್ಲಿ ಬಿದ್ದು ಪ್ರಾಣ ಬಿಡಬೇಕೆಂದು ಬಂದಿದ್ದೇನೆ. ಅದೇ ನನ್ನ ಕಡೆಯ ಇಚ್ಛೆ" ಎಂದು ಹೇಳಿದಳು.

ಮಹಾರಾಣಿಯು, ಮಲ್ಲಿಗೆಯನ್ನು ಅವಳ ಅಂತಃಪುರಕ್ಕೆ ಹೋಗಿ

ಧೈರ್ಯವಾಗಿರಬೇಕೆಂದೂ ಮಹಾರಾಜರು ಅಲ್ಲಿಗೆ ಬರುವರೆಂದೂ ಹೇಳಿದಳು. ಮಲ್ಲಿಗೆಯು ಒಪ್ಪಲಿಲ್ಲ. ಮಹಾರಾಣಿಯವರನ್ನು ಅರಮನೆಗೆ ಬಿಟ್ಟಿರುವುದಿಲ್ಲವೆಂದು ಹಠಮಾಡಿದಳು. ಮಹಾರಾಣಿಯು ಸಂತೋಷದಿಂದ ತನ್ನ ಅಂತಃಪುರದಲ್ಲಿಯೇ ಇರುವಂತೆ ಹೇಳಿ, ಮಲ್ಲಿಗೆಯನ್ನು ಆದರಿಸಿದಳು.

ಮಲ್ಲಿಗೆಯು ಹಠಾತ್ತನೆ ಮೈಸೂರಿನಿಂದ ಮಹಾರಾಣಿಯ ಅಂತಃಪುರಕ್ಕೆ ಬಂದಿರುವುದನ್ನು ಕೇಳಿ, ಚಿಕ್ಕಪ್ಪಾಜಿಯು ಆಶ್ಚರ್ಯದಿಂದ ಅಂತಃಪುರಕ್ಕೆ ಬಂದು ದರ್ಶನವಿತ್ತನು. ಮಲ್ಲಿಗೆಯು ಚಿಕ್ಕಪ್ಪಾಜಿಯ ಕಾಲುಗಳಮೇಲೆ ಬಿದ್ದು ಅಳುತ್ತಾ ಕ್ಷಮೆಬೇಡಿದಳು. ಚಿಕ್ಕಪ್ಪಾಜಿಯು ವಿಸ್ಮಯಗೊಂಡನು.

"ಮಲ್ಲಿಗೆ, ಏಕೆ ಇಷ್ಟು ಭಯಪಡುವೆ ?"ಎಂದು ಕೇಳಿದನು.

ಮಲ್ಲಿಗೆಯು "ಪ್ರಭುವೇ ಇನ್ನು ಭಯವಿಲ್ಲ. ತಮ್ಮ ಸನ್ನಿಧಾನ ಬಂದು ಸೇರಿ ತಮ್ಮ ಪಾದದಡಿಯನ್ನು ಹೊಂದಲು ಆತುರಳಾಗಿದ್ದೆನು. ನನಗೆ ಮರಣಕಾಲವು ಸನ್ನಿಹಿತವಾಗಿದೆ. ನಾನು ಮರಣಕ್ಕೆ ಸಿದ್ಧಳಾಗಿದ್ದೇನೆ. ತಮ್ಮ ಅಪ್ಪಣೆಯನ್ನು ಬೇಡಲು ಬಂದಿದ್ದೇನೆ" ಎಂದು ಕೈಮುಗಿದುಕೊಂಡು ಹೇಳಿದಳು.

ಚಿಕ್ಕಪ್ಪಾಜಿಯು ಮಲ್ಲಿಗೆಯ ಎರಡು ಕೈಗಳನ್ನೂ ಹಿಡಿದುಕೊಂಡು "ಮಲ್ಲಿಗೆ, ಏನೊಂದೂ ಅರ್ಥವಾಗುವುದಿಲ್ಲ. ಮರಣವೆಂದರೇನು ? ನನಗೆ ತಿಳಿಯದಾಗಿದೆ. ಸ್ಪಷ್ಟವಾಗಿ ಹೇಳು. ಧೈರ್ಯವಾಗಿ ಹೇಳು" ಎಂದನು.

ಮಲ್ಲಿಗೆಯು "ಮಹಾರಾಜನೇ, ಜಂಗಮದೇವನು ದೇವಿಗೆ ನನ್ನನ್ನು ಬಲಿಕೊಡಲು ಸಿದ್ಧವಾಗಿದ್ದಾನೆ. ನಾನೂ ಸಂತೋಷದಿಂದ ಒಪ್ಪಿದ್ದೇನೆ. ಈ ಜನ್ಮದಲ್ಲಿ ನೀವೇ ನನ್ನ ದೇವರು. ನೀವು ಅಪ್ಪಣೆಯನ್ನು ಕೊಡಬೇಕು. ನಾನು ಬಲಿದಾನಕ್ಕೆ ಸಿದ್ಧಳಾಗಿದ್ದೇನೆ" ಎಂದು ಹೇಳಿದಳು.

ಚಿಕ್ಕಪ್ಪಾಜಿಯು ಆಶ್ಚರ್ಯದಿಂದ, "ಜಂಗಮನು ನಿನ್ನನ್ನು ದೇವಿಗೆ ಬಲಿಕೊಡುತ್ತಾನೆ, ನೀನು ಒಪ್ಪಿದ್ದೀಯೆ, ಇದೆಲ್ಲಾ ಏನು ಮಾತುಗಳು ? ನನಗೆ ಆಶ್ಚರ್ಯವಾಗಿದೆ. ನಿನ್ನನ್ನು ಬಲಿಕೊಡಲು ಜಂಗಮನಿಗೇನು ಅಧಿಕಾರವಿದೆ ?" ಎಂದನು.

ಮಲ್ಲಿಗೆಯು "ಜಂಗಮನಿಗೆ ಅಧಿಕಾರವಿದೆ. ನಾನು ಒಪ್ಪಿದ್ದೇನೆ. ಅಂದೇ ಗರಳಪುರಿಯಲ್ಲಿಯೇ ಅವನಿಗೆ ಮಾತುಕೊಟ್ಟಿದ್ದೇನೆ. ಈಗ ಕಾಲವು ಸನ್ನಿಹಿತವಾಗಿದೆ" ಎಂದು ಹೇಳಿದಳು.

ಚಿಕ್ಕಪ್ಪಾಜಿಯು ಕ್ಷಣಹೊತ್ತು ಸ್ತಂಭೀಭಾವದಿಂದ ಇದ್ದನು. "ಮಲ್ಲಿಗೆ, ಈಗ ನೀನು ನನ್ನ ಕೈಯಲ್ಲಿರುವೆ. ಜಂಗಮನು ಬಂದು ನಿನ್ನನ್ನು ಹೇಗೆ ಕರೆದೊಯ್ಯುತ್ತಾನೋ ನೋಡುತ್ತೇನೆ. ಅವನ ಮಾಯಾ ಮಂತ್ರಗಳೊಂದೂ ನನ್ನ ಮುಂದೆ ನಡೆಯುವುದಿಲ್ಲ. ನೀನು ಇಲ್ಲಿಯೇ ಮಹಾರಾಣಿಯವರ ಬಳಿಯಲ್ಲಿರು" ಎಂದು ಹೇಳಿ ಅಂತಃಪುರದಿಂದ ಹೊರಟುಹೋದನು.

ಮಹಾರಾಣಿಯು ಮಲ್ಲಿಗೆಯನ್ನು ಸಂತೈಸಿದಳು.

ಸಮರಾತ್ರಿಯಲ್ಲಿ ಜಂಗಮವಾಡಿಯಿಂದ ಸ್ಮಶಾನಕ್ಕೆ ಹೊರಟು ಹೋದ ಜಂಗಮನು ಎಲ್ಲೆಲ್ಲಿಯೋ ಯಾರನ್ನೊ ಹುಡುಕುತ್ತಿದ್ದನು. ಬೆಳಕು ಹರಿಯಲು ಒಂದು ಜಾವ ಹೊತ್ತಿರುವಾಗ ಬೆಟ್ಟದಡಿಯಲ್ಲಿ ಒಂದು ಮಂಟಪದಲ್ಲಿ ಒಬ್ಬ ಸನ್ಯಾಸಿಯು ಕುಳಿತಿರುವುದನ್ನು ಕಂಡನು. ಅವನ ಮುಂದೆ ಬೆಂಕಿಯು ಉರಿಯುತ್ತಿದ್ದಿತು. ಸನ್ಯಾಸಿಯು ಚಿಲುಮೆ ಯಲ್ಲಿ ಭಂಗಿಯನ್ನು ಹಾಕಿ ಸೇವಿಸುತ್ತಿದ್ದನು ಆ ವಾಸನೆಯು ಆ ಮಂಟಪದಲ್ಲೆಲ್ಲಾ ವ್ಯಾಪಿಸಿದ್ದಿತು. ಜಂಗಮನು ಸಮೀಪಕ್ಕೆ ಹೋಗಿ ಬಗ್ಗಿ ಸನ್ಯಾಸಿಯ ಮುಖವನ್ನು ನೋಡಿದನು. ಪರಸ್ಪರ ಗುರುತಿಸಿ ದರು. ಸನ್ಯಾಸಿಯು ಜಂಗಮನನ್ನು ನೋಡಿ ಆಶ್ಚರ್ಯಪಟ್ಟನು. ಆ ಸನ್ಯಾಸಿಯೇ ಮೊದಲು ಜಂಗಮನನ್ನು ಮಾತನಾಡಿಸಿದನು.

"ಜಂಗಮದೇವಾ, ಈ ಅಪರಾತ್ರಿಯಲ್ಲಿ ಇಲ್ಲಿಗೆ ಹೇಗೆ ಬಂದೆ?

ಏಕೆ ಬಂದೆ ?" ಎಂದು ಕೇಳಿದನು.

ಜಂಗಮನು "ಸನ್ಯಾಸಿಯೇ ನಿನ್ನ ಹೆಸರು ವಿಶ್ವೇಶ್ವರನೇನು ? ನಿನ್ನನ್ನೇ ಹುಡುಕುತ್ತಾ ಬಂದೆ. ನೀನು ಸಹಾಯ ಮಾಡಬೇಕು" ಎಂದು ಕೈಮುಗಿದು ಪ್ರಾರ್ಥನೆ ಮಾಡಿದನು.

ಸನ್ಯಾಸಿಗೆ ಜಂಗಮನ ಬಾಯಿಯಿಂದ ತನ್ನ ಹೆಸರನ್ನು ಕೇಳಿ ಸ್ವಲ್ಪ ಆಶ್ಚರ್ಯವಾಯಿತು. "ಗುರುದೇವಾ, ನೀನು ಸರಿಯಾಗಿ ಗುರುತಿಸಿದೆ. ನನ್ನ ಹೆಸರನ್ನು ನಿನಗಾರು ಹೇಳಿದರು ?" ಎಂದು ಕೇಳಿದನು

ಜಂಗಮನು "ವಿಶ್ವೇಶ್ವರಾ, ನಿನ್ನ ಶಿಷ್ಯಳಾದ ಗಾಯಕಿಯು ನಿನ್ನ ಪರಿಚಯವನ್ನು ಹೇಳಿದಳು" ಎಂದನು.

ವಿಶ್ವೇಶ್ವರನು ಚಿಲುಮೆಯಿಂದ ಮತ್ತೊಂದು ಬಾರಿ ಹೊಗೆಯನ್ನು ಸೇವಿಸಿ ಕೆಮ್ಮಿ ಗಂಟಲು ಸರಿಮಾಡಿಕೊಂಡು, "ಗುರುದೇವಾ, ನಿನಗೆ ಅಷ್ಟೈಶ್ವರ್ಯವಿದೆ. ಅರಮನೆಯಂಥಾ ಜಂಗಮವಾಡಿಯಿದೆ. ರಾಜನು ನಿನ್ನ ಭಕ್ತನಾಗಿದ್ದಾನೆ. ಪ್ರತಿದಿನವೂ ಮೃಷ್ಟಾನ್ನವನ್ನು ಉಣ್ಣುವ ಭಕ್ತ ವೃಂದವಿದೆ. ಗುಡಿಗೋಪುರಗಳನ್ನು ಕಟ್ಟಿಸಿರುವ ಮಹಾತ್ಮೆಯಿದೆ. ಒಂದಲ್ಲ ಒಂದು ದಿನ ಈ ರಾಜ್ಯಕ್ಕೆ ನೀನೇ ರಾಜನಾಗಬಹುದು. ನನ್ನಂತಹ ಭಿಕಾರಿಯಿಂದ ನಿನಗೇನು ಪ್ರಯೋಜನವಾಗಬಹುದು" ಎಂದು ಕೇಳಿದನು.

ಜಂಗಮನು "ವಿಶ್ವೇಶ್ವರಾ, ನೀನು ಹೇಳುವುದೆಲ್ಲಾ ನಿಜ. ನಾನು ಆ ಸಕಲೈಶ್ವರ್ಯಗಳನ್ನೂ ನಿನಗೆ ಒಪ್ಪಿಸುವೆನು. ನೀನೇ ಈ ಜಂಗಮವಾಡಿಯ ಉತ್ತರಾಧಿಕಾರಿಯಾಗು. ನನಗೆ ನನ್ನ ದಾರಿಯಲ್ಲಿ ಸಹಾಯಕನಾಗು."

ವಿಶ್ವೇಶ್ವರನಿಗೆ ಮತ್ತೂ ಆಶ್ಚರ್ಯವಾಯಿತು. ಅವನು ವಿಶಾಲವಾಗಿ ತನ್ನ ಕಣ್ಣುಗಳನ್ನು ಅರಳಿಸಿ "ಜಂಗಮದೇವಾ, ನಿನ್ನ ದಾರಿಯೆಂದರೇನು, ನನ್ನ ಸಹಾಯವೆಂದರೇನು ?" ಎಂದು ಕೇಳಿದನು.

ಜಂಗಮನು "ವಿಶ್ವೇಶ್ವರಾ, ಗಾಯಕಿಯಮೇಲೆ ನಿನ್ನ ಪ್ರಭಾವವು

ಅಪಾರವಾಗಿದೆ. ಅವಳು ಈಗ ನಿನ್ನ ಶಿಷ್ಯಳಾಗಿದ್ದಾಳೆ. ನೀನು ಮನಸಾರ ಅವಳನ್ನು ನನಗೆ ಪ್ರದಾನ ಮಾಡಬೇಕು" ಎಂದನು.

ವಿಶ್ವೇಶ್ವರನು ನಗುತ್ತಾ "ಜಂಗಮದೇವಾ, ನೀನು ಕಾಮುಕನೆಂದು ಸ್ತ್ರೀಲೋಲನೆಂದು ನಾನು ಭಾವಿಸಿರಲಿಲ್ಲ. ಜನರೆಲ್ಲರೂ ಹೇಳುವಂತೆ, ನೀನು ಸಿದ್ಧಪುರುಷನೆಂದೇ ನಂಬಿದ್ದೆ. ಮಲ್ಲಿಗೆಗಾಗಿ ಆಸೆಪಡುವ ಭ್ರಮರವೆಂದು ತಿಳಿದಿರಲಿಲ್ಲ" ಎಂದನು.

ಜಂಗಮನು "ಸನ್ಯಾಸಿಯೇ ಈಗಲೂ ತಪ್ಪು ಭಾವನೆಯನ್ನು ಮಾಡಬೇಡ ನಾನು ಸ್ತ್ರೀಲೋಲುಪನಲ್ಲ ದೇವಿಯ ಸಾಕ್ಷಾತ್ಕಾರ ಕ್ಕಾಗಿ ಒಂದು ಗುಪ್ತಮಂತ್ರವನ್ನು ಪುನಶ್ಚರಣೆ ಮಾಡಲು ಸಂಕಲ್ಪಿ ಸಿದ್ದೇನೆ ಅದಕ್ಕೆ ರಾಜಸ್ತ್ರೀಯಾದ ಮಲ್ಲಿಗೆಯ ಸಹಯೋಗವು ಬೇಕು. ಇದೇ ನನ್ನ ಕಡೆಯ ಸಂಕಲ್ಪ. ಅದಕ್ಕೆ ರಾಜಸ್ತ್ರೀಯ ಸಹಾಯವು ಬೇಕು"

ವಿಶ್ವೇಶ್ವರನು ನಕ್ಕನು. "ಅಯ್ಯೋ ಹುಚ್ಚ! ಮಲ್ಲಿಗೆಯು ರಾಜ ಸ್ತ್ರೀಯಲ್ಲ. ಅವಳು ವೇಶ್ಯೆ–ನಿನ್ನ ಕರ್ಮವು ಬೂದಿಯಲ್ಲಿ ಹೋಮ ಮಾಡಿದಂತಾಗುತ್ತದೆ. ಅವಳು ಎಂದೋ ಗುರುದಕ್ಷಿಣೆಯಾಗಿ ನನ್ನಲ್ಲಿ ಆತ್ಮಾರ್ಪಣೆ ಮಾಡಿದ್ದಾಳೆ ಇಂದು ಅವಳು ರಾಜನ ಬಂಗಾರದ ಸ್ತ್ರೀಯಾಗಿದ್ದರೂ, ನಿನ್ನ ಮಂತ್ರಮೋಹಿತಳಾದ ಮೋಹಿನಿಯಾಗಿ ದ್ದರೂ, ಅವಳು ನನ್ನ ಪ್ರೇಯಸಿ. ಅವಳ ಜೀವನವು ಸಂಗೀತದಿಂದ ಆರಂಭವಾಗಿದೆ. ಅದೇ ಸಂಗೀತದಲ್ಲಿ ಕೊನೆಮುಟ್ಟುತ್ತದೆ. ನಿನ್ನ ದೇವಿಯ ಉಪಾಸನೆಯು ಸುಳ್ಳು. ರಾಜನ ಮೋಹವು ಭ್ರಾಂತಿ. ಗಾಯಕಿಯೆಂಬುದೇ ಮಲ್ಲಿಗೆಯ ನಿಜಸ್ವರೂಪ. ನಮ್ಮಿಬ್ಬರನ್ನೂ ಭಗವಂತನು ಗಾನಕಲೆಯಲ್ಲಿ ಮೇಳನಮಾಡಿರುವನು. ನಿನಗೇಕೆ ಅವಳ ಹಂಬಲ. ನಿನ್ನ ಗುರುಪಟ್ಟವನ್ನು ನಡೆಸಿಕೊಂಡು ವೈಭವದಿಂದ ಇರು" ಎಂದು ಹೇಳಿದನು.

ಜಂಗಮನು "ವಿಶ್ವೇಶ್ವರಾ, ನನ್ನ ಚಿಂತೆಯು ನಿನಗೆ ಬೇಡ.

ಮಲ್ಲಿಗೆಯ ಅಂತರಂಗವನ್ನೆಲ್ಲಾ ನೀನು ಬಲ್ಲವನು. ನೀನು ಮನಸಾರ ಅವಳನ್ನು ನನಗೆ ಬಿಟ್ಟುಕೊಡಬೇಕು. ನೀನು ಈ ಭೂಮಿಯಮೇಲಿರ ಕೂಡದು. ನಾನು ಮೊದಲು ನಿನ್ನನ್ನು ಪರಲೋಕಕ್ಕೆ ಕಳುಹಿಸಬೇಕು" ಎಂದು ಹೇಳಿ ಎದ್ದುನಿಂತನು.

ಸನ್ಯಾಸಿಯು ನಗುತ್ತಾ "ಕ್ಷೇಮವಾದ ಕಾರ್ಯ. ನಾನೆಂದೋ ಸಾವಿಗೆ ಸಿದ್ಧನಾದ ಮನುಷ್ಯ. ನೀನು ಮಂತ್ರ ಮಾಯಗಳಿಂದ ನನ್ನನ್ನು ಕೊಲ್ಲುವೆಯೋ?" ಎಂದು ಹೇಳಿ ನಗುತ್ತಾ ಚಿಲುಮೆಯಿಂದ ಮತ್ತೊಂದು ಬಾರಿ ಧೂಮವನ್ನು ಎಳೆದನು.

ಜಂಗಮನು ಕೋಪದಿಂದ ಸನ್ಯಾಸಿಯ ತೋಳನ್ನು ಹಿಡಿದು ಎತ್ತಿ ನಿಲ್ಲಿಸಿದನು. ಸೊಂಟದಿಂದ ಕಠಾರಿಯನ್ನು ತೆಗೆದು ಸನ್ಯಾಸಿಗೆ ತೋರಿಸುತ್ತಾ "ವಿಶ್ವೇಶ್ವರಾ, ಸದ್ದುಮಾಡದೇ ನನ್ನೊಡನೆ ನಡಿ. ನಿನ್ನನ್ನು ಇಲ್ಲಿ ಕೊಲ್ಲುವುದಿಲ್ಲ. ನಿನ್ನ ಅವತಾರವನ್ನು ಪೂರ್ತಿಗೊಳಿಸುತ್ತೇನೆ" ಎಂದು ಹೇಳಿದನು.

ವಿಶ್ವೇಶ್ವರನು ಭಯಪಡಲಿಲ್ಲ. ಪುನಃ ನಕ್ಕನು "ಯೋಗೀಶ್ವರನಾದ ಜಂಗಮನೇ, ನಾನೆಲ್ಲಿಗೆ ಬರಬೇಕು ?" ಎಂದು ಕೇಳಿದನು.

ಜಂಗಮನು ಗದ್ದರಿಸಿ "ಜಂಗಮವಾಡಿಗೆ ನಡೆ. ಅಲ್ಲಿ ನಿನ್ನ ಪರಲೋಕಯಾತ್ರೆ"

"ಓಹೊ, ಜಂಗಮವಾಡಿಯಲ್ಲಿಯೋ? ಸರಿಯಾಗಿದೆ. ಮಲ್ಲಿಗೆಯನ್ನು ನೀನು ಅಲ್ಲಿಯೇ ಮುಚ್ಚಿಟ್ಟಿರುವೆಯಾ? ನಿನ್ನೆಯ ಸಂಧ್ಯಾಕಾಲ ಅರಮನೆಯಲ್ಲಿ ಅಂತಃಪುರದಲ್ಲಿ ಕಾದಿದ್ದೆ. ಅವಳು ಜಂಗಮವಾಡಿಯಿಂದ ಹಿಂತಿರುಗಲಿಲ್ಲವೆಂದು ಪರಿಚಾರಿಕೆಯರು ಹೇಳಿದರು. ನಡೆ ! ನಿನ್ನೊಡನೆ ಜಂಗಮವಾಡಿಗೆ ಬರುತ್ತೇನೆ. ಆ ಜಂಗಮವಾಡಿಯಲ್ಲಿಯೇ ನನ್ನ ಸಮಾಧಿಯಾಗಲಿ. ನೀನು ಹೇಳಿದಂತೆ ಮಲ್ಲಿಗೆಯ ಎದುರಿನಲ್ಲಿಯೇ ನನ್ನ ಮರಣವು ಸಂಭವಿಸಿದರೆ ನನಗೆ ಅಮರತ್ವವು ಸಿದ್ಧಿಸಿದಷ್ಟು ಆನಂದವಾಗುತ್ತದೆ. ನಡೆ. ನಾನೇ ನಿನ್ನ ಹಿಂದೆ ಬರುತ್ತೇನೆ" ಎಂದನು.

ಜಂಗಮನು ಯೋಚನಾಪರನಾಗಿ ಹಿಂತಿರುಗಿ ನೋಡುತ್ತಾ ಎರಡು ಹೆಜ್ಜೆಯನ್ನು ಮುಂದಿಟ್ಟನು.

ವಿಶ್ವೇಶ್ವರನು ಅವನನ್ನು ಹಿಂಬಾಲಿಸುತ್ತಿದ್ದನು.

ಆಕಾಶದಲ್ಲಿ ಅರುಣೋದಯವಾಗಿದ್ದಿತು. ಆ ಅರುಣಪ್ರಭೆಯು ಭೂಮಿಯಮೇಲೆ ಬಿದ್ದಿದ್ದಿತು. ಆ ಕಾಶಾಯವಸನಧಾರಿಗಳಿಬ್ಬರ ಮೇಲೆಯೂ ಪ್ರಭೆಯು ಬಿದ್ದಿದ್ದಿತು. ವಿಶ್ವೇಶ್ವರನು ಸಾಧಾರಣ ಮನುಷ್ಯನಲ್ಲ. ಅವನ ಅಂಗಾಂಗಗಳು ಎಷ್ಟು ಬಲಿಷ್ಟವಾಗಿದ್ದು ವೆಂಬುದನ್ನು ಜಂಗಮನು ಅರಿತಿರಲಿಲ್ಲ. ಕೈಗಳನ್ನು ಸರಿಮಾಡಿಕೊಂಡು ವಿಶ್ವೇಶ್ವರನು ಜಂಗಮನ ಕೊರಲಿನ ಮೇಲೆ ಒಂದೇಟು ಕೊಟ್ಟನು. ಜಂಗಮನು ತತ್ತರಿಸಿ ಎಚ್ಚೆತ್ತು ಕಠಾರಿಯನ್ನು ಬಿಗಿಮುಷ್ಟಿಯಲ್ಲಿ ಹಿಡಿದುಕೊಳ್ಳುವಷ್ಟರಲ್ಲಿ ವಿಶ್ವೇಶ್ವರನ ಕರಲಾಘವದಿಂದ ಕಠಾರಿಯು ವಿಶ್ವೇಶ್ವರನ ಬಿಗಿಮುಷ್ಟಿಯಲ್ಲಿದ್ದಿತು. ವಿಶ್ವೇಶ್ವರನು ನಗುತ್ತಾ "ಜಂಗಮದೇವಾ, ಗುರುದೇವಾ, ತಂದೆತಾಯಿಗಳಿದ್ದರೆ ಅವರನ್ನು ನೆನೆದುಕೋ. ಶ್ರೀರಂಗದಲ್ಲಿ ಅನಾಥಳಾಗಿ ಭಿಕ್ಷೆ ಬೇಡುತ್ತಿರುವ ನಿನ್ನ ಧರ್ಮಪತ್ನಿಯನ್ನು ಒಮ್ಮೆ ಸ್ಮರಣೆಮಾಡಿಕೋ. ಅಂಧಳಾಗಿ ಹೊಟ್ಟೆ ಗಿಲ್ಲದೆ, ಸಾಯುತ್ತಿರುವ ನಿನ್ನ ಮಾತೆಯನ್ನು ಸ್ಮರಿಸಿಕೋ" ಎಂದು ಹೇಳುತ್ತಾ ಆ ಕಠಾರಿಯಿಂದ ಜಂಗಮನ ವಕ್ಷಸ್ಥಳದಲ್ಲಿ ಇರಿದನು. ಜಂಗಮನು ಹಾಹಾಕಾರ ಮಾಡುತ್ತಾ ಭೂಮಿಯಲ್ಲಿ ಬಿದ್ದನು. ವಿಶ್ವೇಶ್ವರನು, ಜಂಗಮನನ್ನು ಎತ್ತಿಕೊಂಡು ಹೋಗಿ ತಾನು ಕುಳಿತಿದ್ದ ಮಂಟಪದಲ್ಲಿ ಮಲಗಿಸಿದನು. ಜಂಗಮನಿಗೆ ಅರ್ಧಜೀವವಾಗಿತ್ತು. ರಕ್ತವು ಹರಿಯುತ್ತಿತ್ತು. ವಿಶ್ವೇಶ್ವರನು "ಜಂಗಮಾ, ನಿನ್ನ ಹೆಸರು ಶ್ರೀನಾಥನಲ್ಲವೆ ? ನಿನ್ನ ಪೂರ್ತಿಯಾಗಿ ಕೊಲ್ಲುವುದಿಲ್ಲ. ಇನ್ನು ನಿನ್ನನ್ನು ಯಾರೂ ಬದುಕಿಸಲಾರರು. ನಿನ್ನ ಪಾಪಕರ್ಮಗಳ ಸ್ಮರಣೆ ಮಾಡುತ್ತಾ ನೀನಿಲ್ಲಿ ಸಾಯಬೇಕು" ಎಂದು ಹೇಳಿ ಹೊರಟುಹೋದನು.

ಬೆಳಗಾದ ಮೇಲೆ ಒಂದು ಜಾವ ಕಳೆದಿದ್ದರೂ ಗುರುದೇವನನ್ನು

ಜಂಗಮವಾಡಿಯಲ್ಲಿ ಯಾರೂ ಕಾಣಲಿಲ್ಲ. ಎಲ್ಲರೂ ಗಾಬರಿಗೊಂಡರು. ನಾಲ್ಕು ಕಡೆಗಳಲ್ಲಿಯೂ ಹುಡುಕಲು ಆರಂಭವಾಯಿತು. ಯಾರೋ ದನಕಾಯುವವರು ಬೆಟ್ಟದ ಕಿಬ್ಬಿಯಲ್ಲಿ ಮಂಟಪದಲ್ಲಿ ಸನ್ಯಾಸಿ ಯೊಬ್ಬನು ನರಳುತ್ತಾ ಬಿದ್ದಿದ್ದಾನೆಂದು ಸಮಾಚಾರವನ್ನು ಕೊಟ್ಟರು. ಜಂಗಮವಾಡಿಯಿಂದ ಶಿಷ್ಯರು ಓಡಿಹೋಗಿ ಆ ಮಂಟಪವನ್ನು ಸೇರಿದರು. ಅಲ್ಲಿ ಅವರು ಗುರುದೇವನು ಮರ್ಮಾಹತನಾಗಿ ಬಿದ್ದಿರು ವುದನ್ನು ಕಂಡರು. ಗುರುದೇವನು ಅವರನ್ನು ಕಂಡು ನಕ್ಕನು. ತನ್ನನ್ನು ಜಂಗಮವಾಡಿಗೆ ಕರದೊಯ್ಯಬೇಕೆಂದು ಸನ್ನೆಮಾಡಿದನು ಬಲು ಜಾಗರೂಕತೆಯಿಂದ ಗುರುದೇವನನ್ನು ಜಂಗಮವಾಡಿಗೆ ಸಾಗಿಸಿದರು. ಅಲ್ಲಿ ಪೂಜಾಗೃಹದಲ್ಲಿ ತನ್ನನ್ನು ಮಲಗಿಸಬೇಕೆಂದು ಹೇಳಿದನು. ಪೂಜಾಗೃಹದಲ್ಲಿ ಮೃದುಶಯ್ಯೆಯನ್ನು ಹಾಸಿ ಮಲಗಿಸಿದರು. ಊರೊಳಗೆ ಹೋಗಿ ವೈದ್ಯರನ್ನು ಕರೆತಂದರು. ವೈದ್ಯರು ಪರೀಕ್ಷಿಸಿ ನೋಡಿದರು. ಅವರ ಮುಖದಲ್ಲಿ ಆಸೆಯಚಿನ್ಹೆಗಳೇನೂ ಕಂಡು ಬರಲಿಲ್ಲ. ಕಾತ್ಯಾಯಿನಿಯು ಜಂಗಮದೇವನ ಪಕ್ಕದಲ್ಲಿ ಬಂದು ಕುಳಿತಳು. ಅಷ್ಟು ವೇದನೆಯಿದ್ದರೂ ಜಂಗಮದೇವನ ಮುಖವು ಪ್ರಸನ್ನವಾಗಿಯೇ ಇದ್ದಿತು ಕಣ್ಣುಗಳಲ್ಲಿ ಉಜ್ವಲ ಕಾಂತಿ ಇದ್ದಿತು.

ಕಾತ್ಯಾಯಿನಿಯು "ಗುರುದೇವಾ, ಯಾರು ಈ ಘೋರಕೃತ್ಯವನ್ನೆ ಸಗಿದರು?" ಎಂದು ಕೇಳಿದಳು.

ಜಂಗಮದೇವನು, ಮೃದು ನುಡಿಯಿಂದ "ಮಹಾದೇವನು ನನಗೆ ಮುಕ್ತಿಯನ್ನು ಕರುಣಿಸಿದನು" ಎಂದು ಉತ್ತರ ಕೊಟ್ಟನು. ವೇದನೆಯು ಬಲವಾಯಿತು. ಕಠಾರಿಯನ್ನು ಕಿತ್ತು ತೆಗೆಯುವಂತೆ ಜಂಗಮನು ಸನ್ನೆ ಮಾಡಿದನು. ವೈದ್ಯರು ಮೆತ್ತಗೆ ಕಠಾರಿಯನ್ನು ಕಿತ್ತುತೆಗೆದರು. ರಕ್ತವು ಪ್ರವಹಿಸತೊಡಗಿತು. ಲೇಪಗಳನ್ನು ಹಾಕಿ ಮೆತ್ತಿದರು. ಜಂಗಮದೇವನು ನೀರು-ನೀರು ಎಂದನು. ಕಾತ್ಯಾಯಿನಿಯ ಕಮಂಡಲದಿಂದ ನೀರು ಕುಡಿಸಿದಳು. ಗುರು

ದೇವನು ಸ್ವಲ್ಪ ಸಮಾಧಾನವಾದಂತೆ ಮುಖ ಮುದ್ರೆಯಿಂದ ತೋರ್ಪಡಿಸಿದನು. ಶರೀರವಾದ್ಯಂತವೂ ಕಂಪಿಸತೊಡಗಿತು. ಗುರುದೇವನು ಆ ವೇದನೆಯನ್ನು ತಡೆದುಕೊಂಡು ನಕ್ಕನು ಪ್ರಾಣವು ಹಾರಿ ಹೋಯಿತು. ಜಂಗಮವಾಡಿಯೆಲ್ಲವೂ ಶಿವನಾಮಸ್ಮರಣೆಯಿಂದ ಪ್ರತಿಧ್ವನಿಸುತ್ತಿದ್ದಿತು. ಊರೆಲ್ಲವೂ ಸಮಾಚಾರವು ಹರಡಿತು. ಬಹು ಜನರು ಜಂಗಮದೇವನ ಅಂತ್ಯದರ್ಶನಕ್ಕಾಗಿ ಬರತೊಡಗಿದರು. ಜಂಗಮದೇವನ ಮುಖದಲ್ಲಿ ಎಳ್ಳಷ್ಟಾದರೂ ಕಾಂತಿಯು ಕುಂದಿರಲಿಲ್ಲ. ಎಲ್ಲರೂ ಗುರುದೇವನ ಪ್ರಭಾವವನ್ನು ಕೊಂಡಾಡುತ್ತಿದ್ದರು. ದೊಡ್ಡ ಜಾತ್ರೆಯೇ ನೆರೆದುಹೋಯಿತು. ಜಂಗಮವಾಡಿಯ ಮುಖಂಡರೆಲ್ಲರೂ ಸೇರಿ, ಸಮಾಧಿಯ ಏರ್ಪಾಡುಗಳನ್ನು ಮಾಡತೊಡಗಿದರು. ಜಂಗಮದೇವನಿಂದ ಜೀರ್ಣೋದ್ಧಾರವಾಗಿರುವ ತ್ರಿಣೇಶ್ವರ ದೇವಾಲಯದಲ್ಲಿಯೇ ಗುರುದೇವನ ಸಮಾಧಿಯನ್ನು ಮಾಡಬೇಕೆಂದು ತೀರ್ಮಾನಮಾಡಿದರು. ಕೊಂಬುಕಹಳೆಗಳಿಂದಲೂ, ದೀವಟಿಗೆಗಳಿಂದಲೂ, ಭಜನೆ ಕೂಟಗಳಿಂದಲೂ ಉತ್ಸವದ ಸಿದ್ಧತೆಗಳು ನಡೆದವು. ಹೂವಿನ ಪಲ್ಲಕ್ಕಿಯು ಸಿದ್ಧವಾಯಿತು. ಜಂಗಮದೇವನ ಪಾರ್ಥಿವ ಶರೀರವನ್ನು ತಂದು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿದರು ಉತ್ಸವವು ಹೊರಡುವ ಸಮಯಕ್ಕೆ ನಗರರಕ್ಷಕರಾದ ದೇವರಾಜರು ರಾಜಾಜ್ಞೆಯಿಲ್ಲದೆ ದೇವಾಲಯದಲ್ಲಿ ಗುರುದೇವರ ಸಮಾಧಿಯನ್ನು ಮಾಡಕೂಡದೆಂದು ಹೇಳಿ ಕಳುಹಿಸಿದರು. ಮುಖಂಡರಲ್ಲಿ ಜಿಜ್ಞಾಸೆಗೆ ಆರಂಭವಾಯಿತು. ಆ ಮುಖಂಡರು ಹೋಗಿ ನಗರರಕ್ಷಕರ ಭೇಟಿ ಮಾಡಿದರು. ವೃದ್ಧರಾದ ನಗರರಕ್ಷಕರು 'ಜಂಗಮದೇವನನ್ನು ಪುಣ್ಯಪುರುಷನೆಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ವೈದಿಕಾಗಮದ ದೇವಾಲಯದಲ್ಲಿ ಯಾವ ಗುರುಗಳ ಸಮಾಧಿಯನ್ನೂ ಮಾಡುವುದು ಸಂಪ್ರದಾಯ ವಿರೋಧ. ದೇವಾಲಯವು ಮಹಾರಾಜರವರಿಗೆ ಸೇರಿದ್ದು. ಅವರ ಅಪ್ಪಣೆಯಿಲ್ಲದೆ ದೇವಾಲಯದ ಪ್ರಾಕಾರದೊಳಗೆ ಸಮಾಧಿಗೆ ಅವಕಾಶ ಕೊಡಲಾಗು

ವುದಿಲ್ಲ' ಎಂದು ಹೇಳಿಬಿಟ್ಟರು. ಮುಖಂಡರು ಅವರು ಹೇಳುವುದು ನ್ಯಾಯವಾಗಿದೆ ಎಂದು ಹೇಳಿದರು. ನಗರರಕ್ಷಕರಾದ ದೇವರಾಜ ರವರು ತಾವೇ ಖುದ್ದಾಗಿ ಮಹಾರಾಜರವರಿಗೆ ಬರೆದು ಅಪ್ಪಣೆಯನ್ನು ಕೇಳುವುದಾಗಿ ವಾಗ್ದಾನಮಾಡಿದರು. ಕೂಡಲೇ ರಾಯಸದವರನ್ನು ಕರೆಸಿ ಬಿನ್ನಹಪತ್ರವನ್ನು ಬರೆಸಿದರು. ಆ ಪತ್ರದಲ್ಲಿ ಜಂಗಮದೇವನು ಮಹಾ ಪುಣ್ಯಾತ್ಮನೆಂದೂ, ಅವನ ಪಾರ್ಥಿವ ಶರೀರವನ್ನು ತ್ರಿಣೇಶ್ವರ ದೇವಾಲಯದ ಪ್ರಾಕಾರದಲ್ಲಿ ಸಮಾಧಿ ಮಾಡಬೇಕೆಂದು ಭಕ್ತಾದಿ ಗಳೆಲ್ಲರೂ ಪ್ರಾರ್ಥಿಸುತ್ತಾರೆಂದೂ, ಇದಕ್ಕೆ ಮಹಾ ಪ್ರಭುಗಳವರು ಅಪ್ಪಣೆಕೊಡಬೇಕೆಂದೂ ಬರೆಯಲ್ಪಟ್ಟದ್ದಿತು. ಈ ಒಕ್ಕಣೆಯು ಮುಖಂಡರೆಲ್ಲರಿಗೂ ಬಹಳ ಸಮಾಧಾನಕರವಾಗಿದ್ದಿತು. ಓಲೆಕಾ ರರು ಆಗಲೇ ಅಶ್ವಾರೋಹಿಗಳಾಗಿ ಈ ಬಿನ್ನಹ ಪತ್ರವನ್ನು ತೆಗೆದು ಕೊಂಡು ಶ್ರೀರಂಗಪಟ್ಟಣಕ್ಕೆ ತೆರಳಿದರು ಮುಖಂಡರೆಲ್ಲರೂ ಜಂಗಮ ವಾಡಿಗೆ ಹಿಂತಿರುಗಿದರು. ರಾತ್ರಿಯೆಲ್ಲಾ ದೀಪಗಳು ಉರಿಯುತ್ತಿದ್ದವು. ಭಜನೆಗಳು ನಡೆಯುತ್ತಿದ್ದವು. ಪ್ರಸಾದ ವಿನಿಯೋಗಗಳು ಜರುಗುತ್ತಿ ದ್ದವು. ಹೂವಿನ ಪಲ್ಲಕ್ಕಿಯಲ್ಲಿಯೇ ಗುರುದೇವನ ಶರೀರವು ಅಲಂಕೃತ ವಾಗಿ ಇಡಲ್ಪಟ್ಟದ್ದಿತು. ರಾತ್ರಿಯೆಲ್ಲವೂ ಈ ಉತ್ಸವಗಳಲ್ಲಿಯೇ ಕಳೆದುಹೋಯಿತು.

ಮಾರನೆಯದಿನ ಪ್ರಾತಃಕಾಲ ಅರಮನೆಯಲ್ಲಿ ಮಹಾರಾಜ ರವರಿಗೆ ಈ ಪತ್ರವನ್ನು ಒಪ್ಪಿಸಿದರು. ಮಹಾರಾಜನು ಮಂತ್ರಿ ಪಂಡಿತಾರಾಧ್ಯನನ್ನು ಕರೆಸಿ ಆಲೋಚನೆ ಮಾಡಿದನು. ತ್ರಿಣೇಶ್ವರ ದೇವಾಲಯದಲ್ಲಿ ಸಮಾಧಿಗೆ ಅಪ್ಪಣೆ ಕೊಡಲಾಗುವುದಿಲ್ಲವೆಂದೂ ಜಂಗಮವಾಡಿಯಲ್ಲಿಯೇ ಜಂಗಮದೇವನ ಸಮಾಧಿಯಾಗತಕ್ಕದೆಂದೂ ನಿರೂಪವು ತಯಾರಾಯಿತು. ಅದಕ್ಕೆ ರಾಜಮುದ್ರೆಯನ್ನೊತ್ತಿ ನಗರ ರಕ್ಷಕರಿಗೆ ಕಳುಹಿಸಲ್ಪಟ್ಟಿತು. ಪ್ರಾತಃಕಾಲ ಹತ್ತುಗಂಟೆಯ ಸಮ ಯದಲ್ಲಿ ಓಲೆಕಾರರು ಆ ರಾಜನಿರೂಪವನ್ನು ತೆಗೆದುಕೊಂಡು ಬಂದು

ನಗರರಕ್ಷಕರಿಗೆ ಒಪ್ಪಿಸಿದರು. ಅವರು ಜಂಗಮವಾಡಿಯ ಮುಖ್ಯಸ್ಥರನ್ನು ಕರೆಸಿ ಆ ನಿರೂಪವನ್ನು ಓದಿಹೇಳಿದರು. ಮುಖಂಡರೆಲ್ಲರೂ ಖಿನ್ನರಾದರು. ಜಂಗಮವಾಡಿಯಲ್ಲಿ ಈ ಸಮಾಚಾರವನ್ನು ತಿಳಿಸಿದರು. ಭಕ್ತವೃಂದದಲ್ಲೆಲ್ಲಾ ಗಡಿಬಿಡಿಯಾಯಿತು. ಹುಂಬಿನ ಯುವಕರು ಮುಂದೆಬಂದು ಎದೆತಟ್ಟಿ 'ನಮಗೆ ಅಪ್ಪಣೆಮಾಡಿರಿ. ದೇವಾಲಯದಲ್ಲಿಯೇ ಸಮಾಧಿಯನ್ನು ಮಾಡುತ್ತೇವೆ. ಇಟ್ಟ ಹೆಜ್ಜೆಯನ್ನು ಹಿಂದಿಡಲಾರೆವು. ನಮ್ಮ ಪ್ರಾಣಗಳು ಹೋದರೂ ಸರಿ, ಗುರುವಿನ ಸಂಕಲ್ಪವನ್ನು ಸಾಧಿಸಲೇಬೇಕು' ಎಂದು ಘರ್ಜಿಸಿದರು. ಅಲ್ಲಿ ನೆರೆದಿದ್ದ ಜನಜಂಗುಳಿಯೆಲ್ಲವೂ ದೇವಾಲಯದಲ್ಲಿಯೇ ಸಮಾಧಿ ಎಂದು ಬೊಬ್ಬೆಯಿಟ್ಟರು. ಸ್ವಲ್ಪ ಹೊತ್ತಿನಲ್ಲಿ ಈ ಗದ್ದಲವು : ಶಾಂತವಾಯಿತು. ವೃದ್ಧರಾದ ಮುಖಂಡರು ಪಲ್ಲಕ್ಕಿಯ ಸಮೀಪಕ್ಕೆ ಬಂದು ಜಂಗಮದೇವನ ಪಾದಗಳನ್ನು ಹಿಡಿದುಕೊಂಡು 'ಪರಶಿವನ ಸ್ವರೂಪಿಯಾದ ಗುರುದೇವನ ಸಮಾಧಿಗಾಗಿ ಜಗಳವಾಡಕೂಡದು. ಗುರುದೇವನು ಕೈಲಾಸದಲ್ಲಿ ಪರಶಿವನ ಸಾನ್ನಿಧ್ಯದಲ್ಲಿ ಆನಂದಭರಿತನಾಗಿದ್ದಾನೆ. ಈ ಭೂಮಿಯಲ್ಲಿ ಅವನ ನಶ್ವರ ದೇಹದ ಸಮಾಧಿಗಾಗಿ ಪಾಮರರು ಜಗಳವಾಡಿಕೊಂಡರೆ ಅವನ ಶಾಪವು ನಮಗೆ ತಟ್ಟದಿರದು ಈ ಜಂಗಮವಾಡಿಯೇ ಗುರುದೇವನ ಯೋಗಸಿದ್ಧಿಯಕ್ಷೇತ್ರ. ಇಲ್ಲಿಯೇ ಸಮಾಧಿಯಾಗಲಿ' ಎಂದು ಹೇಳಿದರು. ಆ ಶಾಂತಿಸಂದೇಶವನ್ನೇ ಭಕ್ತರೆಲ್ಲರೂ ಒಪ್ಪಿದರು. ಜಂಗಮವಾಡಿಯಲ್ಲಿ ಪೂಜಾಗೃಹದಲ್ಲಿ ವೈಭವದಿಂದ ಗುರುದೇವನ ಸಮಾಧಿಯಾಯಿತು. ಪೂಜಾದಿವಿಧಾನಗಳೆಲ್ಲವೂ ವಿಜೃಂಭಣೆಯಿಂದ ನೆರವೇರಿದವು. ಬ್ರಹ್ಮಾಂಡವಾದ ಅನ್ನಸಂತರ್ಪಣೆಯಾಯಿತು. ಭಕ್ತಾದಿಗಳು ಆ ರಾತ್ರಿಯೆಲ್ಲವನ್ನೂ ಅಲ್ಲಿಯೇ ಕಳೆದರು. ಮಹಾರಾಜರ ನಿಂದೆಗೆ ಆರಂಭವಾಯಿತು. 'ರಾಜನೇನು ಮಾಡಿಯಾನು? ಇದೆಲ್ಲಾ ಮಂತ್ರಿಯ ಕುತಂತ್ರ. ಆ ಮಂತ್ರಿಯು ಶುದ್ಧ ನಾಸ್ತಿಕ ಪರಶಿವನು ಈ ಪಾಪಕ್ಕೆ ತಕ್ಕ ಪ್ರತಿಫಲವನ್ನು ಕ್ಷಿಪ್ರವಲ್ಲಿಯೇ ಕೊಡುತ್ತಾನೆ'

ಎಂದು ಅನೇಕರು ಹೇಳಿಕೊಂಡರು. ಜಂಗಮದೇವನ ಸ್ತುತಿಯಿಂದ ಆರಂಭವಾದ ಆ ಕರಾಳರಾತ್ರಿಯು ಪಂಡಿತಾರಾಧ್ಯನ ನಿಂದೆಯಿಂದ ಮುಕ್ತಾಯಗೊಂಡಿತು

## ೧೯

ರಾಜಧಾನಿಯಲ್ಲಿ ಜಂಗಮನ ಆಕಸ್ಮಿಕ ಮರಣವಾರ್ತೆಯು ನಾನಾ ಕಥೆಗಳ ರೂಪದಲ್ಲಿ ಹಬ್ಬಿತು. ಜಂಗಮನು ವೈಷ್ಣವ ಕುಲದವನೆಂದೂ ಅವನಿಗೆ ದಿಕ್ಕಿಲ್ಲದ ಧರ್ಮಪತ್ನಿಯೊಬ್ಬಳು ಇರುವಳೆಂದೂ, ಕಣ್ಣು ಕಾಣದ ಮಾತೆಯೊಬ್ಬಳು ಇದ್ದಾಳೆಂದೂ ಜನರು ಮಾತನಾಡಿಕೊಳ್ಳುತ್ತಿದ್ದರು. ಶಿವಭಕ್ತರು ಇದೆಲ್ಲಾ ಸುಳ್ಳುಕತೆಗಳೆಂದೂ, ಜಂಗಮನು ಪರಮಾತ್ಮನ ಅವತಾರವೆಂದೂ, ಅಷ್ಟಸಿದ್ಧಿಗಳು ಅವನ ಕರಗತವಾಗಿದ್ದಿತೆಂದೂ ವರ್ಣಿಸುತ್ತಿದ್ದರು.

ಅಂತಃಪುರದಲ್ಲಿ ಮಲ್ಲಿಗೆಯು ಗುರುದೇವನ ಮರಣಕ್ಕಾಗಿ ಪರಿತಪಿಸಿದಳು. ತನ್ನ ಆಪತ್ತನ್ನು ಕೂಡಾ ಅವಳು ಪರಿಗಣಿಸಿರಲಿಲ್ಲ. ರಾಜನ ಮುಂದೆಯೂ ಒಂದೆರಡು ಬಾರಿ ತನ್ನ ಮನಸ್ಸಿನ ಪರಿತಾಪವನ್ನು ಹೇಳಿದ್ದಳು.

ಚಿಕ್ಕಪ್ಪಾಜಿಯು "ಮಲ್ಲಿಗೆ, ಆ ಜಂಗಮನು ನಿನ್ನನ್ನು ಮೋಸ ಮಾಡಿದ್ದನು ನಿನ್ನನ್ನು ಅವನು ದೇವಿಗೆ ಬಲಿಕೊಡುತ್ತಾನೆಂದು ನೀನೇ ಭಯದಿಂದ ನಡುಗುತ್ತಿರಲಿಲ್ಲವೆ ? ಈಗ ನಿನ್ನ ಜೀವನವು ನಿರುಪಾದಿಕವಾಯಿತು. ನೀನೇಕೆ ದುಃಖಿಸುವೆ. ಅವನು ವಾಮಾಚಾರದ ಉಪಾಸಕನೆಂದು ಕಾಣುತ್ತದೆ. ಅಂತಹವರು ಸ್ತ್ರೀಯರನ್ನು ಬಲಿಕೊಡುವರೆಂದು ಬಂಗಾಳದಲ್ಲಿ ನಾನು ಕೇಳಿದ್ದೆನು. ವಾಮಾಚಾರಿಗಳಲ್ಲಿ

ಕೆಲವರಿಗೆ ಸಿದ್ಧಿಯಾಗುವುದೆಂದು ಕೇಳಿದ್ದೇನೆ. ಆದರೆ ಅನೇಕರ
ಗತಿಯು ಹೀಗೆಯೇ ಆಗುತ್ತದೆ. ಈ ಬಲಿಕೊಡುವ ಸಂಪ್ರದಾಯವು
ನಮ್ಮ ದೇಶದಲ್ಲಿಲ್ಲ. ನೀನು ಅವನಲ್ಲಿ ಅರಿಯದೇ ಭಕ್ತಿಯನ್ನು ಇಟ್ಟಿದ್ದೆ
ದೇವನು ಅವನನ್ನೇ ಮುಗಿಸಿಬಿಟ್ಟನು" ಎಂದು ಹೇಳಿದನು.

ಜನರಲ್ಲಿ ಈ ವದಂತಿಯು ಅಷ್ಟಕ್ಕೇ ನಿಲ್ಲಲಿಲ್ಲ. ಮಲ್ಲಿಗೆಯ
ವಿಚಾರವಾಗಿಯೂ ನಾನಾ ವಿಧವಾಗಿ ಅಂತರಂಗದಲ್ಲಿ ಮಾತನಾಡಿ
ಕೊಳ್ಳುತ್ತಿದ್ದರು ಮಲ್ಲಿಗೆಯು ಜಂಗಮನನ್ನು ಗುರುವಾಗಿ ಪಡೆದದ್ದು,
ಪ್ರತಿ ದಿನವೂ ಅವನ ದರ್ಶನಕ್ಕೆ ಹೋಗಿ ಬರುತ್ತಿದ್ದುದು, ಇದರ
ಮೇಲೆ ಅನೇಕ ಕತೆಗಳನ್ನು ಕಟ್ಟಿ ಮಾತನಾಡಿಕೊಳ್ಳುತ್ತಿದ್ದರು
ಆದಾಗ್ಯೂ ಜಂಗಮನನ್ನು ಯಾರು ಕೊಂದರು ? ಹೇಗೆ ವಧೆ ಮಾಡಿ
ದರು ? ಎಂದು ಪ್ರಸ್ತಾಪವು ಕೊನೆ ಮುಟ್ಟಿರಲಿಲ್ಲ. ಜನಗಳ ಸ್ವಭಾ
ವವೇ ಹೀಗೆ. ಒಳ್ಳೆಯದನ್ನಾಗಲಿ ಕೆಟ್ಟದನ್ನಾಗಲೀ ಪ್ರತ್ಯಕ್ಷ ನೋಡಿ
ದವರು ಯಾರೂ ಇರುವುದಿಲ್ಲ. ಅವರವರ ಮನಸ್ಸಿನಂತೆ, ಅವರವರ
ಕಲ್ಪನಾಪ್ರಪಂಚವನ್ನು ನಿರ್ಮಿಸಿಕೊಂಡು ಆ ಹವ್ಯಾಸದಲ್ಲಿ ಮುಳುಗಿ
ತೇಲುತ್ತಾರೆ.

ಮೈಸೂರಿನಲ್ಲಿ ಜಂಗಮವಾಡಿಯಲ್ಲಿ ದಿನದಿನವೂ ಪೂಜಾದಿಗಳು
ಬಹಳ ವಿಜೃಂಭಣೆಯಿಂದ ನಡೆಯುತ್ತಿದ್ದುವು. ಜಂಗಮವಾಡಿಗೆ
ಕಾತ್ಯಾಯಿನಿಯೇ ಅಧಿಷ್ಠಾತ್ರಿ. ನಿತ್ಯವೂ ಜಂಗಮರಿಗೆ ಗಣಾರಾಧನೆ
ಯಾಗುತ್ತದೆ. ಬಡಬಗ್ಗರಿಗೆ ಅನ್ನದಾನಗಳು ನಡೆಯುತ್ತದೆ. ಇದೆಲ್ಲಾ
ಹೇಗೆ ನಡೆಯಬೇಕು. ಜಂಗಮದೇವನ ಮಹಿಮೆಯೆಂದು ಭಕ್ತಾದಿ
ಗಳು ನಂಬಿದ್ದರು. ಅನೇಕರು ಇದೆಲ್ಲಾ ಮಲ್ಲಿಯ ಸೇವಾರ್ಥವೆಂದು
ಭಾವಿಸಿಕೊಂಡಿದ್ದರು. ಕಾತ್ಯಾಯಿನಿಯ ಮಾತ್ರ ಎಲ್ಲವೂ ಪರಮೇಶ್ವರನ
ಅನುಗ್ರಹದಿಂದ ನಡೆಯುತ್ತಿದೆ ಎಂದು ಹೇಳುತ್ತಿದ್ದಳು. ಅವಳ
ಕಡೆಯ ದಿನ ಗುರುದೇವನ ಬಾಹುಬಂಧನದಲ್ಲಿ ಮಲ್ಲಿಗೆಯನ್ನು ಪ್ರತ್ಯಕ್ಷ
ವಾಗಿ ನೋಡಿದ್ದಳು. ಮಾರನೆಯ ದಿನ ಬೆಳಗಾಗುವುದರೊಳಗಾಗಿ

ಗುರುದೇವನು ಮರ್ಮಾಹತನಾಗಿ ಬಿದ್ದಿದ್ದನು. 'ರಾತ್ರಿ ಗುರುದೇವನು ಏಕೆ ಹೊರಟುಹೋದನು ? ಬೆಳಕುಹರಿಯುತ್ತಲೇ ಮಲ್ಲಿಗೆಯು ಏಕೆ ರಾಜಧಾನಿಗೆ ಹೊರಟುಹೋದಳು ? ಇದರಲ್ಲೇನೋ ಛದ್ಮಸೆಯಿದೆ' ಎಂದು ಕಾತ್ಯಾಯಿನಿಯು ಸಂಶಯಪಡುತ್ತಿದ್ದಳು ಆದರೆ ಮಲ್ಲಿಗೆಯ ಮೇಲೆ ಅವಳಿಗೆ ಯಾವ ಸಂಶಯವೂ ಇರಲಿಲ್ಲ. ಮಲ್ಲಿಗೆಯ ಗುರುಭಕ್ತಿಯಲ್ಲಿ ಅವಳಿಗೆ ಸ್ವಲ್ಪವೂ ಸಂದೇಹವಿರಲಿಲ್ಲ. ಈ ರಹಸ್ಯವು ಮಾತ್ರ ಮಲ್ಲಿಗೆಗೆ ಗೊತ್ತಿದೆಯೆಂದು, ಅವಳು ಮನಸ್ಸಿನಲ್ಲಿ ಭಾವನೆ ಮಾಡಿದಳು ಗುರುದೇವನ ಮರಣವು ಹೇಗೇ ಆಗಿರಲಿ, ಅವನು ಭಗವಂತನ ಅವತಾರವೆಂದು ಅವಳು ಮನಸ್ಸಿನಲ್ಲಿ ದೃಢವಾಗಿ ನಂಬಿದ್ದಳು. ಆ ನಂಬಿಕೆಯು ದಿನದಿನಕ್ಕೆ ಅಭಿವೃದ್ಧಿಯಾಗುತ್ತಲೇ ಇತ್ತು. ಜಂಗಮವಾಡಿಯಲ್ಲಿ ಹಲವರು ಯುವಕರು ಬಂದು ಜಂಗಮನ ಭಕ್ತರಾಗಿದ್ದರು. ಇವರಿಗೆ ಎಲ್ಲಿಯೂ ನೆಲೆಯಿರಲಿಲ್ಲ. ಜಂಗಮನ ಸಾನ್ನಿಧ್ಯದಲ್ಲಿ ಅವರುಗಳಿಗೆ ಪೂಜ್ಯತೆಯಿದ್ದಿತು. ದೇವಾಲಯದಲ್ಲಿ ಗುರುದೇವನ ಸಮಾಧಿಯನ್ನು, ನಿಶೇಧಿಸಿದ್ದರಿಂದ ಅವರ ಮನಸ್ಸಿಗೆ, ಬಹಳ ಖಾರವು ಹತ್ತಿದ್ದಿತು. ಗುರುಭಕ್ತಮಂಡಲಿಯೊಂದನ್ನು ಅವರು ನಿರ್ಮಿಸಿಕೊಂಡಿದ್ದರು ಆ ಗುರುಭಕ್ತಮಂಡಲಿಯು ಪ್ರತ್ಯೇಕವಾದುದು. ಅವರಿಗೆ ಮತ್ತಾವ ಯೋಗೀಶ್ವರನಿಗಿಂತಲೂ, ಮತ್ತಾವ ಜಂಗಮನಿಗಿಂತಲೂ, ಪರಮೇಶ್ವರನಿಗಿಂತಲೂ ಗುರುದೇವನೇ ದೊಡ್ಡವನು. ಈ ಗುರುವೆಂದರೆ ಸಮಾಧಿಸ್ತನಾದ ಜಂಗಮದೇವನೊಬ್ಬನೇ ಗುರುವು ಹೀಗೆ ಸಂಘವನ್ನು ಕಟ್ಟಿಕೊಂಡಿದ್ದರು. ಆ ಸಂಘದಿಂದಲೇ ಅವರಿಗೆ ಪ್ರತಿಷ್ಠೆ. ಜಂಗಮದೇವನು ಕೈಲಾಸಕ್ಕೆ ನೇರವಾಗಿ ಹೋಗಿದ್ದಾನೆಂದು ಅವರು ಹೇಳುತ್ತಿದ್ದಾಗ್ಯೂ, ಜಂಗಮದೇವನ ಕೊಲೆಯಾದುದನ್ನು ಅವರು ಪ್ರತ್ಯಕ್ಷವಾಗಿ ನೋಡಿದ್ದರು. ಈ ಕೊಲೆಗಡುಕನಾರೆಂಬುದನ್ನು ಪತ್ತೆಮಾಡಿ, ಚಿತ್ರವಧೆ ಮಾಡಬೇಕೆಂದು ಅವರು ಸಂಕಲ್ಪಮಾಡಿದ್ದರು. ಒಂದು ವರ್ಷವು ಕಳೆದುಹೋಯಿತು. ಅಂದಿನ

ದಿನ ವಿಶೇಷ ಪೂಜಾದಿಗಳನ್ನು ಭಜನೆಗಳನ್ನು ನಡೆಸಬೇಕೆಂದು ಈ ಗುರು ಭಕ್ತರುಗಳು ಸಂಕಲ್ಪಮಾಡಿಕೊಂಡರು. ರಾಜಧಾನಿಗೆ ಹೋಗಿ ರಾಜನಿಗೂ ಮಂತ್ರಿಗೂ ಆಮಂತ್ರಣವನ್ನು ಕೊಟ್ಟರು. ಮಲ್ಲಿಗೆಯ ಭೇಟಿ ಮಾಡಿ ಗುರುದೇವನ ಪೂಜೆಗೆ ಬರಬೇಕೆಂದು ಆಮಂತ್ರಣವಿತ್ತರು. ಮೈಸೂರಿನ ಜಂಗಮವಾಡಿಯಲ್ಲಿ ಉತ್ಸವದ ಸಿದ್ಧತೆಗಳೆಲ್ಲಾ ನಡೆಯುತ್ತಿದ್ದವು. ಮಲ್ಲಿಗೆಯು ರಾಜದೂತರ ಮುಖಾಂತರ ಒಂದು ಸಾವಿರ ರೂಪಾಯಿಗಳನ್ನು ಕಾತ್ಯಾಯಿನಿದೇವಿಯ ವಶಕ್ಕೆ ಕಳುಹಿಸಿಕೊಟ್ಟಳು. ಮೈಸೂರು ಉತ್ಸವದ ದಿನ ಬಂದಿತು. ಆ ದಿನ ಪ್ರಾತಃಕಾಲ ಜಂಗಮವಾಡಿಯಲ್ಲಿ ಭಕ್ತರು ಭಜನೆಗೆ ಆರಂಭಮಾಡಿದ್ದರು. ಪ್ರಾತಃಕಾಲ ಭಜನೆಯಾದನಂತರ ಊರಿನಲ್ಲೆಲ್ಲಾ ಭಜನೆಯು ಹೊರಟಿತು. ಭಜನೆಯ ಕೂಟವು ಅರಮನೆಯ ಮುಂದೆ ಬರುವಾಗ ರಾಜನ ನಿಂದೆಯ ಕೂಗುಗಳು, ಮಂತ್ರಿಯ ಅವಹೇಳನ ವಾಕ್ಯಗಳು, ಘೋರ್ಗರ್ಜಿಸದವು. ತ್ರಿಣೇಶ್ವರ ದೇವಾಲಯದ ಮುಂದೆ ಭಜನೆಯು ಬಂದಾಗ ದೊಡ್ಡ ಗದ್ದಲವೆದ್ದಿತು. ದೇವಾಲಯವನ್ನು ಆ ಭಕ್ತಕೂಟದವರು, ಪ್ರತ್ಯಕ್ಷವಾಗಿ ನಿಂದಿಸಿದರು. ಹೀಗೆ ಪ್ರಥಮ ದಿನದ ಭಜನೆಯ ಉತ್ಸವದಿಂದ ವಿಶೇಷ ಗಲಭೆಯುಂಟಾಯಿತು. ಈ ಸಮಾಚಾರಗಳು ಕಾತ್ಯಾಯಿನಿದೇವಿಗೆ ವರದಿಯಾದವು. ಅವಳು ಆ ತರುಣ ಮುಖಂಡರನ್ನು ಕರೆದು ಅಂಥಾ ಕಾರ್ಯಗಳಿಂದ ಜಂಗಮವಾಡಿಗೆ ಕೆಟ್ಟ ಹೆಸರು ಬರುವುದೆಂದೂ, ಸಮಾಧಿಯಲ್ಲಿರುವ ಜಂಗಮದೇವರಿಗೆ ಅಪಚಾರ ಮಾಡಿದಂತಾಗುವುದೆಂದೂ ವಿವೇಕವನ್ನು ಹೇಳಿದಳು. ಅದೊಂದೂ ಫಲಿಸಲಿಲ್ಲ. ಆ ಉತ್ಸವವು ಹನ್ನೆರಡು ದಿನಗಳು ನಡೆಯುವುದೆಂದು ನಿಷ್ಕರ್ಶೆಯಾಗಿದ್ದಿತು. ಸಂಧ್ಯಾಕಾಲದ ಸಮಯಕ್ಕೆ ಸರಿಯಾಗಿ ನಗರರಕ್ಷಕರು ಭಜನೆಯ ಉತ್ಸವವು ಊರಿಗೆ ಬರಕೂಡದೆಂದು ಡಂಗೂರ ಹಾಕಿದರು. ಗುರುಭಕ್ತಮಂಡಲಿಯ ಮುಖಂಡರುಗಳು ಉದ್ವಿಗ್ನರಾದರು. ಅನೇಕ ಚರ್ಚೆಗಳು ನಡೆದವು. ಕೊನೆಗೆ ಕಾತ್ಯಾಯಿನಿಯ ಮಾತೇ ಫಲಿಸಿತು.

ಉತ್ಸವವು ಊರಿನೊಳಗೆ ಹೋಗಲಿಲ್ಲ. ಹನ್ನೆರಡು ದಿನಗಳು ಉತ್ಸವ ವೇನೋ ಜರಗಿತು. ತರುಣ ಮುಖಂಡರು ಆ ಜಂಗಮವಾಡಿಯನ್ನು ಬಿಟ್ಟುಬಿಡಬೇಕೆಂದೂ ಜಂಗಮನು ಮರಣೋನ್ಮುಖನಾಗಿ ಬಿದ್ದಿದ್ದ ಮಂಟಪದಲ್ಲಿಯೇ ಗುರುದೇವನ ಮಂದಿರವನ್ನು ನಿರ್ಮಾಣ ಮಾಡ ಬೇಕೆಂದೂ ತೀರ್ಮಾನ ಮಾಡಿದರು ಅಂದಿನಿಂದ ಅವರು ಜಂಗಮ ವಾಡಿಗೆ ಬರುವುದನ್ನು ಬಿಟ್ಟುಬಿಟ್ಟರು ಆ ಗವಿಯ ಮಂಟಪದಲ್ಲಿಯೇ ಪ್ರತಿದಿನವೂ ಅವರುಗಳು ಭಜನೆ ಮಾಡುತ್ತಿದ್ದರು. ಸಭೆಗಳನ್ನು ಮಾಡುತ್ತಿದ್ದರು. ಈ ತರುಣರು ತಮ್ಮ ಪ್ರಭಾವವನ್ನು ರಾಜ್ಯದ ಮೇಲೆ ಬೀರಬೇಕೆಂದು ನಿಶ್ಚಯಮಾಡಿದರು. ರಾಜ್ಯದಲ್ಲಿ ಅನೇಕ ಊರುಗಳಲ್ಲಿ ಅನೇಕ ಸ್ಥಳಗಳಲ್ಲಿ ಈ ಭಜನೆಗಳಿಗೆ ಆರಂಭವಾಯಿತು. ಆ ಭಜನೆಯ ಪದಗಳಲ್ಲಿ ರಾಜನ ನಿಂದೆ, ಪಂಡಿತಾರಾಧ್ಯನ ನಿಂದೆಗಳು ತುಂಬಿದ್ದವು. ಇವೆಲ್ಲಾ ಮಹಾರಾಜರಿಗೆ ವರದಿಯಾಗಿದ್ದಿತು.

ಮಂತ್ರಿಯು ಇವರನ್ನೆಲ್ಲಾ ಹಿಡಿತರಿಸಿ ಗಡೀಪಾರು ಮಾಡಿಸ ಬೇಕೆಂದು ಯೋಚನೆ ಮಾಡುತ್ತಿದ್ದನು ಇದರ ಜೊತೆಯಲ್ಲಿ ಅರ ಮನೆಯ ಆವರಣದಲ್ಲಿಯೂ ಅನೇಕ ಅಸಮಾಧಾನಗಳು ಹುಟ್ಟಿಕೊಂಡಿ ದ್ದುವು. ಅರಮನೆಯಲ್ಲಿ ಜಂಗಮರುಗಳಿಗೆ ಪ್ರವೇಶವೇ ಇಲ್ಲದಂತಾ ಗಿತ್ತು. ವೈಷ್ಣವ ಮಠಗಳಿಗೂ ವಿಶೇಷ ಪುರಸ್ಕಾರವಿರಲಿಲ್ಲ. ವೈದಿಕ ಬ್ರಾಹ್ಮಣರಿಗೆ ಹೆಚ್ಚು ಮನ್ನಣೆಯಿರಲಿಲ್ಲ. ಇವರಲ್ಲೆಲ್ಲಾ ಅಸಮಾ ಧಾನಗಳು ತುಂಬಿ ತುಳುಕುತ್ತಿದ್ದವು. ಪಂಡಿತಾರಾಧ್ಯನು ನಾಸ್ತಿಕ ನೆಂದೂ, ಅವನೇ ಇದಕ್ಕೆಲ್ಲಾ ಕಾರಣಕರ್ತನೆಂದೂ ಮಠಾಧಿಕಾರಿ ಗಳು ಭಾವಿಸಿದ್ದರು. ಅನೇಕರು ಔದಾಸೀನ್ಯದಿಂದ ಇದ್ದರು. ಹಲವರು ಧೈರ್ಯದಿಂದ ತಮ್ಮ ಅಭಿಪ್ರಾಯಗಳನ್ನು ಮಹಾರಾಜರವರಲ್ಲಿಯೂ ಮಂತ್ರಿಯಲ್ಲಿಯೂ ತಿಳಿಸಿದ್ದರು. ಮಂತ್ರಿಯು ಇದನ್ನೆಲ್ಲಾ ತಿಳಿದಿದ್ದನು. ಇದಕ್ಕೆ ಪ್ರತೀಕಾರವನ್ನು ಎಸಗಬಾರದೆಂದು ಅವನು ನಿಶ್ಚಯಮಾಡಿ ದ್ದನು. ಈ ಮಠಾಚಾರ್ಯರುಗಳು ಪ್ರತ್ಯಕ್ಷವಾಗಿ ಯಾವ ಕಾರ್ಯ

ವನ್ನು ಕೈಗೊಳ್ಳುವುದಕ್ಕೂ ಅಸಮರ್ಥರಾಗಿದ್ದರು. ರಾಜನಿಗೆ ಕೇಡು ಗಾಲವು ಬಂದಿದೆಯೆಂದು ಶಪಿಸುತ್ತಿದ್ದರು.

ವರ್ಷೇವರ್ಷೆ ನಡೆಯುವಂತೆ ಶ್ರೀರಂಗಪಟ್ಟಣದಲ್ಲಿ ವೈವಾಳಿಗೆಯ ಉತ್ಸವಗಳು ನಡೆಯುತ್ತಿದ್ದವು. ಮಹಾರಾಜನು ಪದ್ಧತಿಯ ಪ್ರಕಾರ ಪ್ರತಿದಿನವೂ ಶ್ರೀರಂಗನಾಥನ ದೇವಾಲಯಕ್ಕೆ ಹೋಗಿ ಉತ್ಸವಗಳನ್ನು ಯಥಾವಿಧಿಯಾಗಿ ನಡೆಸುತ್ತಿದ್ದನು. ಆ ಉತ್ಸವಕ್ಕೆ ದೇಶವಿದೇಶಗಳಿಂದ ಜನಗಳು ಬಂದುಸೇರುತ್ತಿದ್ದರು ವಿದ್ವಾಂಸರು, ಗಾಯಕರು, ಭಕ್ತರುಗಳು ಎಲ್ಲೆಲ್ಲಿಯೂ ನೆರೆದಿದ್ದರು ಶ್ರೀರಂಗಪಟ್ಟಣಕ್ಕೆಲ್ಲಾ ಅಭೂತಪೂರ್ವವಾದ ಕಳೆಕಟ್ಟಿದಂತಾಗಿದ್ದಿತು. ಎಲ್ಲೆಲ್ಲಿಯೂ ಭಜನೆಯ ಗುಂಪುಗಳು ಸೇರಿ ಭಜನೆಯನ್ನು ಮಾಡುತ್ತಿದ್ದರು. ಈ ಉತ್ಸವವು ಆರಂಭವಾದಮೇಲೆ ಆರಾಧ್ಯನು ರಾಜರ ಭೇಟಿಮಾಡಿರಲಿಲ್ಲ. ಅಂದು ಮಧ್ಯಾಹ್ನಾನ್ತರ ಅರಮನೆಗೆ ಬರಬೇಕೆಂದು ಮಹಾರಾಜರ ಕರೆ ಬಂದಿದ್ದಿತು. ಮಂತ್ರಿಯು ಮ್ಯಾನಾದಲ್ಲಿ ಕುಳಿತುಕೊಂಡು ಅರಮನೆಗೆ ಹೊರಟನು. ದಾರಿಯುದ್ದಕ್ಕೂ ಆ ಉತ್ಸವಗಳನ್ನು ನೋಡುತ್ತಾ ಸಂತೋಷಪಡುತ್ತಿದ್ದನು. ಮ್ಯಾನಾವು ಒಳಕೋಟೆಯ ಬಾಗಿಲು ದಾಟಿ ಅರಮನೆಯ ಹೊರಗಿನ ಆವರಣಕ್ಕೆ ತಲುಪುವ ಸ್ಥಳದಲ್ಲಿ ಬೈರಾಗಿಗಳ ಗುಂಪೊಂದು ನೇರಿದ್ದಿತು. ಮಂತ್ರಿಯು ಅನೇಕ ಭಜನೆಯ ಗುಂಪುಗಳನ್ನು ನೋಡುತ್ತಾ ಹೋದಂತೆ ಆ ಗುಂಪಿನ ಕಡೆಗೂ ಆದರದಿಂದ ತಿರುಗಿನೋಡಿದನು. ಆ ಗುಂಪು ಮ್ಯಾನಾದ ಸಮಿಾಪಕ್ಕೆ ಬಂದಿತು. ಪಂಡಿತಾರಾಧ್ಯನು ತಲೆಯನ್ನು ಹೊರಗಿಟ್ಟು ನೋಡಿದನು. ಗುಂಪಿನಿಂದ ಯಾವನೋ ಒಬ್ಬನು ಮುಂದೆ ನುಗ್ಗಿ ಬಂದು ಆರಾಧ್ಯನ ತಲೆಗೆ ಮಚ್ಚುಕತ್ತಿಯಿಂದ ಒಂದೇಟು ಹೊಡೆದನು. ತಲೆಯು ಸೀಳಿ ರಕ್ತವು ಹರಿಯಲಾರಂಭವಾಯಿತು. ಮಂತ್ರಿಯನ್ನು ಭೂಮಿಗೆಳೆದು ಹಾಕಿದರು. ಕೈಕಾಲುಗಳನ್ನು ಕತ್ತರಿಸಿದರು. ಇದೆಲ್ಲವೂ ಕ್ಷಣಾರ್ಧದಲ್ಲಿ ನಡೆದುಹೋಯಿತು. ಜನಗಳ ಗುಂಪು ಸುತ್ತಲೂ ನೆರೆ

ಯಿತು. ಕೊಲೆಗಾರರು ಗುಂಪಿನಲ್ಲಿ ನುಸುಳಿಕೊಂಡು ಓಡಿಹೋದರು.

ನಗರದಲ್ಲೆಲ್ಲಾ ಹಾಹಾಕಾರವೆದ್ದಿತು. ರಾಜಕರ್ಮಚಾರಿಗಳು ಆ ಕ್ಷಣದಲ್ಲಿಯೇ ಶ್ರೀರಂಗಪಟ್ಟಣದಲ್ಲಿದ್ದ ಅನೇಕ ಬೈರಾಗಿಗಳನ್ನು ಜಂಗಮರನ್ನು ಬಂಧಿಸಿ ಕಾರಾಗೃಹಕ್ಕೆ ಒಯ್ದರು. ಈ ಸಮಾಚಾರ ರಾಜನ ಕಿವಿಗೆ ಬಿದ್ದಿತು. ಸಿಡಿಲು ಬಡಿದಂತಾಯಿತು. ರಾಜನು, ಅರಮನೆಯಲ್ಲಿ ಮಂತ್ರಿಯ ಭೇಟಿಗಾಗಿ ನಿರೀಕ್ಷಿಸುತ್ತಾ ಕುಳಿತಿದ್ದನು. ದೂತರು ಪಂಡಿತನ ಘೋರಕೊಲೆಯ ವಾರ್ತೆಯನ್ನು ತಂದು, ಭಯದಿಂದ ಬಿನ್ನಹ ಮಾಡಿದರು. ರಾಜನು ಇದ್ದಕ್ಕಿದಂತೆ ಗಾಬರಿಯಿಂದ ಎದ್ದು ಆ ದೂತರ ಹಿಂದೆಯೇ ಹೊರಟನು. ಕಾಲುನಡೆಯಲ್ಲಿಯೇ, ನಡೆದು ಹೋದನು. ದೂತರು ಆ ಘೋರ ದೃಶ್ಯವು ನಡೆದಿದ್ದ ಸ್ಥಳಕ್ಕೆ ರಾಜನನ್ನು ಕರೆದೊಯ್ದರು. ರಾಜನು ಸಮೀಪಕ್ಕೆ ಹೋಗಿನಿಂತನು. ತನ್ನ ಪ್ರಾಣ ಸ್ನೇಹಿತನ ಚಿತ್ರವಧೆಯನ್ನು ನೋಡುತ್ತಾನಿಂತನು. ಶಿಲಾಮೂರ್ತಿಯಂತೆ ಬಹಳಹೊತ್ತು ನಿಂತಿದ್ದನು. ಯಾರಿಗೂ ರಾಜನ ಸಮೀಪಕ್ಕೆ ಬಂದು ಮಾತನಾಡುವ ಧೈರ್ಯವಿರಲಿಲ್ಲ. ಸೂರ್ಯಾಸ್ತಮಾನವಾಗಿ ಕತ್ತಲೆಯು ಕವಿದಿದ್ದಿತು. ಆ ಅಂಗಳದಲ್ಲೆಲ್ಲಾ ದೊಡ್ಡ ದೊಡ್ಡ ದೀವಿಟಿಗೆಗಳು ಉರಿಯುತ್ತಿದ್ದವು ಅಧಿಕಾರಿಗಳು ಮಂತ್ರಿಗಳು ಸೇನಾನಾಯಕರು ಎಲ್ಲರೂ ಬಂದು ದೂರದಲ್ಲಿ ನಿಂತಿದ್ದರು. ವಿದ್ವಾಂಸರುಗಳೂ, ಪುರೋಹಿತರುಗಳೂ, ಧರ್ಮಾಧಿಕಾರಿಗಳೂ ಆ ದೃಶ್ಯವನ್ನು ನೋಡುತ್ತಾ ಪರಸ್ಪರ ಮಾತನಾಡಿಕೊಳ್ಳುತ್ತಾ ನಿಂತಿದ್ದರು. ರಾಜಬಂಧುಗಳು ಅಲ್ಲಿ ಬಂದು ನೆರೆದಿದ್ದರು. ರಾಜನು ಯಾವ ಮಾತನ್ನೂ ಆಡಲಿಲ್ಲ. ಯಾರು ಕೊಲೆ ಮಾಡಿದರೆಂದು ವಿಚಾರಿಸಲೂ ಇಲ್ಲ. ಕಲ್ಲಿನ ಬೊಂಬೆಯಂತೆ ಘನೀಭೂತವಾದ ದುಃಖದ ಮೂರ್ತಿಯಂತೆ ರಾಜನು ನಿಂತಿದ್ದನು. ಅವನ ಮನಸ್ಸಿನಲ್ಲಿ ಪಂಡಿತನಿಗೂ ತನಗೂ ಇದ್ದ ಬಾಲ್ಯ ಸ್ನೇಹ, ವಿದೇಶಗಳಲ್ಲಿ ತಾವಿಬ್ಬರೂ ಪಾಡುಪಟ್ಟ ಅನುಭವಗಳು ಪುನಃ ತಮ್ಮ ರಾಜ್ಯಕ್ಕೆ ಬಂದಮೇಲೆ ಪಂಡಿತನು ಮಂತ್ರಿಪದವಿಯನ್ನು ಸ್ವೀಕರಿ

ಸಿದ್ದು ಇವೇ ಮುಂತಾದ ಅವರಿಬ್ಬರ ಗೆಳೆತನದ ಚಿತ್ರಗಳು ಅವನ ಹೃದಯಪಟಲದ ಮೇಲೆ ರಂಗುರಂಗಾಗಿ ಚಿತ್ರಿತವಾಗುತ್ತಿದ್ದವು. ಕಣ್ಣೆದುರಿಗಿರುವ ಈ ಚಿತ್ರವಧೆಯು ಹೃದಯದಲ್ಲಿ ರಣರಣಾತ್ಕಾರ ಮಾಡುತ್ತಿದ್ದಿತು. ಬಹಳ ಹೊತ್ತಾದಮೇಲೆ ರಾಜನು ದೂತರ ಕಡೆಗೆ ತಿರುಗಿ, ಅರಮನೆಯ ಭಕ್ಷಿಗಳನ್ನು ಕರೆತರುವಂತೆ ಆಜ್ಞೆಯಿತ್ತನು. ಅಲ್ಲಿಯೇ ಇದ್ದ ಭಕ್ಷಿಗಳು ಮುಂದೆಬಂದು ನಿಂತರು. ಆರಾಧ್ಯನ ಮೃತ ದೇಹವನ್ನು ಕಾವೇರಿಯ ದಂಡೆಗೆ ಸಾಗಿಸಬೇಕೆಂದೂ, ಅಲ್ಲಿ ಅಂತ್ಯ ಕ್ರಿಯೆಗಳು ನಡೆಯಬೇಕೆಂದೂ ಅಪ್ಪಣೆಯಿತ್ತನು. ಆ ಶರೀರವನ್ನು ಪಲ್ಲಕ್ಕಿಯಲ್ಲಿಟ್ಟು ಹೂವಿನಿಂದ ಅಲಂಕರಿಸಿ ಆ ಪಲ್ಲಕ್ಕಿಯನ್ನು ಉತ್ಸವ ದಿಂದ ಕೋಟೆಯ ಹೊರಗೆ ನದೀತೀರಕ್ಕೆ ತೆಗೆದುಕೊಂಡು ಹೋದರು. ರಾಜನು ಕಾಲುನಡೆಯಲ್ಲಿಯೇ ಆ ಪ್ರದೇಶಕ್ಕೆ ನಡೆದುಹೋದನು. ಅರಮನೆಯ ಪುರೋಹಿತರು ಮಹಾರಾಜರು ಬರುವ ಪದ್ಧತಿಯಿಲ್ಲ ವೆಂದು ರಾಜರಿಗೆ ವಿನಯದಿಂದ ತಿಳಿಸಿದರು. ರಾಜನು ಅದಕ್ಕೆ ಉತ್ತರ ಕೊಡಲಿಲ್ಲ. ಕಾವೇರಿಯ ದಂಡೆಯಲ್ಲಿ ಚಿತೆಯು ಸಿದ್ಧವಾಯಿತು. ಚಿತೆಯಮೇಲೆ ಪಂಡಿತನ ದೇಹವನ್ನು ಇಟ್ಟರು. ರಾಜನು ಸ್ವಹಸ್ತ ದಿಂದ ಆ ಚಿತೆಗೆ ಬೆಂಕಿಹಚ್ಚಿದನು. ಚಿತೆಯು ಧಗಧಗನೆ ಉರಿಯ ಲಾರಂಭಿಸಿತು. ಮಧ್ಯರಾತ್ರಿಯ ಹೊತ್ತಿಗೆ ಯಜ್ಞೇಶ್ವರನು ಶಾಂತ ನಾದನು. ರಾಜನು ಆ ಸಮರಾತ್ರಿಯಲ್ಲಿ ಕಾವೇರಿಯಲ್ಲಿ ಮಿಂದು ಆರ್ದ್ರ ವಸ್ತ್ರಗಳಿಂದಲೇ ಅರಮನೆಗೆ ಹಿಂತಿರುಗಿದನು. ಅಧಿಕಾರಿಗಳು ರಾಜ ಬಂಧುಗಳು ವಿದ್ವಾಂಸರುಗಳು ಕಾವೇರಿಯಲ್ಲಿ ಮಿಂದು ಅರಮನೆಯ ವರೆಗೆ ರಾಜನನ್ನು ಹಿಂಬಾಲಿಸಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಮೂರನೆಯದಿನ ರಾಜನು, ಮಂತ್ರಿಯ ವಧೆಯಾದಮೇಲೆ ನಗರ ರಕ್ಷಕರು ಯಾರು ಯಾರನ್ನು ಬಂಧಿಸಿ ಕಾರಾಗೃಹದಲ್ಲಿಟ್ಟಿದ್ದರೋ ಅವರೆಲ್ಲರನ್ನೂ ಬಿಟ್ಟುಬಿಡುವಂತೆ ಆಜ್ಞೆಮಾಡಿದನು ಇದನ್ನು ನೋಡಿ ಅಧಿಕಾರಿಗಳೆಲ್ಲರಿಗೂ ಆಶ್ಚರ್ಯವಾಯಿತು.

ರಾಜನು ಅತ್ಯಂತ ಭಕ್ತಿಭಾವದಿಂದ ಪಂಡಿತನ ಉತ್ತರಕ್ರಿಯೆ ಗಳನ್ನೆಲ್ಲಾ ಮಾಡಿಸಿದನು. ದಾನಧರ್ಮ ಅನ್ನದಾನ ಬ್ರಾಹ್ಮಣ ಸಂತರ್ಪಣೆಗಳು ಭೂರಿದಕ್ಷಿಣೆಗಳು ಯಥೇಚ್ಛವಾಗಿ ಕೊಡಲ್ಪಟ್ಟವು. ಪಂಡಿತನ ಉತ್ತರಕ್ರಿಯಾದಿಗಳೆಲ್ಲಾ ಪೂರೈಸುವವರೆಗೆ ರಾಜನು ಅಂತಃಪುರಕ್ಕೆ ಹೋಗಲಿಲ್ಲ. ಮಹಾರಾಣಿಯವರನ್ನೂ ಚಿಕ್ಕರಾಣಿ ಯವರನ್ನೂ ಭೇಟಿಮಾಡಲಿಲ್ಲ. ಮಹಾರಾಣಿಯವರೇ ಒಂದೆರಡುಬಾರಿ ರಾಜರ ಆವಾಸಕ್ಕೆ ಬಂದು ಭೇಟಿಮಾಡಿ ಮಹಾರಾಜರಿಗೆ ಸಮಾಧಾ ನೋಕ್ತಿಗಳನ್ನು ಹೇಳಿಹೋದರು. ಮಹಾರಾಜನಿಗೂ ಪಂಡಿತನಿಗೂ ಇದ್ದ ಪ್ರಾಣಪ್ರಾಣ ಸ್ನೇಹವನ್ನು ಮಹಾರಾಣಿಯವರು ಚೆನ್ನಾಗಿ ಅರಿತಿದ್ದರು. ಪಂಡಿತನ ಮರಣದಿಂದ ಮಹಾರಾಜರು ಅರ್ಧ ಶರೀರ ವನ್ನು ಕಳೆದುಕೊಂಡವರಂತೆ ದುಃಖಿತರಾಗಿದ್ದರು. ವಿದ್ವಾಂಸರೂ ವೃದ್ಧರಾದ ಮಂತ್ರಿಗಳೂ ಅರಮನೆಗೆ ಬಂದು ಮಹಾರಾಜರ ಸಮ್ಮುಖ ದಲ್ಲಿ ಪಂಡಿತನ ಗುಣಗಾನಮಾಡಿ ಕಣ್ಣೀರಿಡುತ್ತಿದ್ದರು. ಪಂಡಿತನು ಚಾಣಿಕ್ಯನಂತಹ ಬುದ್ಧಿವಂತನೆಂದೂ ಅಮಾತ್ಯರಾಕ್ಷಸನಂಥಾ ಪ್ರಭಾವ ಶಾಲಿಯೆಂದೂ ವೃದ್ಧಮಂತ್ರಿಗಳಾದ ಅಪ್ಪಣ್ಣನವರು ಕಣ್ಣೀರುಸುರಿಸಿ ದರು. ವಿದ್ವಾಂಸರೂ, ರಾಮನನ್ನು ಲಕ್ಷ್ಮಣನು ಅನುವರ್ತಿಸಿದ್ದಂತೆ ರಾಜನನ್ನು ಪಂಡಿತನು ಅನುಸರಿಸಿದ್ದನೆಂದೂ, ಅವನ ಮರಣವು ದೇಶಕ್ಕೆ ನಷ್ಟವಾದುದೆಂದೂ ಸಮಾಧಾನೋಕ್ತಿಗಳನ್ನು ನುಡಿದರು. ವೈಷ್ಣವಾ ಚಾರ್ಯರುಗಳು ಬಂದು ರಾಜನಿಗೆ ಎಷ್ಟೋ ಪುರಾಣದ ನಿದರ್ಶನ ಗಳನ್ನು ಕೊಟ್ಟು ರಾಜನಿಗೆ ಸಮಾಧಾನಮಾಡಿದರು. ರಾಜಧಾನಿಯ ಜನರೆಲ್ಲರೂ ಪಂಡಿತನ ಮರಣಕ್ಕಾಗಿ ಗೋಳಿಟ್ಟರು. ಮನೆ ಮನೆ ಯಲ್ಲಿಯೂ ಸ್ತ್ರೀಬಾಲರಾದಿಯಾಗಿ ಮಂತ್ರಿಯ ಗುಣಗಾನ ಮಾಡುತ್ತಾ

ದುಃಖಿಸುತ್ತಿದ್ದರು. ಅಂತ್ಯಕ್ರಿಯೆಗಳೆಲ್ಲವೂ ಸಾಂಗವಾಗಿ ನೆರವೇರಿದವು.

ಕಾಲವು ಎಲ್ಲವನ್ನೂ ಮರೆಸುತ್ತದೆ. ಇಂದು ಹೊಸದಾದುದು ನಾಳೆ ಹಳೆಯದಾಗಿ ಮತ್ತೊಂದು ಹೊಸ ಪ್ರವೃತ್ತಿಯನ್ನು ಉಂಟು ಮಾಡುತ್ತದೆ. ಹೊಸ ಕಲ್ಪನೆಗಳನ್ನು ಹುಟ್ಟಿಸುತ್ತದೆ. ಆ ಕಾಲ ಮಹಿಮೆಯಿಂದಲೇ ಮಾನವನು ಸುಖದಲ್ಲಿ ದುಃಖವನ್ನು ಮರೆತು ದುಃಖದಲ್ಲಿ ಸುಖದ ನೆನಪಿಲ್ಲದೇ ಸುಖ–ದುಃಖಗಳ ಚಕ್ರವು ತಿರುಗುತ್ತಿರುತ್ತದೆ. ರಾಜನ ಮನಸ್ಸು ಸ್ವಲ್ಪ ಸ್ವಲ್ಪ ಸಮಾಧಾನಕ್ಕೆ ಬಂದಿತು. ಅವನಿಗೆ ಈ ಘಟನೆಯಲ್ಲಿ ಒಂದು ಆಶ್ಚರ್ಯವು ಹೊಳೆಯಿತು. ಪಂಡಿತನ ವಧೆಯಾದ ಮೇಲೆ ಮಲ್ಲಿಗೆಯು ರಾಜನ ದರ್ಶನಕ್ಕೆ ಬಂದೇ ಇರಲಿಲ್ಲ. ರಾಜನೇ ಕುತೂಹಲದಿಂದ ಮಲ್ಲಿಗೆಯ ಅಂತಃಪುರಕ್ಕೆ ಹೋಗಿ ಭೇಟಿಯನ್ನಿತ್ತನು. ಅವನಿಗೆ ಮಲ್ಲಿಗೆಯನ್ನು ಕಾಣುತ್ತಲೇ ಗಾಬರಿಯಾಯಿತು. ಮಲ್ಲಿಗೆಯು ಆ ದುಃಖಸಮಯದಲ್ಲಿ ಏಕೆ ಬರಲಿಲ್ಲವೆಂಬುದು ಪ್ರತ್ಯಕ್ಷವಾಗಿ ಗೋಚರವಾಯಿತು. ಮಲ್ಲಿಗೆಯು ಕೃಶಳಾಗಿ ಹೋಗಿದ್ದಳು. ಮುಖವು ಮಲಿನವಾಗಿ ಹೋಗಿದ್ದಿತು. ಕಣ್ಣುಗಳು ಗುಳಿಗೆ ಇಳಿದು ಹೋಗಿದ್ದವು. ಕಣ್ಣುಗಳು ಕಾಂತಿಹೀನವಾಗಿದ್ದವು. ನಿರಾಭರಣೆಯಾಗಿದ್ದಳು. ಅವಳನ್ನು ನೋಡಿ ರಾಜನಿಗೆ ಗಾಬರಿಯಾಯಿತು. ಮಲ್ಲಿಗೆಯು ಪರ್ಯಂಕದ ಮೇಲೆ ಮಲಗಿದ್ದಳು. ರಾಜನು ಮಲ್ಲಿಗೆಯ ಪಕ್ಕದಲ್ಲಿ ಹೋಗಿ ಅವಳೆರಡು ಕೈಗಳನ್ನೂ ಹಿಡಿದುಕೊಂಡು ತಲೆ ಸವರುತ್ತಾ, "ಮಲ್ಲಿಗೆ, ನಿನ್ನ ಅವಸ್ಥೆಯು ಏಕೆ ಹೀಗಾಗಿದೆ? ಪರಿಚಾರಿಕೆಯರು ನನಗೆ ತಿಳಿಸಲೇ ಇಲ್ಲ ಮಹಾರಾಣಿಯವರಿಗೆ ಕೂಡಾ ನಿನ್ನ ಈ ಅವಸ್ಥೆಯು ತಿಳಿದಂತಿಲ್ಲ. ಏಕೆ ಹೀಗಾಯಿತು?" ಎಂದು ಕೇಳಿದನು.

ಮಲ್ಲಿಗೆಯ ಕಣ್ಣುಗಳು ನೀರಿಲ್ಲದೇ ಬತ್ತಿಹೋಗಿದ್ದವು. ಗದ್ಗದ ಕಂಠದಿಂದ, "ಮಹಾರಾಜ! ಏನೂ ಆಗಿಲ್ಲ. ನಾನು ಸ್ವಸ್ಥವಾಗಿಯೇ

ಇದ್ದೇನೆ" ಎಂದು ಹೇಳಿದಳು.

ಅಷ್ಟರಲ್ಲಿ ವೃದ್ಧಪರಿಚಾರಿಕೆಯೊಬ್ಬಳು ಬಂದು ವಿನಯದಿಂದ "ಮಹಾ ಪ್ರಭುಗಳೇ, ಮಂತ್ರಿಗಳ ಮರಣದಿಂದ ಚಿಕ್ಕರಾಣಿಯವರು ಹೀಗಾಗಿದ್ದಾರೆ. ಬಿಕ್ಕಿ ಬಿಕ್ಕಿ ಅಳುತ್ತಾರೆ ನೆಲದಮೇಲೆ ಬಿದ್ದು ಹೊರಳುತ್ತಾರೆ ಅನ್ನಾಹಾರಗಳಿಲ್ಲ ಪ್ರಭುಗಳಿಗಾಗಲೀ ಮಹಾ ರಾಣಿಯವರಿಗಾಗಲೀ ತಿಳಿಸಬಾರದೆಂದು ಕಟ್ಟಪ್ಪಣೆ ಮಾಡಿದ್ದಾರೆ. ತಮ್ಮ ಸವಾರಿಯು ಇಲ್ಲಿಗೆ ಬಂದುದು ನಮಗೆ ಪ್ರಾಣ ಬಂದಂತಾಯಿತು" ಎಂದು ಹೇಳಿದಳು.

ಚಿಕ್ಕಪ್ಪಾಜಿಗೆ ಎಲ್ಲವೂ ಅರ್ಥವಾಯಿತು. ಅವನಿಗೂ ದುಃಖ ಬಂದಿತು. ಆ ವೃದ್ಧೆಯನ್ನು ಎರಡು ಉಪಚಾರೋಕ್ತಿಗಳಿಂದ ಆದರಿಸಿ ಹೊರಗೆ ಹೋಗುವಂತೆ ಸಂಜ್ಞೆಮಾಡಿದನು. ಅವಳು ಕೈಮುಗಿದು ಹೊರಟು ಹೋದಳು

ಚಿಕ್ಕಪ್ಪಾಜಿಯು ಮಲ್ಲಿಗೆಯ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಅವಳ ಕೆನ್ನೆಗಳ ಮೇಲೆ ಕೈಯಾಡಿಸುತ್ತಾ "ಮಲ್ಲಿಗೆ! ಪಂಡಿತನ ವಿರಹವು ನನ್ನ ಹೃದಯವನ್ನು ಸುಡುತ್ತಿದೆ. ನನಗಿಂತಲೂ ನೀನು ಹೆಚ್ಚು ದುಃಖಿನಿಯಾಗಿರುವೆ. ಸತ್ತವರಿಗಾಗಿ ಕಣ್ಣೀರಿಡುವುದರಿಂದ ಫಲವೇನು?" ಎಂದು ಸಂತೈಸಿದನು

ಮಲ್ಲಿಗೆಯು "ಮಹಾರಾಜನೇ! ನಾನು ಅಪರಾಧಿ ನಾನೇ ಇಷ್ಟು ಅನರ್ಥಗಳಿಗೂ ಕಾರಣಳು. ಗುರುವಾದ ಜಂಗಮದೇವನು ನನ್ನನ್ನು ದೇವಿಗೆ ಬಲಿಕೊಡಬೇಕೆಂದು ಸಂಕಲ್ಪಿಸಿದ್ದನು ನಾನು ಅವನ ಇಷ್ಟಾರ್ಥವನ್ನು ಪೂರ್ತಿಗೈದಿದ್ದರೆ, ಎಷ್ಟೋ ಚೆನ್ನಾಗಿತ್ತು. ಎಂದಿ ಗಾದರೂ ಸಾವಿನ ಕೋರೆದಾಡೆಗೆ ಸಿಲುಕಿರುವ ಈ ಶರೀರವು ಪುಣ್ಯ ಕಾರ್ಯಕ್ಕಾಗಿ ಬಲಿದಾನವಾಗಿ ಹೋಗಿದ್ದರೆ ದೇವಿಗೆ ತೃಪ್ತಿಯಾಗು ತ್ತಿದ್ದಿತು. ಗುರುದೇವನಿಗೆ ಸಿದ್ಧಿಯಾಗುತ್ತಿದ್ದಿತು. ನಾನು ಭಯದಿಂದ ಓಡಿಬಂದೆ. ಗುರುದೇವನು ಸಂಕಲ್ಪಭಂಗವಾದುದರಿಂದ ವೃತಿಯನ್ನೈದಿ

ದನು. ಅವನ ಶಿಷ್ಯರು ಭ್ರಾಂತಿಯಿಂದ ನನ್ನ ಪಲಾಯನಕ್ಕೂ ಗುರು ದೇವನ ಮರಣಕ್ಕೂ ಪಂಡಿತನೇ ಕಾರಣನೆಂದು ಅವನ ಮೇಲೆ ದ್ವೇಷ ಸಾಧಿಸಿ ಅನ್ಯಾಯವಾಗಿ ಕೊಂದುಬಿಟ್ಟರು ಇಷ್ಟು ಅನರ್ಥಗಳು ನನ್ನಿಂದಲೇ ಸಂಭವಿಸಿದುದೆಂದು ನಾನು ದುಃಖಿಯಾಗಿದ್ದೇನೆ. ಗುರು ದೇವನ ಮರಣಕ್ಕೆ ನಾನು ಪ್ರತ್ಯಕ್ಷ ಕಾರಣ ! ಮಂತ್ರಿಯ ಮರಣಕ್ಕೆ ನಾನು ಪರೋಕ್ಷವಾಗಿ ಕಾರಣ. ನಾನು ಈ ಪ್ರಪಂಚದಲ್ಲಿ ಬದುಕಿರ ಕೂಡದು. ಸತ್ತು ಪರಲೋಕಕ್ಕೆ ಹೋಗಿ ಗುರುದೇವನನ್ನೂ ಪಂಡಿತ ನನ್ನೂ ಕ್ಷಮಾಪಾರ್ಥನೆ ಮಾಡುತ್ತೇನೆ " ಎಂದು ಮುಖವನ್ನು ಮುಚ್ಚಿ ಕೊಂಡು ಅಳತೊಡಗಿದಳು.

ಚಿಕ್ಕಪ್ಪಾಜಿಯು ಬಹಳ ಹೊತ್ತು ನಾನಾ ವಿಧವಾಗಿ ಮಲ್ಲಿಗೆ ಯನ್ನು ಸಂತೈಸಿದನು

" ಮಲ್ಲಿಗೆ ! ಈ ಪ್ರಪಂಚದಲ್ಲಿ ನಾನು ಮೆಚ್ಚಿದ ಗೆಳೆಯರಿಬ್ಬರು. ಪಂಡಿತನೊಬ್ಬ ಬಾಲ್ಯದಿಂದ ಗಂಟುಬಿದ್ದ ಗೆಳೆಯ. ನೀನೊಬ್ಬಳು ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸಿದ ಗೆಳತಿ. ಪಂಡಿತನು ನನ್ನನ್ನು ಬಿಟ್ಟುಹೋದ. ನೀನೂ ನನ್ನನ್ನಗಲಿ ಹೋದರೆ ನಾನು ಜೀವಿಸುವು ದೆಂತು ? ಈ ಪ್ರಜೆಗಳನ್ನು ರಕ್ಷಿಸುವುದೆಂತು ? ಇದರಲ್ಲಿ ನಿನ್ನ ಅಪರಾಧವೇನೂ ಇಲ್ಲ. ಜಂಗಮನು ತನ್ನ ಅಪರಾಧದಿಂದ ತಾನು ಮೃತಿಯನ್ನು ಹೊಂದಿದನು. ಆ ಜಂಗಮನು ಸತ್ತ ಮೇಲೆಯೂ ಅವನ ಪಾಪವು ಅವನ ಶಿಷ್ಯರ ರೂಪದಿಂದ ಬಂದು ನನ್ನ ಗೆಳೆಯನನ್ನು ಕೊಲೆಮಾಡಿತು. ಬದುಕಿರುವಾಗ ನಿನ್ನ ಪ್ರಾಣವನ್ನು ಹಾರಿಸಬೇಕೆಂದಿದ್ದ ಜಂಗಮನು ಸತ್ತಮೇಲೆ ನನ್ನ ಪ್ರಾಣಕ್ಕಿಂತಲೂ ಅಧಿಕನಾದ ಗೆಳೆಯನನ್ನು ಹಾರಿಸಿದನು. ಅದಕ್ಕಾಗಿ ದುಃಖಿಸಿ ಫಲ ವೇನು ? ನೀನು ಪಂಡಿತನಿಗಾಗಿ ದುಃಖಿಸುವುದನ್ನು ಬಿಟ್ಟು ನನಗಾಗಿ ಸಮಾಧಾನವನ್ನು ತಂದುಕೋ. ನೀನಿಲ್ಲದಿದ್ದರೆ, ಈ ಜಗತ್ತಿನಲ್ಲಿ ನನಗೆಲ್ಲವೂ ನಿಸ್ಸಾರ !" ಎಂದು ಹೇಳಿದನು.

ರಾಜನು ಮಲ್ಲಿಗೆಯು ಪೂರ್ಣ ಸಮಾಧಾನ ಸ್ಥಿತಿಗೆ ಬಂದು ಮೊದಲಿನಂತೆ ಪ್ರಫುಲ್ಲ ಕುಸುಮದಂತೆ ಆಗುವವರೆಗೆ ಮಲ್ಲಿಗೆಯ ಅಂತಃಪುರದಲ್ಲಿಯೇ ಇದ್ದನು. ರಾಜನ ಸಾನ್ನಿಧ್ಯದಿಂದ ಮಲ್ಲಿಗೆಯು ಬಹುಬೇಗ ದುಃಖವನ್ನು ಮರೆತು ಸಮಾಧಾನ ಸ್ಥಿತಿಗೆ ಬಂದಳು.

ರಾಜನು ಯಥಾಪ್ರಕಾರ ಪೂರ್ವದಂತೆಯೇ ರಾಜ್ಯಭಾರವನ್ನು ನಡೆಸುತ್ತಿದ್ದನು. ಅವನು ಜಂಗಮರ ವಿಷಯದಲ್ಲಿ ವಿಶೇಷ ದೃಷ್ಟಿಯನ್ನಿಟ್ಟಿದ್ದನು. ಒಂದುದಿನ ಇದ್ದಕ್ಕಿದ್ದಂತೆ ಕಾತ್ಯಾಯಿನಿಯು ರಾಜಧಾನಿಗೆ ಬಂದಳು. ಬಂದು ರಾಜನನ್ನು ಸಂದರ್ಶಿಸಿದಳು. ರಾಜನು ಅವಳ ಯೋಗಕ್ಷೇಮವನ್ನು ವಿಶ್ವಾಸದಿಂದ ವಿಚಾರಿಸಿದನು. ಕಾತ್ಯಾಯಿನಿಯು ಜಂಗಮವಾಡಿಯು ಅಪವಿತ್ರವಾಗಿ ಹೋಗಿವೆಯೆಂದೂ, ದುಷ್ಟರು ತನ್ನನ್ನು ಹೊಡೆದೋಡಿಸಿಬಿಟ್ಟರೆಂದೂ ರಾಜನಲ್ಲಿ ಮೊರೆಯಿಟ್ಟಳು. ರಾಜನು ರಾಜಭಟರನ್ನು ಕಳುಹಿಸಿ ಅವರನ್ನೆಲ್ಲಾ ಅಲ್ಲಿಂದ ಓಡಿಸುವುದಾಗಿಯೂ, ಕಾತ್ಯಾಯಿನಿಯು ಸರ್ವಸ್ವಾತಂತ್ರ್ಯದಿಂದ ಜಂಗಮವಾಡಿಯಲ್ಲಿ ನಿರ್ಭಯವಾಗಿರಬಹುದೆಂದೂ ಹೇಳಿದನು. ಕಾತ್ಯಾಯಿನಿಯು ಅದಕ್ಕೊಪ್ಪಲಿಲ್ಲ. "ಮಹಾಪ್ರಭುಗಳೇ! ಅದು ನಿಜವಾದ ವಿರಕ್ತಧರ್ಮವಲ್ಲ. ಮಠ ದೇವಾಲಯಗಳು ದುಷ್ಟರ ಪಾಲಾದರೆ, ವಿರಕ್ತರು ದೇಶಾಂತರ ಹೋಗಬೇಕು. ವನವಾಸಕ್ಕೆ ಹೋಗಬೇಕು. ನನಗೆ ಜಂಗಮವಾಡಿಯ ಗೊಡವೆಯೇ ಬೇಡ ಅದನ್ನು ಆ ದುಷ್ಟರಿಗೇ ಬಿಟ್ಟುಕೊಟ್ಟಿದ್ದೇನೆ" ಎಂದು ಹೇಳಿದಳು

ರಾಜನು ಕಾತ್ಯಾಯಿನಿಯನ್ನು ಚಿಕ್ಕರಾಣಿಯ ಅಂತಃಪುರಕ್ಕೆ ಕಳುಹಿಸಿದನು.

ಆ ಅಂತಃಪುರದಲ್ಲಿ ಬಹುಕಾಲದಮೇಲೆ ಆ ಗೆಳತಿಯರಿಬ್ಬರೂ ಸಂಧಿಸಿದರು. ಇಬ್ಬರೂ ಪರಸ್ಪರಾಲಿಂಗನಮಾಡಿಕೊಂಡು ಕಣ್ಣೀರಿಟ್ಟರು. ಆ ದುಃಖದ ಪ್ರಥಮವೇಗವು ಸ್ವಲ್ಪ ಸಮಾಧಾನಕ್ಕೆ ಬಂದ

ಮೇಲೆ ಅವರಿಬ್ಬರೂ ಪೂರ್ವವೃತ್ತಾಂತವನ್ನೆತ್ತಿ ಮಾತನಾಡತೊಡಗಿದರು. ಜಂಗಮದೇವನ ಮರಣದ ವಿಷಯವಾಗಿ ಮೊದಲು ಮಾತು ಬಂದಿತು. ಯಾರಾದರೂ ಗುರುದೇವನನ್ನು ಕೊಲೆಮಾಡಿದರೇ ಅಥವಾ ಗುರುದೇವನೇ ಆತ್ಮಹತ್ಯ ಮಾಡಿಕೊಂಡನೇ ಎಂದು ಅವರಿಬ್ಬರೂ ವಿಚಾರಮಾಡಿದರು ಭಗ್ನಮನೋರಥನಾದ ಗುರುದೇವನು ಆತ್ಮಹತ್ಯಮಾಡಿಕೊಂಡಿರಬಹುದೆಂದು ಮಲ್ಲಿಗೆಯು ಹೇಳಿದಳು. ಚಾಮುಂಡಿಯು "ಇಲ್ಲ–ಇಲ್ಲ ತಂಗಿ. ಅದು ಘೋರವಾದ ಕೊಲೆ. ಶತೃಗಳು ಕೊಲೆಮಾಡಿದ್ದಾರೆ. ಅದರಲ್ಲಿ ಅಭೇದ್ಯವಾದ ರಹಸ್ಯವೆಂದರೆ ಗುರುದೇವನು ತಾನಾಗಿಯೇ ಸಮರಾತ್ರಿಯಲ್ಲಿ ಜಂಗಮವಾಡಿಯನ್ನು ಬಿಟ್ಟು ಹೊರಟುಹೋದನು ಅವನೇಕೆ ಜಂಗಮವಾಡಿಯನ್ನು ಬಿಟ್ಟು ಹೋದನೋ ಎಂಬುದು ಯಾರಿಗೂ ಗೊತ್ತಿಲ್ಲ ಒಂದೆರಡು ದಿನಗಳ ಮುಂಚೆ ಒಬ್ಬ ಭಯಂಕರಾಕಾರನಾದ ಕಾಪಾಲಿಕನು ಬಂದು ಗುರುದೇವನಿಗೆ ದರ್ಶನವಿತ್ತನು ಗುರುದೇವನು ಆ ರಾತ್ರಿ ಅವನನ್ನೇ ಹುಡುಕಿಕೊಂಡು ಬೆಟ್ಟದ ತಪ್ಪಲಿಗೆ ಹೋಗಿರಬೇಕು. ಆ ಮಂಟಪದಲ್ಲಿ ಅವರಿಬ್ಬರ ಭೇಟಿಯಾಗಿರಬೇಕು. ಆ ಕಾಪಾಲಿಕನೇ ಗುರುದೇವನನ್ನು ಕೊಂದಿರಬೇಕು ಆ ಮಂಟಪದಲ್ಲಿ ಬೆಂಕಿಯು ಹಾಕಿತ್ತು. ಭಂಗಿಯನ್ನು ಕುಡಿಯುವ ಚಿಲುಮೆಯೊಂದು ಬಿದ್ದಿತ್ತು. ಗುರುದೇವನು ಎಂದೂ ಭಂಗಿಯನ್ನು ಕುಡಿಯುವ ಅಭ್ಯಾಸವನ್ನು ಮಾಡಿರಲಿಲ್ಲ. ಕಾಪಾಲಿಕನಿಂದಲೇ ಗುರುದೇವನ ಮರಣವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ" ಎಂದು ಹೇಳಿದಳು.

ಮಲ್ಲಿಗೆಯು ಇದನ್ನೊಪ್ಪಿಕೊಂಡಳು. ಆದರೆ ಆ ಕಾಪಾಲಿಕನಾರು? ಎಂದು ಅವಳ ಹೃದಯವು ತಲ್ಲಣಿಸುತ್ತಿದ್ದಿತು. ಪಂಡಿತನ ಮರಣವಾರ್ತೆಯು ಬಂದಿತು. ಆ ಚಿತ್ರವಧೆಗಾಗಿ ಅವರಿಬ್ಬರೂ ಎಷ್ಟೋ ದುಃಖಿಸಿದರು. ಚಾಮುಂಡಿಯು "ಮಲ್ಲಿಗೆ, ಅದು ಘೋರವಧೆ! ಮಹಾಪಾತಕ! ಆದರೆ ಅದು ಜಂಗಮವಾಡಿಯ ದುರುಳ

ರಿಂದಲೇ ನಡೆದಿದೆಯೆಂದು ನನ್ನ ಮನಸ್ಸಿಗೆ ಖಚಿತವಾಗಿದೆ. ಆದುದ ರಿಂದಲೇ ನಾನು ಜಂಗಮವಾಡಿಯನ್ನು ಪರಿತ್ಯಜಿಸಿಬಿಟ್ಟೆ" ಎಂದು ಹೇಳಿದಳು.

ಮಲ್ಲಿಗೆಯು "ಅಕ್ಕಾ! ನೀನೇಕೆ ಜಂಗಮವಾಡಿಯನ್ನು ಪರಿತ್ಯಜಿಸಬೇಕು. ಗುರುದೇವನೇ ನಿನಗೆ ದೀಕ್ಷೆಯನ್ನು ಕೊಟ್ಟಿದ್ದಾನೆ. ಅವನಿರುವಾಗಲೇ ನಿನ್ನನ್ನು ಆ ಮಠಕ್ಕೆ ಅಧಿಷ್ಠಾತ್ರಿಯನ್ನಾಗಿ ನೇಮಿಸಿದ್ದಾನೆ. ನಿನಗೆ ರಾಜನ ಬಲವಿದೆ. ನೀನೇಕೆ ಹೆದರಬೇಕು? ನೀನು ಜಂಗಮವಾಡಿಯಲ್ಲಿಯೇ ಗುರುಸೇವೆಮಾಡಿಕೊಂಡಿರು. ಆ ಪವಿತ್ರ ಸ್ಥಳವು ದುಷ್ಟರ ಕೈಸೇರಿದರೆ ಅಪವಿತ್ರವಾಗುವುದು" ಎಂದು ಹೇಳಿದಳು.

ಚಾಮುಂಡಿಯು "ಬೇಡಮ್ಮಾ ತಂಗಿ! ನನಗೆ ಜಂಗಮವಾಡಿಯು ಬೇಡ. ರಾಜನ ಬೆಂಬಲವೂ ಬೇಡ. ನಿನ್ನ ಪ್ರೀತಿಯೊಂದಿದ್ದರೆ ಸಾಕು. ನಾನು ಈ ನನ್ನ ಆಯುಸ್ಸನ್ನು ಪರಶಿವನ ಸೇವೆಯಲ್ಲಿ ಕಳೆಯುವೆನು. ಭಿಕ್ಷವೆತ್ತಿ ತಿನ್ನುವೆನು. ಗುಡಿಯ ಕೈಸಾಲೆಯಲ್ಲಿ ಮಲಗುವೆನು. ಈ ಪ್ರಪಂಚದಲ್ಲಿ ನನಗಿರುವ ಆಶಾದಾಯಕ ವಸ್ತುವೆಂದರೆ ನೀನೊಬ್ಬಳು. ಬಂಧು ಭಗಿನಿ ಸಮಸ್ತವೂ ನೀನೆ! ಯಾವಾಗಲಾದರೂ ನಿನ್ನನ್ನು ಬಂದು ನೋಡಿಕೊಂಡು ಹೋಗುವೆನು. ಎಷ್ಟು ದಿನದ ಬಾಳಿಗಾಗಿ ನನ್ನಂಥಾ ಸನ್ಯಾಸಿನಿಗೆ ಈ ಮಠ ದೇವಾಲಯ ಜಂಗಮವಾಡಿಗಳು ಬೇಕು? ಇದೆಲ್ಲಾ ಸಾಕು! ಯಾವ ಪರಶಿವನು ದುಷ್ಟರ ರೂಪದಿಂದ ಬಂದು ಗುರುವನ್ನು ಕೊಂಡುಹೋದನೋ ಅದೇ ಭಗವಂತನು ಬಂದು ನನ್ನನ್ನು ಜಂಗಮವಾಡಿಯಿಂದ ಹೊರಡಿಸಿದನು. ಸಾಕು! ಇನ್ನು ಆ ಭವಣೆಯು ಬೇಡ" ಎಂದು ಹೇಳಿದಳು. ಆ ರಾತ್ರಿಯೆಲ್ಲಾ ಅವರು ತಮ್ಮ ಪೂರ್ವದ ಕಥೆಗಳನ್ನು ಹೇಳಿಕೊಂಡು 'ಹಾಗಾಗಿದ್ದರೆ ಚೆನ್ನಾಗಿತ್ತು. ಹೀಗಾಗಿದ್ದರೆ ಚೆನ್ನಾಗಿತ್ತು' ಎಂದು ಹೇಳಿಕೊಳ್ಳುತ್ತಾ ರಾತ್ರಿಯನ್ನು ಕಳೆದರು.

## ೨೧

ಪಂಡಿತನ ವಧೆಯಾಗಿ ಆರು ತಿಂಗಳುಗಳು ಕಳೆದು ಹೋದುವು. ಚಿಕ್ಕಪ್ಪಾಜಿಗೆ ಪಂಡಿತನ ವಧೆ ಮಾಡಿದವರ ಮೇಲೆ ಸೇಡು ತೀರಿಸಿ ಕೊಳ್ಳುವ ಚಿಂತೆಯು ಇತ್ತೋ ಇಲ್ಲವೋ ಯಾರೂ ಅರಿಯರು. ಆದರೆ ರಾಜ್ಯಭಾರವನ್ನು ಅಚ್ಚುಗಟ್ಟು ಮಾಡಿಡುವ ಚಿಂತೆಯು ಅವನ ಮನಸ್ಸೆಲ್ಲವನ್ನೂ ಆಕ್ರಮಿಸಿದ್ದಿತು. ಮಂತ್ರಿಪದವಿಗೆ ಯಾರನ್ನು ಚುನಾಯಿಸಿದರೂ, ವೃದ್ಧಮಂತ್ರಿಗಳು, ವಿದ್ವಾಂಸರು ಒಪ್ಪುತ್ತಿರಲಿಲ್ಲ. ಶಕ್ತಿ ಸಾಮರ್ಥ್ಯಗಳಾಗಲೀ ವಿದ್ಯಾ ಪಾಂಡಿತ್ಯವಾಗಲೀ ಎಷ್ಟೇ ಇದ್ದರೂ ಮತ ವೈಷಮ್ಯಗಳು, ಮೇರೆ ಮೀರಿದ್ದವು. ತಿರುಮಳಾರ್ಯನು ಮಂತ್ರಿಪದವಿಗೆ ತಕ್ಕವನಾಗಿದ್ದನು. ಆದರೆ ಅವನು ವೈಷ್ಣವ. ಶೈವರು ಸ್ಮಾರ್ತರು ತಿರುಗಿಬೀಳುತ್ತಿದ್ದರು ಚಾಮುಂಡಯ್ಯನೆಂಬು ವನು ರಾಜ್ಯಭಾರದಲ್ಲಿ ಬಹಳ ಮೇಲಕ್ಕೆ ಬಂದಿದ್ದನು. ಅವನು ಶಿವಭಕ್ತರ ಜಾತಿಗೆ ಸೇರಿದವನು. ಗುಂಡ್ಲುಪೇಟೆಯ ಕಡೆಯಿಂದ ಬಂದವನು. ಪಂಡಿತನಿಗೆ ಅಚ್ಚುಮೆಚ್ಚಾದ ಅಧಿಕಾರಿ ರಾಮರಾಯನು ಮತ್ತೊಬ್ಬ ಪರಾಕ್ರಮಶಾಲಿಯಾದ ಅಧಿಕಾರಿ. ಅವನ ಬುದ್ಧಿಬಲ ದಿಂದಲೇ ರಾಜನು ಚೆನ್ನಪಟ್ಟಣದ ಜಗದೇಕರಾಯನನ್ನು ಹದ್ದುಬಸ್ತಿ ನಲ್ಲಿ ಇಟ್ಟಿದ್ದನು. ಆದರೆ ಅವನು ಸೇನಾಧಿಪತ್ಯಕ್ಕೆ ಎಷ್ಟು ಸಮರ್ಥ ನಾಗಿದ್ದನೋ ಮಂತ್ರಿಪದವಿಗೆ ಅಷ್ಟು ಒಪ್ಪಿಗೆಯಾಗಿರಲಿಲ್ಲ. ಯಾರಿಗೆ ಮಂತ್ರಿಪದವಿಯನ್ನು ಕೊಡಬೇಕೆಂಬ ಜಿಜ್ಞಾಸೆಯು ಹುಟ್ಟಿದ್ದಿತು. ಮಹಾರಾಣಿಯವರು ಮೂಗೂರಿನ ಮನೆತನದವರು. ಅವರ ಸಹೋದರ ರಾದ ದೇವರಾಜರು ಎಲ್ಲ ವಿಷಯಗಳಲ್ಲಿಯೂ ಮಂತ್ರಿಪದವಿಗೆ ಅರ್ಹರಾಗಿದ್ದರು. ಆದರೆ ಅವರಿಗೂ ಮಹಾರಾಜರಿಗೂ, ವೈಮನಸ್ಯ ವಿದ್ದಿತು. ದೇವರಾಜರ ಬುದ್ಧಿಶಕ್ತಿ, ಪರಾಕ್ರಮ, ವಿದ್ಯಾಪ್ರತಿಭೆಗಳಲ್ಲಿ

ಯಾರೂ ಪ್ರತಿ ಹೇಳುವಂತಿರಲಿಲ್ಲ. ಅವರಿಗೆ ಪಂಡಿತನ ನಡವಳಿಕೆಗಳು ಸುತರಾಂ ಸರಿಬೀಳುತ್ತಿರಲಿಲ್ಲ. ಗೃಹಸ್ಥಾಶ್ರಮಿಯಲ್ಲದವನು ಮಂತ್ರಿತ್ವಕ್ಕೆ ಅನರ್ಹನೆಂದೇ ಅವರ ಸಿದ್ಧಾಂತ. ಹೆಂಡರು ಮಕ್ಕಳಿಲ್ಲದ ಜೋಗಿಗೆ ಬಡಜನರ ಕಷ್ಟ ಸುಖಗಳೇನು ತಿಳಿಯುತ್ತದೆಯೆಂದು ದೇವರಾಜರು ಅನೇಕ ಸಂದರ್ಭಗಳಲ್ಲಿ ಹೇಳುತ್ತಿದ್ದರು. ಮಲ್ಲಿಗೆಯು ಗಾಯಕಿಯಾಗಿದ್ದಾಗ ಅವರು ಅವಳ ಸಂಗೀತವನ್ನು ಎಷ್ಟೋ ಮೆಚ್ಚಿದ್ದರು. ಒಂದು ಬಾರಿ ಅರಮನೆಯಲ್ಲಿ ಸಂಗೀತ ಸಭೆಯಾದಾಗ ಮಲ್ಲಿಗೆಯು ಕುಲದಲ್ಲಿ ವೇಶ್ಯೆಯಾದಾಗ್ಯೂ ಹೆಣ್ಣಾಗಿ ಹುಟ್ಟಿದ್ದಾಗ್ಯೂ ಮಹಾ ವಿದ್ವಾಂಸರ ಗೋಷ್ಠಿಗೆ ಅರ್ಹಳಾದವಳು ಎಂದು ಹೇಳಿದ್ದರು. ಮಲ್ಲಿಗೆಯು ರಾಜನ ಪೂರ್ಣಾನುಗ್ರಹಕ್ಕೆ ಪಾತ್ರಳಾಗಿ ಬಂಗಾರದ ಮಡದಿಯಾಗಿ, ಅರಮನೆಯಲ್ಲಿ ಬಂದು ನಿಂತು ಚಿಕ್ಕರಾಣಿಯೆನಿಸಿಕೊಂಡ ಮೇಲೆ ಅವರಿಗೆ ಬಹಳ ಅಸಮಾಧಾನವಾಗಿತ್ತು. ವೃದ್ಧ ಮಂತ್ರಿಗಳೊಡನೆ ಈ ವಿಷಯದಲ್ಲಿ ರಾಜನಿಗೆ ಬುದ್ಧಿವಾದ ಹೇಳಬೇಕೆಂದು ಅವರು ಅನೇಕ ಬಾರಿ ಹೇಳಿನೋಡಿದರು. ಯಾವುದೂ ಫಲಿಸಲಿಲ್ಲ. ರಾಜಧಾನಿಯಲ್ಲಿರುವುದು ತಮಗೆ ಅಪಮಾನಕರವೆಂದು ನಿಶ್ಚಯಿಸಿ ತನ್ನ ಸಹೋದರಿಯೊಡನೆ ತಮ್ಮ ಅಭಿಪ್ರಾಯವನ್ನು ತಿಳಿಸಿ, ತಮ್ಮ ಊರಿಗೆ ಹೊರಟುಹೋಗಿದ್ದರು. ಸಿಂಗರಾರ್ಯನು ರಾಜನಲ್ಲಿ ಹೆಚ್ಚು ಸಲಿಗೆಯನ್ನು ಪಡೆದಿದ್ದನು. ಬುದ್ಧಿಶಕ್ತಿಯಲ್ಲಿ ಅವನು ಪಂಡಿತನಿಗಿಂತಲೂ ಮಿಗಿಲಾದವನು ಆದರೆ ಜನರಲ್ಲಿ ಅಷ್ಟು ಗೌರವವನ್ನು ಪಡೆದಿರಲಿಲ್ಲ. ಮಲ್ಲಿಗೆಯು ಪ್ರಸಿದ್ಧ ರೀತಿಯಿಂದ ರಾಜನ ಅಂತಃಪುರಕ್ಕೆ ಬಂದಮೇಲಂತೂ ಸಿಂಗರಾರ್ಯನು ಹೊರಗೆ ಬರುತ್ತಲೇ ಇರಲಿಲ್ಲ. ಅವನು ಅಂತರಂಗದಲ್ಲಿ ರಾಜನ ಭೇಟಿ ಮಾಡಿ ದೇವರಾಜನನ್ನು ಮಂತ್ರಿಪದವಿಗೆ ತರುವ ಸಲಹೆಯನ್ನು ಇತ್ತನು.

ಮರುದಿನ ವೃದ್ಧಮಂತ್ರಿಯಾದ ಅಪ್ಪಣ್ಣನವರನ್ನು ಕರೆಯಿಸಿ ರಾಜನು ಸಮಾಲೋಚನೆ ನಡೆಸಿದನು. ದೇವರಾಜನ ಗುಣ, ಸಾಮ

ಧ್ಯರ್ಗಗಳನ್ನೆಲ್ಲಾ ಅಪ್ಪಣ್ಣನವರು ಮೆಚ್ಚಿದ್ದರು ರಾಜಸ್ಯಾಲಕನು ಮಂತ್ರಿಯಾಗುವುದು ನೀತಿಶಾಸ್ತ್ರವಿರೋಧವೆಂದು ಹೇಳಿಬಿಟ್ಟನು. ರಾಜನ ಮನಸ್ಸು ಬಿಕ್ಕಟ್ಟಿಗೆ ಬಂದಿತು. ಅವನು ಸಿಂಗರಾರ್ಯನನ್ನು ಕರೆಯಿಸಿ ಅಪ್ಪಣ್ಣನ ತೀರ್ಮಾನವನ್ನು ತಿಳಿಸಿದನು. ಸಿಂಗರಾರ್ಯನು "ಇದೇನೂ ಮಹತ್ವದ ವಿಷಯವಲ್ಲ. ಪಂಡಿತರಂಥಾ ಮಂತ್ರಿಗಳು ಇನ್ನು ಈ ರಾಜ್ಯಕ್ಕೆ ದೊರೆಯುವುದೇ ಇಲ್ಲ. ಇರುವವರು ಮೂವರು : ತಿರುಮಳಾರ್ಯ, ರಾಮರಾಯ, ಚಾಮುಂಡಯ್ಯ. ಅವರು ಮೂವರನ್ನೂ ಕರೆಸಿ ಸಮಾಲೋಚನೆ ಮಾಡಬೇಕೆಂದು ಸಿಂಗರಾರ್ಯನು ಸೂಚಿಸಿದನು. ಅದು ರಾಜನ ಮನಸ್ಸಿಗೆ ಸೂಕ್ತವಾಗಿ ತೋರಿತು.

ಮರುದಿನ ಆ ಮೂವರನ್ನೂ ಕರೆಯಿಸಿ ರಾಜನು ಮಾತನಾಡಿದನು. ತಿರುಮಳಾರ್ಯನು ಮಾತನಾಡದೇ ಕುಳಿತಿದ್ದನು. ಚಾಮುಂಡಯ್ಯನೂ ರಾಮರಾಯನೂ ಯಾವ ಖಚಿತನಾದ ಅಭಿಪ್ರಾಯವನ್ನೂ ಕೊಡಲಿಲ್ಲ. ಕೊನೆಯಲ್ಲಿ ಅವರಿಬ್ಬರೂ ತಿರುಮಳಾರ್ಯನ ಅಭಿಪ್ರಾಯಕ್ಕೆ ತಮ್ಮಗಳ ಸಂಪೂರ್ಣ ಸಮ್ಮತಿಯಿದೆಯೆಂದು ಹೇಳಿಬಿಟ್ಟರು.

ತಿರುಮಳಾರ್ಯನು "ನೀತಿಶಾಸ್ತ್ರವು ಹಳೆಯ ಮಾತು. ಅಪ್ರಯೋಜಕನಾಗಿದ್ದರೆ, ರಾಜನು ಅಭಿಮಾನದಿಂದ ಸ್ವಬಂಧುವಿಗೆ ಅಧಿಕಾರ ಕೊಡಬಾರದೆಂಬ ಎಚ್ಚರಿಕೆಯ ಮಾತು. ಗುಣಾಢ್ಯರಿಗೆ ಯಾವ ಪದವಿಯನ್ನು ಕೊಟ್ಟರೂ ಕುಂದಿಲ್ಲ. ದೇವರಾಜರಿಗೆ ಮಂತ್ರಿ ಪಟ್ಟವನ್ನು ಕಟ್ಟುವುದೇ ಲೇಸು. ನಾವೆಲ್ಲರೂ ಸಂಪೂರ್ಣ ಸಹಕಾರ ನೀಡುತ್ತೇವೆ. ವೃದ್ಧಮಂತ್ರಿಗಳಿಗೂ ದೇವರಾಜರಲ್ಲಿ ಅಪಾರ ಅಭಿಮಾನವಿದೆ" ಎಂದು ಹೇಳಿದನು

ಅದೇ ನಿಶ್ಚಯವಾಯಿತು. ರಾಜನು ಮುತ್ಸದ್ದಿಗಳನ್ನು ಕಳುಹಿಸಿ ರಾಜಮರ್ಯಾದೆಯಿಂದ ದೇವರಾಜರನ್ನು ರಾಜಧಾನಿಗೆ ಕರೆಸಿದನು. ಅವರೊಡನೆ ಮಾತುಕತೆಗಳನ್ನು ನಡೆಸಿದನು. ರಾಜಸಭೆಯನ್ನು ಸೇರಿಸಿ, ದೇವರಾಜನಿಗೆ ಮಂತ್ರಿಯ ಪಟ್ಟವನ್ನು ಕಟ್ಟಿದನು.

ದೇವರಾಜನು ಮಂತ್ರಿಪದವಿಗೆ ಬಂದಮೇಲೆ ರಾಜ್ಯಭಾರವನ್ನೆಲ್ಲಾ ಸಂಪೂರ್ಣವಾಗಿ ವಹಿಸಿಕೊಂಡನು. ಆ ಸಮಯದಲ್ಲಿ ನಂಜನಗೂಡಿನ ಮಹಂತನಿಗೆ ಬಹಳ ಮನ್ನಣೆಯಿದ್ದಿತು. ದೇವರಾಜನು ಮರ್ಯಾದೆಯಿಂದ ಆ ಮಹಂತನನ್ನು ರಾಜಧಾನಿಗೆ ಕರೆಸಿಕೊಂಡನು. ಆ ಮಹಂತನು ವೃದ್ಧನಾಗಿದ್ದನು. ಲೋಕವ್ಯವಹಾರದಲ್ಲಿ ಪರಿಣಿತನಾಗಿದ್ದನು. ಅವನೊಡನೆ ಮಂತ್ರಿಯು ರಾಜ್ಯದಲ್ಲಿ ಜಂಗಮರ ಹಾವಳಿಯನ್ನು ಕುರಿತು ಪ್ರಸ್ತಾಪಿಸಿದನು.

ಮಹಂತನು ಮಂತ್ರಿ ದೇವರಾಜನೊಡನೆ "ಮಂತ್ರಿಗಳೇ, ನೀವು ಶಿವಭಕ್ತರ ಮತಾಚಾರಗಳನ್ನು ಚೆನ್ನಾಗಿ ಅರಿಯರಿ. ಪಟ್ಟದವರು, ವಿರಕ್ತರು, ಎಂದು ಎರಡು ಪಂಥಗಳಿವೆ. ಉದರಪೋಷಣೆ ಮಾಡುವುದಕ್ಕಾಗಿ ಕಾವಿಯನ್ನು ಧರಿಸಿದವರೆಲ್ಲರೂ ಕೈಲಾಸಕ್ಕೆ ಹೋಗುವುದಿಲ್ಲ. ನಮಗೆ ಪಟ್ಟದವರು ವಿರಕ್ತರು ಸಮಾನರು. ಪರಶಿವನ ಸಾನ್ನಿಧ್ಯದಲ್ಲಿ ಹೆಚ್ಚು ಕಡಿಮೆಯೇನೂ ಇಲ್ಲ. ಯಾರಲ್ಲಿಯೂ, ನಾವು ಭೇದಭಾವವನ್ನೆಣಿಸುವುದಿಲ್ಲ. ಯಾರು ದುಷ್ಟರು, ಯಾರು ಶಿಷ್ಟರು ಎಂದು ವಿಚಾರ ಮಾಡುವುದು ನಮ್ಮ ಕರ್ತವ್ಯವಲ್ಲ ಗುಂಡುಗೋವಿಗಳು ಪಟ್ಟದ ಸ್ವಾಮಿಗಳನ್ನು ಲಕ್ಷ್ಯಮಾಡುವುದಿಲ್ಲ ವಿರಕ್ತರನ್ನು ಪೂಜ್ಯಭಾವದಿಂದ ನೋಡುವುದಿಲ್ಲ. ಈ ಕಲಿಗಾಲವೇ ಹಾಗಾಗಿದೆ. ಏನು ಮಾಡಲಾದೀತು ?" ಎಂದು ಹೇಳಿದನು.

ದೇವರಾಯನು "ಮಹಂತರೇ, ದೇವಾಲಯ ಮಠಗಳಲ್ಲಿ ಇಂತಹ ಗುಂಡುಗೋವಿಗಳಿಗೆ ಬಹಿಷ್ಕಾರವನ್ನು ಹಾಕುವಂತೆ ಮಾಡಬಾರದೇ?" ಎಂದನು.

ಮಹಂತನು "ಗೃಹಸ್ಥರು ತಪ್ಪುಮಾಡಿದರೆ ಬಹಿಷ್ಕಾರವನ್ನು ಹಾಕಬಹುದು. ಈ ದುರುಳರಿಗೆ ಬಹಿಷ್ಕಾರದ ಭಯವೂ ಇಲ್ಲ. ಆ ವಿಷಯದಲ್ಲಿ ಅವರ ಮೇಲೆ ಯಾರಿಗೂ ಅಧಿಕಾರವಿಲ್ಲ. ಕೆಟ್ಟರೆ ಅವನೇ ಕೆಟ್ಟ, ಉದ್ಧಾರವಾದರೆ ಅವನೇ ಉದ್ಧಾರವಾದ. ಇದು ಶಿವನಾಜ್ಞೆ

ಪ್ರಭು " ಎಂದು ಹೇಳಿದನು.

ಮಂತ್ರಿಯು " ಹಾಗಲ್ಲ. ನಿಮ್ಮಂತಹ ಪ್ರತಿಷ್ಠಿತರಾದ ಮಹಾ ಪುರುಷರು ಬಹಿಷ್ಕಾರಗಳನ್ನು ಹಾಕಿದರೆ ಆಮೇಲೆ ಅನ್ನಕ್ಕಿಲ್ಲದೆ ಗುಂಡು ಗೋವಿಗಳು ಸಾಯಬೇಕಾಗುವುದು " ಎಂದನು.

ವೃದ್ಧನು ನಕ್ಕನು. " ಮಂತ್ರಿಗಳೇ, ತಮ್ಮ ಬುದ್ಧಿಗೆ ಭ್ರಾಂತಿ ಹಿಡಿದಿದೆ. ಅವರಿಗೆ ಅನ್ನಕ್ಕಿಲ್ಲದಿದ್ದರೆ ಆವೇಶವು ಬರುತ್ತದೆ. ಸಭ್ಯ ಗೃಹಸ್ಥರನ್ನು ಕೆತ್ತು ತಿನ್ನುತ್ತಾರೆ. ನಾವು ಬಹಿಸ್ಕರಿಸಿದರೆ ನಮ್ಮನ್ನೇ ಶಿವಪಾದಕ್ಕೆ ಸೇರಿಸುತ್ತಾರೆ. ಒಬ್ಬ ದುರ್ಮದಾಂಧನಿಗೆ ಮಹಂತ ಪಟ್ಟವನ್ನು ಕಟ್ಟುತ್ತಾರೆ ಅವರಿಗೇಕೆ ಉಪವಾಸ, ದೇವರಿಗೆ ಉಪವಾಸ ವಾಗುತ್ತದೆ. ಇರುವ ಅಲ್ಪ ಸ್ವಲ್ಪ ಧರ್ಮವೂ ನಾಶವಾಗುತ್ತದೆ. ಮಳೆಬೆಳೆಗಳಿಲ್ಲದೇ ಹೋಗುತ್ತದೆ " ಎಂದನು.

ದೇವರಾಜನು " ಮಹಂತರೇ, ನೀವು ಹೇಳುವುದು ಸರಿಯಾಗಿದೆ. ಆದರೆ ದೇಶದಲ್ಲಿ ದುಷ್ಟರ ಪ್ರಾಬಲ್ಯವಾದರೆ ಅದಕ್ಕೆ ಪರಿಹಾರವೇ ಇಲ್ಲವೆ ?" ಎಂದನು.

ಮಹಂತನು " ಪರಿಹಾರ ಉಂಟು. ತಮ್ಮಂಥಾ ರಾಜರು ಅವರನ್ನಡಗಿಸಬೇಕು. ಅಧಿಕಾರಿಗಳು ಅವರನ್ನಡಗಿಸಬೇಕು. ದುಷ್ಟ ಶಿಕ್ಷಣಕ್ಕಾಗಿಯೇ ರಾಜರಿರುವುದು " ಎಂದನು.

" ಹೌದು ಮಹಂತರೇ, ಆದೇನೂ ಕಷ್ಟತರವಾದ ಕಾರ್ಯವಲ್ಲ. ಈ ಮತಭೇದದ ಗೊಂದಲಗಳಿಂದ ನಾವು ಹಿಂತೆಗೆಯುತ್ತೇವೆ."

ಮಹಂತನು " ಸುಳ್ಳು ! ಮತದಮೇಲೇಕೆ ದೋಷಾರೋಪಣೆ ಮಾಡುವಿರಿ ? ಮತಕ್ಕೂ ದುಷ್ಟತನಕ್ಕೂ ಸಂಬಂಧವೇನಿದೆ ? ಯಾವ ಮತದಲ್ಲಿ ತಾನೇ ದೌರಾತ್ಮ್ಯ ಮಾಡಬಹುದೆಂದು ಹೇಳಿದೆ ? ನಿಮಗೆ ನಿಜವಾಗಿ ಮತಭಕ್ತಿಯಿದ್ದರೆ ಅನ್ಯಮತದ ಭೀತಿಯೇ ಇರುವುದಿಲ್ಲ. ದೇವರನ್ನು ನಂಬಿದವರು ದುರ್ಜನರನ್ನು ಶಿಕ್ಷಿಸಲು ಭಯಪಡುವುದೇ ಇಲ್ಲ " ಎಂದು ಹೇಳಿದನು.

ಮಂತ್ರಿಯು ಮಹಂತನ ಲೋಕಾನುಭವವನ್ನು ಮೆಚ್ಚಿದನು. ಮಹಂತನಿಗೆ ರಾಜರ ಭೇಟಿಯನ್ನು ಮಾಡಿಸಿ ಕಲಾಪತ್ತಿನ ಶಾಲು ಜೋಡಿಯನ್ನೂ ನೂರು ವರಹಗಳ ಹೊನ್ನನ್ನೂ ಬಹುಮಾನವಾಗಿ ಕೊಡಿಸಿದನು. ಮಹಂತನನ್ನು ಗರಳಪುರಿಗೆ ಕಳುಹಿಸಿಕೊಟ್ಟನು. ಮಂತ್ರಿಯು ಧೂರ್ತರಾದ ಜಂಗಮರಿಗೆ ಏನಾದರೂ ಪ್ರತೀಕಾರವನ್ನು ಮಾಡಬೇಕೆಂದು ಚಿಂತಿಸುತ್ತಿದ್ದನು. ಆದರೆ ರಾಜರು ಆ ಧೂರ್ತರನ್ನು ಶಿಕ್ಷಿಸುವುದಕ್ಕಿಂತಲೂ ಅವರ ಮತದ ಪ್ರತಿಷ್ಠಿತರಾದ ಗುರುಶ್ರೇಷ್ಠರುಗಳಿಂದಲೇ ಶಿಕ್ಷಾವಿಧಾನವನ್ನು ಕಲ್ಪಿಸಬೇಕೆಂದು ಸನ್ನಾಹ ಮಾಡುತ್ತಿದ್ದನು.

ರಾಜನು ರಾಜಕಾರ್ಯಗಳಲ್ಲಿ ವಿಶೇಷ ಆಸಕ್ತನಾಗಿರಲಿಲ್ಲ. ಪಂಡಿತನು ಮೃತಿಹೊಂದಿದ ಮೇಲೆ ರಾಜಧಾನಿಯು ರಾಜನಿಗೆ ಬೇಸರವಾಗಿ ಕಾಣುತ್ತಿದ್ದಿತು. ಆಗಾಗ ಮೈಸೂರಿಗೆ ಹೋಗಿ ನಾಲ್ಕಾರು ದಿನಗಳು ಅರಮನೆಯಲ್ಲಿದ್ದು ಬರುತ್ತಿದ್ದನು. ಮೈಸೂರಿಗೆ ಹೋಗುವಾಗಲೆಲ್ಲಾ ಮಲ್ಲಿಗೆ ಯುವರಾಜನ ಜೊತೆಯಲ್ಲಿಯೇ ಹೋಗುತ್ತಿದ್ದಳು. ಅವಳಿಗೆ ಮೈಸೂರಿನ ಮೇಲೆ ಬಹಳ ಮಮತೆಯಿದ್ದಿತು. ಜಂಗಮವಾಡಿಯಲ್ಲಿ ಬಹಳ ಭಕ್ತಿಯಿದ್ದಿತ.. ಜಂಗಮವಾಡಿಯು ಪವಿತ್ರಕ್ಷೇತ್ರವೆಂದೇ ಅವಳ ನಂಬುಗೆಯಿದ್ದಿತು. ಅಲ್ಲಿಗೆ ಹೋಗಿ ನೋಡಿಬರಬೇಕೆಂಬ ಕುತೂಹಲವಿದ್ದರೂ ಜಂಗಮವಾಡಿಗೆ ಹೋಗಲು ಅವಳು ಬಹಳವಾಗಿ ಅಂಜುತ್ತಿದ್ದಳು. ಜಂಗಮನ ಮರಣದ ವಿಷಯದಲ್ಲಿ ಅವಳಿಗೆ ವಿಶೇಷ ಸಂದೇಹವಿದ್ದಿತು. ಕಾತ್ಯಾಯಿನಿಯನ್ನು ಓಡಿಸಿಬಿಟ್ಟ ಮೇಲಂತೂ ಜಂಗಮವಾಡಿಯಲ್ಲಿ ದುಷ್ಟರು ಸೇರಿಕೊಂಡಿದ್ದಾರೆ ಎಂಬ ದೃಢ ಭಾವನೆಯು ಅವಳಿಗೆ ಬಂದುಹೋಗಿತ್ತು. ಮಂತ್ರಿಯ ಕೊಲೆಯ ವಿಚಾರದಲ್ಲಿಯೂ ಜಂಗಮವಾಡಿಯವರ ಮೇಲೆ ಕಳಂಕವಿದ್ದೇ ಇದ್ದಿತು. ಈ ವಿಚಾರಗಳನ್ನೆಲ್ಲಾ ರಾಜನೊಡನೆ ಪ್ರಸ್ತಾಪಮಾಡಲು ಅವಳಿಗೆ ಬಹಳ ಅಂಜಿಕೆ. ರಾಜನು ಒಂದು ಬಾರಿಯಾದರೂ ಜಂಗಮವಾಡಿಯ

ಮಾತನ್ನೆತ್ತುತ್ತಿರಲಿಲ್ಲ. ಅದು ಅವನ ಔದಾರ್ಯವೋ ಕಠೋರ ಭಾವವೋ ಎಂಬುದನ್ನು ಮಲ್ಲಿಗೆಯು ನಿಶ್ಚಯಿಸಲಾರದವಳಾಗಿದ್ದಳು.

ರಾಜನು ಸರ್ವದಾ ಚಿಂತೆಯಲ್ಲಿ ಮುಳುಗಿರುತ್ತಿದ್ದನು. ಎಲ್ಲ ವಿಷಯಗಳಲ್ಲಿಯೂ ಔದಾಸೀನ್ಯವು ಎದ್ದು ಕಾಣುತ್ತಿದ್ದಿತು. ರಾಜನನ್ನು ಸಂತೋಷಪಡಿಸಲು ಮಲ್ಲಿಗೆಯು ನಾನಾವಿಧವಾಗಿ ಪ್ರಯತ್ನಿಸುತ್ತಿದ್ದಳು. ಅವಳ ತೃಪ್ತಿಗಾಗಿ ಒಂದೊಂದು ಬಾರಿ ರಾಜನು ಸಮಾಧಾನವಾದಂತೆ ಅಭಿನಯ ಮಾಡುತ್ತಿದ್ದನು. ಮಲ್ಲಿಗೆಯು ಪದೇ ಪದೇ ರಾಜನ ಮುಂದೆ ಸಂಗೀತವನ್ನು ಹಾಡಲು ಅನುಮತಿ ಬೇಡುತ್ತಿದ್ದಳು ರಾಜನು ಒಂದುದಿನ ಮಲ್ಲಿಗೆಯನ್ನು ಕರೆದು "ಗಾಯಕಿ ! ಸ್ವಲ್ಪ ಹಾಡುವೆಯಾ?" ಎಂದು ಕೇಳಿದನು.

ಮಲ್ಲಿಗೆಗೆ ಹಿಡಿಯಲಾರದಷ್ಟು ಆನಂದವಾಯಿತು. ಅವಳು ತಾನೇ ಓಡಿಹೋಗಿ ತನ್ನಂತಃಪುರದಿಂದ ತಂಬೂರಿಯನ್ನು ತಂದು ಶೃತಿ ಮಾಡಿ ಹಾಡಲಾರಂಭಿಸಿದಳು. ಆ ಮಧುರಕಂಠ! ಆ ಸರಳವಾದ ಗಾನ ವೈಖರಿ ! ಇವುಗಳಲ್ಲಿ ರಾಜನು ನಿಜವಾಗಿ ಮೈಮರೆತನು. ಸಂಗೀತವು ಪೂರೈಸುತ್ತಲೇ "ಮಲ್ಲಿಗೆ ! ನೀನು ಯಾವಾಗಲೂ ನಂದನ ವನದ ಪಾರಿಜಾತ ಕುಸುಮದಂತೆ ಇರುವೆ. ಈ ಗಾನವೆಂಬುದು ನಿನ್ನ ಜೊತೆಯಲ್ಲಿಯೇ ಹುಟ್ಟಿರುವ ಪ್ರಭೆಯಂತಿದೆ. ಚಂದ್ರನ ಜೊತೆಯಲ್ಲಿ ಚಂದ್ರಪ್ರಭೆಯನ್ನು ಹೇಗೆ ಕಾಣುವೆವೋ ನಿನ್ನ ಜೊತೆಯಲ್ಲಿಯೇ ಈ ಸಂಗೀತವು ಹಾಗೆ ಜೀವಂತವಾಗಿ ಪ್ರಕಾಶಿಸುತ್ತದೆ" ಎಂದು ಹೇಳುತ್ತಾ ಮಲ್ಲಿಗೆಯನ್ನು ಆಲಿಂಗಿಸಿ ಚುಂಬಿಸಿದನು.

ಮಲ್ಲಿಗೆಗೆ ಇದು ಸ್ವಪ್ನದೃಶ್ಯದಂತೆ ಬೋಧೆಯಾಯಿತು ಇಂಥಾ ಪ್ರೇಮವನ್ನು ಅವಳು ಪ್ರತ್ಯಕ್ಷವಾಗಿ ನೋಡಿ ಎಷ್ಟೋ ದಿನಗಳಾಗಿ ಹೋಗಿತ್ತು. ಎಷ್ಟೋ ತಿಂಗಳುಗಳು ಕಳೆದು ಹೋಗಿದ್ದವು. ಮಲ್ಲಿಗೆಯು ರಾಜನ ಅನುಮತಿಯನ್ನು ಪಡೆದು ಅಂತಃಪುರಕ್ಕೆ ಹೊರಟು ಹೋದಳು. ಅವಳು ತನ್ನ ಕೋಣೆಯಲ್ಲಿ ಕುಳಿತು ತನ್ನ ಪ್ರತಿಭೆ

ಯನ್ನು ತಾನೇ ಪ್ರಶಂಸೆಮಾಡಿಕೊಂಡಳು. ತನ್ನ ಸಂಗೀತವನ್ನು ತಾನೇ ಮೆಚ್ಚಿದಳು. ಸರ್ವದಾ ಚಿಂತಾಕ್ರಾಂತನಾಗಿದ್ದ ರಾಜನನ್ನು ಪುಳಕಿತನನ್ನಾಗಿ ಮಾಡಿ ಪ್ರೇಮಾವಸ್ಥೆಗೆ ತಂದ ಆ ಮಹಾಸಂಜೀವನವು ತನ್ನ ಸಂಗೀತವೇ ಎಂದು ಸಂತೋಷಪಟ್ಟುಕೊಳ್ಳುತ್ತಿದ್ದಳು.

ಮಲ್ಲಿಗೆಯು ರಾಜನ ವಿಶ್ರಾಂತಿಗೃಹದಿಂದ ಹೊರಟು ಹೋಗುತ್ತಲೇ ದ್ವಾರಪಾಲಕನೊಬ್ಬನು ಬಂದು "ಮಹಾಸ್ವಾಮಿ, ಅರಮನೆಯ ದ್ವಾರದಲ್ಲಿ ಬಹು ಹೊತ್ತಿನಿಂದಲೂ ಸಂನ್ಯಾಸಿಯೊಬ್ಬನು ದರ್ಶನಾಪೇಕ್ಷೆಯಿಂದ ಕಾದಿದ್ದಾನೆ" ಎಂದು ತಿಳಿಸಿದನು.

ಮಹಾರಾಜನಿಗೆ ಇಷ್ಟವಿರಲಿಲ್ಲ. ಸಂನ್ಯಾಸಿಗಳೆಂದರೆ ಅವನಿಗೆ ಬೇಸರವಾಗಿ ಹೋಗಿದ್ದಿತು. ಆದರೂ ದ್ವಾರಪಾಲಕನು ಆ ಸನ್ಯಾಸಿಯು ಬಹುಹೊತ್ತಿನಿಂದ ಕಾದಿದ್ದಾನೆಂದು ಹೇಳಿದನು. ಭೋಜನಕ್ಕಿಲ್ಲದಿದ್ದರೆ ಅತಿಥಿಶಾಲೆಯಲ್ಲಿ ಭೋಜನವು ದೊರೆಯುತ್ತದೆ. ದಾನಧರ್ಮಗಳಲ್ಲೇನಾದರೂ ಅಪೇಕ್ಷೆಯಿದ್ದರೆ ಚಾವಡಿಯಲ್ಲಿ ದೊರೆಯುತ್ತದೆ. ಈ ಸನ್ಯಾಸಿಯು ನಮ್ಮನ್ನೇ ನೋಡಬೇಕೆಂದು ಹಠಹಿಡಿಯುವುದಕ್ಕೆ ಏನೋ ವಿಶೇಷ ಕಾರಣವಿರಬೇಕು ಎಂದು ಊಹಿಸಿ ತನ್ನ ಸಮ್ಮುಖಕ್ಕೆ ಕರೆತರವಂತೆ ಅಪ್ಪಣೆ ಮಾಡಿದನು

ಸನ್ಯಾಸಿಯು ದ್ವಾರಪಾಲಕನೊಡನೆ ರಾಜನ ವಿಶ್ರಾಂತಿಗೃಹಕ್ಕೆ ಬಂದು ಆಶೀರ್ವದಿಸಿ ಆಸನದಮೇಲೆ ಕುಳಿತುಕೊಂಡನು. ರಾಜನು ಆ ಸನ್ಯಾಸಿಯನ್ನು ಅಪಾದಮಸ್ತಕವಾಗಿ ನೋಡಿದನು. ಅವನ ವೇಷ, ಮುಖಭಾವಗಳು ವಿಚಿತ್ರವಾಗಿ ಕಂಡವು. ಆದರೂ ಸನ್ಯಾಸಿಯು ತೇಜಸ್ವಿಯಾಗಿ ಕಾಣುತ್ತಿದ್ದನು. ರಾಜನು "ಪರಿವ್ರಾಜಕನೇ! ನೀನೇಕೆ ಬಂದಿರುವೆ? ನನ್ನಿಂದೇನಾಗಬೇಕು?" ಎಂದು ಕೇಳಿದನು.

ಸನ್ಯಾಸಿಯು ಮೃದುಸ್ವರದಿಂದ "ರಾಜನೇ, ಅನೇಕ ದಿನಗಳಿಂದಲೂ ನಿನ್ನ ಭೇಟಿಮಾಡಬೇಕೆಂದು ಸಂಕಲ್ಪಿಸಿದ್ದೆ. ಆದರೆ ಸರಿಯಾದ ಸಮಯವು ದೊರೆಯಲಿಲ್ಲ. ಈಗ ನಿಮ್ಮ ದರ್ಶನವು

ದೊರೆಯಿತು" ಎಂದನು.

"ಸನ್ಯಾಸಿಯೇ, ನನ್ನ ದರ್ಶನಾಕಾಂಕ್ಷೆಯ ಉದ್ದೇಶವೇನು ?"

"ರಾಜ್ಯದಲ್ಲಿ ಕೋಲಾಹಲವೆದ್ದಿದೆ. ಪುಂಡು ಪೋಕರಿಗಳು ಬಹಳ ದುರುಳತನವನ್ನು ಮಾಡುತ್ತಿದ್ದಾರೆ. ಎಷ್ಟೊ ಸಂಸಾರಗಳೇ ಹಾಳಾಗಿ ಹೋಗಿವೆ. ದೇಶದಲ್ಲಿ ಈ ಜಂಗಮುವಾಡಿಯವರ ಕಾಟವು ಬಲವಾಗಿದೆ."

"ಇರಬಹುದು. ಅದು ಅಷ್ಟಾಗಿ ನಮ್ಮ ಗಮನಕ್ಕೆ ಬಂದಿಲ್ಲ. ಧರ್ಮದ ನಿಯಂತ್ರಣವು ನಮ್ಮ ಕೈಯಲ್ಲಿ ಇಲ್ಲ. ಎಲ್ಲ ಧರ್ಮಗಳಲ್ಲಿಯೂ ಮೂಢರು ಜ್ಞಾನಿಗಳು ಇರುತ್ತಾರೆ. ದುಷ್ಟರೂ, ಸಾತ್ವಿಕರೂ ಇರುತ್ತಾರೆ. ನಾವೇನು ಮಾಡಲಾದೀತು ? ಅದರಲ್ಲಿ ನಮ್ಮ ಹೊಣೆಗಾರಿಕೆ ಏನಿದೆ ?"

"ಪ್ರಭು, ತಮ್ಮ ಹೊಣೆಗಾರಿಕೆಯಿದೆಯೆಂದು ಹೇಳುವುದಕ್ಕೇ ಇಲ್ಲಿಗೆ ಬಂದಿದ್ದೇನೆ."

"ನಮ್ಮ ಹೊಣೆಗಾರಿಕೆಯೇನು ?"

"ಮಹಾರಾಜನೇ ಈ ಜಂಗಮುವಾಡಿಯು ಎಲ್ಲಿತ್ತು? ಆ ಜಂಗಮು ನೆಲ್ಲಿದ್ದನು ? ಇದು ಪ್ರಾಚೀನ ಪರಂಪರೆಯಿಂದ ಬಂದದ್ದೇನು ?"

"ಪ್ರಾಚೀನವೆಲ್ಲವೂ ಪವಿತ್ರವೆಂದು, ನವೀನವೆಲ್ಲವೂ ಅಪವಿತ್ರವೆಂದು ಹೇಳಲಾದೀತೆ ?"

"ನಾನು ಹಾಗೆ ಹೇಳಲಿಲ್ಲ. ಪ್ರಾಚೀನ–ನವೀನಗಳ ವಿಮರ್ಶೆ ಮಾಡುವುದಕ್ಕೆ ನಾನು ಉದ್ಯುಕ್ತನಾಗಿಲ್ಲ. ಈ ಜಂಗಮುವಾಡಿ, ಆ ಜಂಗಮು ಇವುಗಳ ಸಮಾಚಾರಗಳನ್ನೆಲ್ಲಾ ಆದ್ಯೋಪಾಂತವಾಗಿ ನಾನು ಅರಿತಿದ್ದೇನೆ. ಈಗ ಅದರಿಂದ ದೇಶಕ್ಕೆ ಆಗುತ್ತಿರುವ ನಷ್ಟವನ್ನೂ ನೋಡುತ್ತಿದ್ದೇನೆ. ಮುಂದಾಗಬಹುದಾದ ಹಾನಿಯನ್ನೂ ಊಹಿಸಿದ್ದೇನೆ. ಅದನ್ನೇ ನಿನ್ನಲ್ಲಿ ಹೇಳಲು ಬಂದಿದ್ದೇನೆ."

"ಓಹೋ! ನೀನು ಎಲ್ಲವನ್ನೂ ಬಲ್ಲೆಯೋ? ಜಂಗಮುನ ಮರಣವು ಹೇಗಾಯಿತೆಂಬುದನ್ನು ನೀನು ಹೇಳಬಲ್ಲೆಯೋ ?"

"ಹೌದು. ಹೇಳಬಲ್ಲೆ! ಅದನ್ನು ಈ ಜಗತ್ತಿನಲ್ಲೆಲ್ಲಾ ಪ್ರಚುರ ಪಡಿಸಬೇಕೆಂದು ನಾನು ಇಷ್ಟವುಳ್ಳವನಾಗಿದ್ದೇನೆ."

"ಜಂಗಮವಾಡಿಯ ಸಮಾಚಾರಗಳು ಜಂಗಮರಿಗೆ ಸಂಬಂಧ ಪಟ್ಟದ್ದು. ಶಿವಭಕ್ತರಿಗೆ ಸಂಬಂದ ಪಟ್ಟದ್ದು."

"ಹೌದು, ಪಟ್ಟದ ಗುರುಗಳಿಗೂ ಅನೇಕ ಮಂದಿ ತಪೋನಿಷ್ಠ ರಾದ ಜಂಗಮರಿಗೂ ಈ ವಿಷಯವು ಚೆನ್ನಾಗಿ ತಿಳಿದಿದೆ. ಅವರುಗಳು ಇದಕ್ಕೆ ಬೆಂಬಲ ಕೊಡುತ್ತಿಲ್ಲ. 'ಇದಕ್ಕೆಲ್ಲಾ ರಾಜನೇ ಕಾರಣ. ನಾವೇನು ಮಾಡಲಾದೀತು' ಎಂದು ಹೇಳುತ್ತಾರೆ."

"ರಾಜನೇ ಕಾರಣ! ಅದು ಹೇಗೆ?"

"ಮಹಾರಾಜನೇ, ನಾಲ್ಕಾರು ವರ್ಷಗಳ ಹಿಂದೆ ಈ ಜಂಗಮನು ಹೇಗಿದ್ದನು? ಯಾವ ಗುರುಗಳಲ್ಲಿ ಸೇವೆಮಾಡಿ ದೀಕ್ಷೆಯನ್ನು ಪಡೆದನು? ಮಂತ್ರ-ತಂತ್ರ, ಮಾಯ ಮಣಗಳನ್ನು ಮಾಡುತ್ತಾ ಸಂಸಾರಿಗಳನ್ನು ಮೋಸ ಮಾಡುತ್ತಾ ಬೆಟ್ಟದ ಗವಿಯಲ್ಲಿದ್ದುಕೊಂಡು ಹೊಟ್ಟೆ ಹೊರೆದು ಕೊಳ್ಳುತ್ತಿದ್ದನು. ಅವನಿಗೆ ಇಷ್ಟು ಐಶ್ವರ್ಯವು ಎಲ್ಲಿಂದ ಬಂದಿತು? ಈ ಜಂಗಮವಾಡಿಯು ಎಲ್ಲಿತ್ತು? ಈ ರಾಜ್ಯದ ರಾಜನಾದ ನೀನು ಅವನ ಮೇಲೆ ಅನುಗ್ರಹ ಮಾಡಿದ್ದೀ. ಅವನು ಒಂದೇ ದಿನದಲ್ಲಿ ಜಗದ್ಗುರುವಾಗಿ ಬಿಟ್ಟನು ಮಾಯಾ ತಂತ್ರಗಳನ್ನು ಮಾಡುವವನು ಜಗದ್ಗುರುವಾದಾನೇ? ರಾಜರ ಐಶ್ವರ್ಯವನ್ನು ಪ್ರಲೋಭದಿಂದ ಕಿತ್ತು ದಾನಧರ್ಮಗಳ ಆಡಂಬರ ಮಾಡಿದರೆ ಪರಶಿವನು ಪ್ರಸನ್ನನಾಗು ವನೇ? ಇದೆಲ್ಲವೂ ಚಿಕ್ಕರಾಣಿಯವರ ಪ್ರಸಾದವಲ್ಲವೆ?"

ರಾಜನು ತಲೆದೂಗಿದನು. ಎರಡು ಕ್ಷಣ ಸುಮ್ಮನಿದ್ದು "ಸನ್ಯಾ ಸಿಯೇ, ಆ ಜಂಗಮನು ನಿಜವಾದ ಜಂಗಮನಲ್ಲವೆನ್ನುವೆಯಾ?"

"ಅಲ್ಲವೇ ಅಲ್ಲ, ಯಾವ ಜಂಗಮನಿಂದ ಅವನು ದೀಕ್ಷೆಯನ್ನು ಪಡೆದಿದ್ದನು? ಸ್ವಯಂವೇಷಧಾರಣೆ ಮಾಡಿದ್ದನು ಅಷ್ಟೆ. ಎಲ್ಲಿಯೋ ಮೂಲೆಯಲ್ಲಿ ಬಿದ್ದು ಹೊಟ್ಟೆ ಹೊರೆದುಕೊಳ್ಳುತ್ತಿದ್ದನು. ಅವನನ್ನು

ಇಷ್ಟು ಅಂತಸ್ತಿಗೆ ತಂದವನು ನೀನು"

"ಅಯ್ಯೋ, ಹುಚ್ಚು ಸನ್ಯಾಸಿಯೇ. ಆ ಜಂಗಮನೆಲ್ಲಿದ್ದಾನೆ? ಸತ್ತವನ ಮಾತೇಕೆ?"

"ಮಹಾರಾಜನೆ, ಅವನು ಸತ್ತರೂ ಪವಾಡಪುರುಷನೆನಿಸಿಕೊಂಡಿದ್ದಾನೆ. ಅದರಿಂದಲೇ ಅನರ್ಥಪರಂಪರೆಗಳು ಸಂಭವಿಸುತ್ತಿವೆ. ನೀನು ಕಣ್ಣುಮುಚ್ಚಿಕೊಂಡಿದ್ದರೆ ಲೋಕವೆಲ್ಲವೂ ಕಣ್ಣು ಮುಚ್ಚಿಕೊಂಡಿರುವುದೇ? ಪಂಡಿತಾರಾಧ್ಯನ ವಧೆ ಮಾಡಿದವರು ಈ ಜಂಗಮನಾಡಿಯುವರಲ್ಲವೆ? ಅದೆಷ್ಟೋ ನಿದರ್ಶನಗಳಿವೆ"

"ಹಾ, ಹಾ, ಪಂಡಿತನ ವಧೆಯ ರಹಸ್ಯವನ್ನು ಬಲ್ಲೆಯಾ?"

"ಅದರಲ್ಲಿ ರಹಸ್ಯವೇನಿದೆ? ಲೋಕವೆಲ್ಲವೂ ಬಲ್ಲದು. ನಗರ ರಕ್ಷಕರು ಬಂಧಿಸಿದ್ದ ಜಂಗಮರನ್ನೆಲ್ಲಾ ನೀನು ಬಿಟ್ಟುಬಿಟ್ಟೆ. ಪ್ರಜೆಗಳೆಲ್ಲರೂ ಆಶ್ಚರ್ಯಪಟ್ಟರು. ನೀನೇಕೆ ಬಿಡಿಸಿದೆ?"

"ಸನ್ಯಾಸಿಯೇ, ಈ ರಾಜ್ಯದಲ್ಲಿ ಶೈವ-ವೈಷ್ಣವ ವಿದ್ವೇಶವು ಪ್ರಬಲವಾಗಿದೆ. ಅದು ಇನ್ನೂ ಪ್ರಕೋಪ ಸ್ಥಿತಿಗೆ ಬರಬಹುದೆಂದು ಬಿಟ್ಟುಬಿಟ್ಟೆ. ಅಷ್ಟೆ ಅಲ್ಲ. ಆ ಗುಂಪಿನಲ್ಲಿ ಎಷ್ಟೋ ಜನ ನಿಜವಾದ ಸಾಧುಗಳಿರಬಹುದು ಅರಿಯದ ಅಜ್ಞಾನಿಗಳಿರಬಹುದು. ಅವರಿಗೆಲ್ಲಾ ಅನ್ಯಾಯವಾಗಿ ಶಿಕ್ಷೆಯಾಗುತ್ತದೆಂದು ಬಿಟ್ಟು ಬಿಟ್ಟೆ."

"ರಾಜನೇ ಅದಕ್ಕ ಮಾರ್ಗವಿದ್ದಿತು. ಈಗಲೂ ಮಾರ್ಗವುಂಟು. ಅಪರಾಧಿಗಳನ್ನೆಲ್ಲಾ ಹಿಡಿದು ಬಂಧಿಸಿದರೆ ಅವರ ಪೂರ್ವೋತ್ತರಗಳನ್ನು ವಿಚಾರಿಸಿದರೆ ಪಟ್ಟದ ಗುರುಗಳೇ ಹೇಳುತ್ತಿದ್ದರು. ನಿಜವಾದ ಜಂಗಮರು ಹೇಳುತ್ತಿದ್ದರು. ಅಂಥವರನ್ನು ಶಿಕ್ಷಿಸಿದ್ದರೆ ಶೈವರು ಆಗ್ರಹಗೊಳ್ಳುತ್ತಿರಲಿಲ್ಲ. ಶೈವರೆಲ್ಲರೂ ಮೂಢರಲ್ಲ. ಆ ಜಂಗಮರ ಮೇಲೆ ನಿಜವಾದ ಶೈವರಿಗೆ ಅಸಮಾಧಾನವೇ ಇದ್ದಿತು."

ಆ ಸಮಾಧಿಯಲ್ಲಿ ಮಣ್ಣಾಗಿ ಹೋಗಿರುವ ಜಂಗಮನಿಗೂ ಮಂತ್ರಿವಧೆಗೂ ಏನು ಸಂಬಂಧ?"

"ಸಂಬಂಧವಿದೆ. ಜಂಗಮನು ಮಂತ್ರಿಯನ್ನು ಗೋಪ್ಯವಾಗಿ ವಧೆಮಾಡಿಸಬೇಕೆಂದು ಸಂಕಲ್ಪ ಮಾಡಿದ್ದನು. ಅವನೇ ದುರುಳರನ್ನೆಲ್ಲಾ ಎತ್ತಿಕಟ್ಟಿದ್ದನು. ಆಗ ಆಕಸ್ಮಿಕವಾಗಿ ಜಂಗಮನ ವಧೆಯಾಯಿತು. ಇಲ್ಲದಿದ್ದರೆ ಆಗಲೇ ಪಂಡಿತನ ವಧೆಯಾಗುತ್ತಿತ್ತು. ಆ ಜಂಗಮನು ಎತ್ತಿಕಟ್ಟಿದ ಆ ದುಷ್ಟ ಜನರೇ ಸತ್ತ ಜಂಗಮನಿಗೆ ತೃಪ್ತಿಯಾಗುವುದೆಂದು ಮಂತ್ರಿಯ ವಧೆ ಮಾಡಿದರು. ಮಂತ್ರಿಯು ಈ ಜಂಗಮವಾಡಿಯ ಮೇಲೆ ವಿಶೇಷ ಕಣ್ಣಿಟ್ಟಿದನು. ಅದರಿಂದಲೇ ಈ ದುಷ್ಟರು ಮಂತ್ರಿಯನ್ನು ವಧೆ ಮಾಡಿದರು."

"ಸನ್ಯಾಸಿಯೇ, ಇದಕ್ಕೆ ಸಾಕ್ಷಿ ಯಾರು ?"

"ಪ್ರತ್ಯಕ್ಷ ಸಾಕ್ಷಿಗಳಿಲ್ಲ. ಆದರೆ ಆ ಜಂಗಮವಾಡಿಯಲ್ಲಿದ್ದ ಕಾತ್ಯಾಯಿನಿಯು ಇದೆಲ್ಲವನ್ನೂ ಬಲ್ಲಳು. ನಾನು ಬಲ್ಲೆ. ಅದನ್ನು ನಂಬುವುದೂ ಬಿಡುವುದೂ ನಿನ್ನ ಇಷ್ಟ. ನೀನು ನಂಬದಿದ್ದರೆ ಪಂಡಿತನ ಕೊರಳಿಗೆ ಸುತ್ತಿದ್ದ ಮೃತ್ಯುಸರ್ಪವು ನಿನ್ನನ್ನು ಕಾಯುತ್ತಿದೆಯೆಂಬುದನ್ನು ಮಾತ್ರ ನೆನಪಿನಲ್ಲಿಡು."

ರಾಜನು ಚಕಿತನಾದನು. "ಸನ್ಯಾಸಿಯೇ, ಆ ಜಂಗಮನ ಪೂರ್ವೋತ್ತರಗಳನ್ನೆಲ್ಲಾ ನೀನು ಅರಿತಿರುವಂತಿದೆ. ಅವನು ವೇಷಧಾರಿಯೆಂದು ಹೇಳಿದೆ ಅದು ಹೇಗೆ ?"

"ರಾಜನೇ ಅವನು ಜಂಗಮನಲ್ಲ. ಶಿವಭಕ್ತನೂ ಅಲ್ಲ. ಜಾತಿಯಲ್ಲಿ ವೈಷ್ಣವ. ಅವನ ಹೆಸರು ಶ್ರೀನಾಥ. ಅನ್ನಕ್ಕಿಲ್ಲದೆ ಅಲೆಯುತ್ತಿರುವ ಅವನ ಪತ್ನಿಯು ಈಗಲೂ ಶ್ರೀರಂಗದಲ್ಲಿ ಪ್ರಸಾದಕ್ಕೆ ಕೈಯೊಡ್ಡಿ ಕುಳಿತಿದ್ದಾಳೆ. ಇದಕ್ಕಿಂತಲೂ ಮತ್ತೇನು ನಿದರ್ಶನವು ಬೇಕು? ಯಾವ ಪಟ್ಟದಾಚಾರ್ಯ, ಯಾವ ಜಂಗಮದೇವನು ಅವನಿಗೆ ಶಿವದೀಕ್ಷೆಯನ್ನು ಕೊಟ್ಟನು ? ನಿಜವಾದ ಮಹಿಮೆಯುಳ್ಳ ಜಂಗಮದೇವನು ಮಲ್ಲಿಗೆಯನ್ನು ಕರೆತಂದು ನಿನ್ನ ವಶಕ್ಕೇಕೆ ಒಪ್ಪಿಸಿದನು ? ಜಂಗಮನು ಸತ್ತುಹೋಗಿದ್ದರೂ ನಿನ್ನ ಅಂತರಾತ್ಮ ಸಾಕ್ಷಿಯು ಇಲ್ಲವೆ?"

ಎಂದು ಮೂದಲಿಸಿದನು.

ರಾಜನು ಪ್ರಕ್ಷುಬ್ಧನಾದನು. ತನ್ನೊಳಗೇ ಶಾಂತಿಯನ್ನು ತಂದುಕೊಂಡನು. "ಇವೆಲ್ಲವೂ ಸರಿ. ನಿನಗೆ ಮಲ್ಲಿಗೆಯ ವಿಚಾರವೇಕೆ?" ಎಂದನು.

ಸನ್ಯಾಸಿಯು ತಿರಸ್ಕಾರದ ನಗುವನ್ನು ನಕ್ಕು "ನನಗೇಕೆ? ಮಲ್ಲಿಗೆಯು ನನ್ನವಳು. ನಾನು ಅವಳಿಗೆ ವಿದ್ಯೆಯನ್ನು ಕಲಿಸಿ ದೊಡ್ಡ ವಿದ್ವಾಂಸಳನ್ನಾಗಿ ಮಾಡಿದೆ. ನಾನು ಮಲ್ಲಿಗೆಯ ಗುರು."

ರಾಜನು ತಲೆದೂಗುತ್ತಾ "ಓಹೋ, ನೀನು ವಿಶ್ವೇಶ್ವರನೇನು? ನೀನೇಕೆ ಸನ್ಯಾಸಿಯಾದೆ? ನೀನು ಅಪಾರ ವಿದ್ಯಾವಂತನೆಂದು ಕೇಳಿದ್ದೇನೆ. ನಿನ್ನನ್ನು ನಮ್ಮ ಆಸ್ಥಾನಕ್ಕೆ ಬರಬೇಕೆಂದು ಹಲವಾರು ಸಾರಿ ಅಪೇಕ್ಷಿಸಿದರೂ ನೀನೇಕೆ ಬರಲಿಲ್ಲ?" ಎಂದು ಕೇಳಿದನು.

ಸನ್ಯಾಸಿಯು "ಅದಕ್ಕೆ ಎರಡು ಕಾರಣಗಳುಂಟು. ನಾನು ಆಸ್ಥಾನದಲ್ಲಿ ಬಂದು ಹಾಡಿದರೆ ಮಲ್ಲಿಗೆಯ ವಿದ್ಯೆಯು ಕಳೆಕಟ್ಟದೆ ನಿಷ್ಪ್ರಯೋಜಕವಾಗಿ ಹೋಗುವುದು; ಮತ್ತೊಂದು ಕಾರಣವೆಂದರೆ ನಾನು ಬೇರೊಬ್ಬ ಶಿಷ್ಯನಿಗೆ ವಿದ್ಯೆಯನ್ನು ಹೇಳಿ ಕೊಡುವುದಿಲ್ಲವೆಂದು ಸಂಕಲ್ಪಿಸಿದ್ದೇನೆ. 'ಆದ್ದರಿಂದ ಮರೆಯಲ್ಲಿಯೇ ಇದ್ದು ಕಾಲ ಕಳೆಯುತ್ತಿದ್ದೇನೆ" ಎಂದು ಹೇಳಿದನು.

"ನೀನೇಕೆ ಸನ್ಯಾಸಿಯಾದೆ?"

"ನಾನು ಸನ್ಯಾಸಿಯೆಂದು ನಿನಗಾರು ಹೇಳಿದರು? ಕಾವಿಯ ಬಟ್ಟೆಗಳನ್ನು ಧರಿಸಿದ ಮಾತ್ರಕ್ಕೆ ಸನ್ಯಾಸಿಯಾಗುವನೇ? ನಾನು ಹೀಗೆ ವೇಷಧಾರಣೆ ಮಾಡಿರುವ ಕತೆಯು ಬಲು ದೊಡ್ಡದು. ಅದನ್ನೊಂದಾಧರೂ ಹೇಳುವ ಸಂದರ್ಭವು ಬಂದರೆ ಹೇಳುತ್ತೇನೆ. ನಾನು ನಿಜವಾದ ಸನ್ಯಾಸಿಯಾಗಿದ್ದರೆ ಈಗ ನಿನ್ನ ಸಮಿಾಪಕ್ಕೆ ಏಕೆ ಬರುತ್ತಿದ್ದೆ?"

"ಸನ್ಯಾಸಿಯೇ, ನೀನೇ ವಿಶ್ವೇಶ್ವರನೆಂದು ತಿಳಿದು ನನಗೆಷ್ಟೋ ಆನಂದವಾಯಿತು. ನೀನೇಕೆ ಬಂದೆಯೆಂದಾಗಲೀ ನಿನ್ನ ಉದ್ದೇಶವೇ

ನೆಂಬುದಾಗಲೀ ನನಗಿನ್ನೂ ಅರ್ಥವಾಗಿಲ್ಲ."

"ರಾಜನೇ, ನೀನಿಷ್ಟು ಅಲ್ಪಜ್ಞನೇ? ರಾತ್ರಿಯೆಲ್ಲಾ ರಾಮಾಯಣ ವನ್ನು ಕೇಳಿ ಸೀತೆಗೂ ರಾಮನಿಗೂ ಏನು ಸಂಬಂಧವೆಂದು ಕೇಳು ವವನಂತೆ ಮಾತನಾಡುತ್ತಿರುವೆ. ಜಂಗಮವಾಡಿಯವರೆಲ್ಲ ದುಷ್ಟರು. ಅವರಲ್ಲಿ ಒಬ್ಬನಾದರೂ ಸಾತ್ವಿಕನಾದ ಜಂಗಮನಿಲ್ಲ" ನಿಜವಾದ ಜಂಗಮರಿಗೂ ಅವರಿಗೂ ಯಾವ ಸಂಬಂಧವೂ ಇಲ್ಲ ಅವರೇ ಮಂತ್ರಿ ವಧೆಯನ್ನು ಮಾಡಿದ ಪಾತಕಿಗಳು. ಇಂದಲ್ಲ ನಾಳೆ ನಿನ್ನ ವಧೆಗೆ ಹೊಂಚು ಹಾಕುತ್ತಿದ್ದಾರೆ. ಈ ರಾಜ್ಯವು ಅನಾಯಕವಾಗುತ್ತದೆ. ಇದನ್ನು ನಿನಗೆ ಹೇಳುವುದಕ್ಕೆ ಬಂದಿದ್ದೇನೆ. ಈಗಲಾದರೂ ಅರ್ಥ ವಾಯಿತೆ !"

ರಾಜನು ತಲೆದೂಗಿದನು "ಸನ್ಯಾಸಿಯೇ ನೀನು ಒಳ್ಳೆಯದನ್ನೆ ಹೇಳಿದೆ. ನಿನಗೇಕೆ ಜಂಗಮವಾಡಿಯ ಮೇಲೆ ಇಷ್ಟೊಂದು ಆಗ್ರಹ? ಅದನ್ನು ಕೇಳಬಹುದೇ ?"

ಸನ್ಯಾಸಿಯು ನಕ್ಕು "ನೀನು ಕೇಳಲೂ ಬಹುದು. ಆ ಜಂಗಮನ ಮೇಲೆ ನನಗೆ ಬದ್ಧವೈರ. ಈ ಜಂಗಮವಾಡಿಯನ್ನು ನೆಲಸಮ ಮಾಡಬೇಕೆಂದು, ಆ ಧೂರ್ತರನ್ನೆಲ್ಲಾ ಗಲ್ಲಿಗೆ ಹಾಕಿಸಬೇಕೆಂದು ನನ್ನ ಇಚ್ಛೆ" ಎಂದನು.

"ಒಳ್ಳೆಯದು, ಸನ್ಯಾಸಿಗಳು ಅಷ್ಟು ಆಗ್ರಹ ಮಾಡಬಾರದು."

"ರಾಜನೇ, ನಾನು ಸನ್ಯಾಸಿಯಲ್ಲವೆಂದು ಎಷ್ಟು ಬಾರಿ ಹೇಳಿದರೂ ನಿನಗೆ ಅರ್ಥವಾಗುವುದಿಲ್ಲವೆ ? ಸಂಸಾರವಿಲ್ಲದವನನ್ನು ಸನ್ಯಾಸಿಯೆನ್ನು ವುದಾದರೆ ನನ್ನನ್ನು ಸನ್ಯಾಸಿಯೆನ್ನಬಹುದು. ಈ ಕಾಷಾಯವಸನಗಳನ್ನು ಕಂಡು ಭ್ರಾಂತನಾಗಿದ್ದರೆ ನನ್ನನ್ನು ಸನ್ಯಾಸಿಯೆನ್ನಬಹುದು. ನಾನು ವಿಶ್ವೇಶ್ವರ"

ರಾಜನು "ವಿಶ್ವೇಶ್ವರಾ, ನೀನು ಮಲ್ಲಿಗೆಯನ್ನು ನೋಡಿ ಹೋಗು ವೆಯಾ ?"

"ಇಲ್ಲ ಮಹಾರಾಜನೇ ನಾನು ಮಲ್ಲಿಗೆಯನ್ನು ನೋಡುವುದಿಲ್ಲ"

"ಏಕೆ ಗಾನವಿದ್ಯಾಚಾರ್ಯ! ಶಿಷ್ಯಳ ಮೇಲೆ ಆಗ್ರಹವಿದೆ ಯೇನು?"

"ರಾಜನೇ, ಈ ಜಗತ್ತಿನಲ್ಲಿ ನನಗೆ ಪರಮಪ್ರಿಯವಾದ ವಸ್ತು ವೊಂದಿದ್ದರೆ ಅದು ಮಲ್ಲಿಗೆ. ಅವಳಲ್ಲಿ ನನ್ನ ಪೂರ್ಣಾಭಿಮಾನವಿದೆ. ಆದರೆ ಅವಳ ತಲೆಯಲ್ಲಿ ಆ ಜಂಗಮನ ಭಕ್ತಿಯಿದೆ. ಜಂಗಮವಾಡಿಗೆ ಈಗಲೂ ಹಣ ಕೊಡುತ್ತಾಳೆ. ಅದು ಹುತ್ತಕ್ಕೆ ಹಾಲೆರೆದಂತೆ! ಆ ಜಂಗಮವಾಡಿಗೆ ಆ ಚಿನ್ನದ ಕಳಶಗಳು, ಆ ಸಮಾಧಿ, ಆ ಪೂಜಾದಿ ವೈಭವಗಳು ಇವೆಲ್ಲವೂ ಮಲ್ಲಿಗೆಯ ಪೂರ್ವಾರ್ಜಿತ ಪಾಪದ ಫಲ. ಎಂದಾದರೊಂದು ದಿನ ಅದನ್ನು ಪ್ರತ್ಯಕ್ಷವಾಗಿ ಅನುಭವಿಸಬೇಕು. ಅದನ್ನು ನಾನು ಪ್ರತ್ಯಕ್ಷವಾಗಿ ನಂಬಿದ್ದೇನೆ ಅದಕ್ಕಾಗಿ ಪರಿತಪಿಸು ತ್ತೇನೆ" ಎಂದು ಹೇಳಿದನು.

ಮಲ್ಲಿಗೆಯ ಗುರುವಿನ ನಿರ್ವ್ಯಾಜ ಅಭಿಮಾನವನ್ನು ನೋಡಿ ರಾಜನಿಗೆ ಸಂತೋಷವಾಯಿತು. "ವಿಶ್ವೇಶ್ವರಾ, ಹೋಗಿ ಬಾ! ಬಹಳ ಹೊತ್ತಾಯಿತು. ತಪ್ಪು ಮಾಡಿದವರಿಗೆ ಶಿಕ್ಷೆಯಾಗುತ್ತದೆ. ಎಂದಾ ದರೂ ಬಂದು ದರ್ಶನವನ್ನು ಕೊಡು."

"ರಾಜನೇ, ಹೋಗುತ್ತೇನೆ. ಎಂದಾದರೂ ಬಂದು ದರ್ಶನಕೊಡು ತ್ತೇನೆ. ಎಂದು ಕೋಪೋದ್ರೇಕವಾಗುವುದೋ, ಎಂದು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಮನಸ್ಸು ಕುದಿಯುವುದೋ ಅಂದು ನಿನ್ನಲ್ಲಿಗೆ ಬರುತ್ತೇನೆ."

ರಾಜನು ನಕ್ಕನು. "ಸನ್ಯಾಸಿಯೇ ಆತ್ಮಹತ್ಯೆ ಮಾಡಿಕೊಂಡು ನಿನ್ನ ಕೊಲೆಯ ಅಪವಾದವನ್ನು ನನ್ನ ಮೇಲೆ ಹೊರಿಸಬೇಕೆಂದಿ ರುವೆಯಾ?"

"ಇಲ್ಲ ಪ್ರಭು. ನೀನೂ ನನ್ನಂತೆ ಸಾಮಾನ್ಯ ಮಾನವ. ನಿನ್ನ ಮುಂದೇಕೆ ಆತ್ಮಹತ್ಯೆ ಮಾಡಿಕೊಳ್ಳಲಿ. ಸಾಕ್ಷಾತ್ ಪರಮೇಶ್ವರನ

ಮುಂದೆ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. ಅವನ ಲೀಲೆಯಿಂದಲ್ಲವೆ ಇಷ್ಟು ಅನರ್ಥಗಳು ನಡೆಯುವುದು? ಅಧರ್ಮವು ಬೆಳೆಯುತ್ತಿದೆ. ಅವನೇ ಹೊಣೆ" ಎಂದು ಹೇಳಿ ನಿಟ್ಟುಸಿರು ಬಿಟ್ಟು ರಾಜನನ್ನು ಹರಸಿ ಸನ್ಯಾಸಿಯು ರಾಜಗೃಹದಿಂದ ಹೊರಟು ಹೋದನು.

## ೨೨

ಮಲ್ಲಿಗೆಯು ರಾಜನ ಪ್ರಸನ್ನ ಭಾವವನ್ನು ನೋಡಿ ಆನಂದಿಸ ತೊಡಗಿದಳು ಮಲ್ಲಿಗೆಗೆ ರಾಜನೇ ದೇವರು. ಅವನೇ ಸರ್ವಸ್ವ. ಅವನ ಪ್ರಸನ್ನತೆಗಿಂತಲೂ ಮತ್ತೇನು ಬೇಕು! ರಾಜನು ಮಲ್ಲಿಗೆಯನ್ನು ಕಂಡರೆ ಹಾಗೆಯೇ ಪ್ರೀತಿಸುತ್ತಿದ್ದನು. ಪುನಃ ಪ್ರತಿದಿನವೂ ಮಲ್ಲಿಗೆಯ ಸಂಗೀತ, ನರ್ತನಗಳು ಮೈಸೂರಿನ ಅರಮನೆಯಲ್ಲಿ ಆರಂಭವಾಗಿದ್ದವು. ಮಲ್ಲಿಗೆಯ ನರ್ತನದ ವೈಖರಿಯು ಅನ್ಯಾದೃಶವಾದುದು. ಆಕಾಶದಿಂದ ವಿದ್ಯುತ್ಪ್ರವಾಹವು ಸೌಮ್ಯರೂಪದಿಂದ ಇಳಿದು ಬಂದಂತೆ, ಭೂಮಿಗೆ ಬರುತ್ತಲೇ ಪುಷ್ಪಮಯವಾಗಿ ಹರಡಿದಂತೆ, ಆ ಪುಷ್ಪಶಯ್ಯೆಯಿಂದ ಪುನಃ ಅಪ್ಸರೆಯು ಎದ್ದು ಕುಣಿದಂತೆ, ಆ ನರ್ತನದ ಭಾವ ಭಂಗಿಯು ಭಾಸವಾಗುತ್ತಿದ್ದಿತು. ರಾಜನು ನರ್ತನವಾದ ಮೇಲೆ "ಮಲ್ಲಿಗೆ, ಇದಾವ ಭಂಗಿ?" ಎಂದು ಕೇಳಿದನು.

ಮಲ್ಲಿಗೆಯು ತನ್ನ ಎರಡು ತೋಳುಗಳಿಂದಲೂ ಚಿಕ್ಕಪ್ಪಾಜಿಯ ಕಂಠವನ್ನು ಬಿಗಿದಪ್ಪಿ "ಪ್ರಭು! ಇದು ಮೇನಕೆಯ ನೃತ್ಯವೆಂದು ನನ್ನ ಗುರುದೇವನಾದ ವಿಶ್ವೇಶ್ವರನು ಹೇಳುತ್ತಿದ್ದನು" ಎಂದು ಹೇಳಿದಳು. "ಮತ್ತೊಂದು ನೃತ್ಯವಿದೆ. ಅದು ನನಗೇನೋ ಅತ್ಯಂತ ಪ್ರಿಯವಾದುದು. ಆದರೆ ಆ ನೃತ್ಯವನ್ನು ನೋಡಿ ಸಹಿಸುವ ಸಹನೆಯು ತಮಗಿಲ್ಲ

ವೆಂದು ನಾನೆಂದೂ ಆ ನೃತ್ಯಭಂಗಿಯನ್ನು ತೋರಿಸಲಿಲ್ಲ" ಎಂದು ಹೇಳಿದಳು.

ರಾಜನು "ಅದಾವ ನೃತ್ಯ ?" ಎಂದು ಆಸಕ್ತಿಯಿಂದ ಕೇಳಿದನು.

"ಅದು ದಾಕ್ಷಾಯಿಣಿಯ ನೃತ್ಯ. ದಾಕ್ಷಾಯಿಣಿಯು ಪಿತೃಗೃಹಕ್ಕೆ ಹೋಗಲು ಶಂಕರನ ಅಪ್ಪಣೆಯನ್ನು ಬೇಡುವಳು. ಶಂಕರನು ನಿರಾಕರಿಸುವನು. ದಾಕ್ಷಾಯಿಣಿಯು ಹಠದಿಂದ ಪಿತೃಗೃಹಕ್ಕೆ ಹೋಗುವಳು. ಯಜ್ಞಶಾಲೆಯಲ್ಲಿ ಪರಶಿವನ ನಿಂದೆಯನ್ನು ಸಹಿಸಲಾರದೆ ಯಜ್ಞಕುಂಡದಲ್ಲಿ ದಾಕ್ಷಾಯಿಣಿಯು ಧುಮುಕುವಳು. ದೇವತೆಗಳೂ ಋಷಿಕುಲವೂ ಹಾಹಾಕಾರ ಮಾಡುವರು. ಆ ಯಜ್ಞಕುಂಡದಿಂದ ಪರ್ವತರಾಜ ಕುಮಾರಿಯು ಎದ್ದು ಬರುವಳು. ಇದೇ ಆ ನೃತ್ಯದ ಭಾವವಿಸ್ತಾರ!" ಎಂದು ಹೇಳಿದಳು.

ರಾಜನು "ಮಲ್ಲಿಗೆ! ಗಿರಿಜೆಯಾಗಿ ನೀನು ಹೇಗೆ ಶೋಭಿಸುವೆಯೋ ಒಂದು ಬಾರಿ ಆ ನೃತ್ಯಭಂಗಿಯನ್ನು ತೋರಿಸು ನೋಡೋಣ!" ಎಂದು ಪ್ರೇಮದಿಂದ ಪ್ರಾರ್ಥಿಸಿದನು.

ಮಲ್ಲಿಗೆಯು ರಾಜನ ಬಾಹುಬಂಧನದಿಂದ ಬಿಡಿಸಿಕೊಂಡು ಸದರಿನ ಮೇಲೆ ನಿಂತು ದಾಕ್ಷಾಯಿಣಿಯ ನೃತ್ಯವನ್ನು ಆರಂಭಿಸಿದಳು. ರಾಜನು ನಿಂತುಕೊಂಡೇ ನೋಡುತ್ತಿರುವನು. ದಾಕ್ಷಾಯಿಣಿಯು ಯಜ್ಞಶಾಲೆಯಲ್ಲಿ ಅಭಿನಯಿಸಿದ ದುಃಖ, ಕ್ರೋಧ, ಮೂರ್ಛೆಗಳನ್ನು ನೋಡಿ ರಾಜನ ಎದೆಯು ಡಬಡಬನೆ ಬಡಿದುಕೊಳ್ಳುವುದು. ರಾಜನು ಕುಸಿದು ನೆಲದ ಮೇಲೆಯೇ ಕುಳಿತುಬಿಡುವನು. ಆ ಯಜ್ಞಕುಂಡದಲ್ಲಿ ದಾಕ್ಷಾಯಿಣಿಯು ಬೀಳುವ ಭಂಗಿಯನ್ನು ನೋಡಿದಾಗಲಂತೂ ರಾಜನು ಜ್ಞಾನಶೂನ್ಯನಾಗುವನು. ಮಲ್ಲಿಗೆಯು ಗಿರಿಜೆಯ ಭಾವಭಂಗಿಯನ್ನು ನಟಿಸುತ್ತಾ 'ಪರಶಿವನೊಬ್ಬನೇ ಜಗದೊಡೆಯ!' ಎಂದು ಹಾಡಿದಾಗ ರಾಜನು ಕಣ್ತೆರೆದು ನೋಡುವನು. ಮಲ್ಲಿಗೆಯು ಪುನಃ ನವಜನ್ಮವನ್ನು ತಾಳಿಬಂದಂತೆ

ಭಾಸವಾಗುವುದು. ರಾಜನು ಆನಂದದಿಂದ ಎದ್ದು ಹೋಗಿ ಮಲ್ಲಿಗೆ ಯನ್ನು ಎತ್ತಿಕೊಂಡು ಪರ್ಯಂಕದ ಮೇಲೆ ಕುಳಿತು ಮಲ್ಲಿಗೆಯನ್ನು ಅಂಕದಲ್ಲಿ ಕೂಡಿಸಿಕೊಂಡು ಚುಂಬಿಸುವನು. "ಮಲ್ಲಿಗೆ! ನೀನು ನಿಜವಾಗಿಯೂ ಗಿರಿಜೆಯೇ!" ಎಂದು ಹೇಳುವನು. ಆ ದಿನವೆಲ್ಲಾ ರಾಜನ ಮನಃಪಟಲದಲ್ಲಿ ಆ ದಾಕ್ಷಾಯಿಣಿಯ ನಾಟ್ಯವೇ ಜಗಜಗಿಸುತ್ತಿರುವುದು.

ಮಾರನೆಯ ದಿನ ಮಂತ್ರಿ ದೇವರಾಜನು ಬಂದು ಮಹಾರಾಜನ ಭೇಟಿ ಮಾಡಿದನು. ರಾಜ್ಯಭಾರದ ಎಷ್ಟೋ ಸಮಾಚಾರಗಳನ್ನು ರಾಜನಲ್ಲಿ ವಿವರಿಸಿದನು. ದೇವರಾಜನು, "ಮಹಾರಾಜನೇ! ಚನ್ನಪಟ್ಟಣದ ಜಗದೇಕರಾಯನು ನಮ್ಮ ರಾಜದಲ್ಲಿ ಪಿತೂರಿಯನ್ನೆಬ್ಬಿಸಲು ಸನ್ನಾಹ ಮಾಡಿದ್ದಾನೆ. ಚೆನ್ನಪಟ್ಟಣದ ಗುಪ್ತಚಾರರನ್ನು ನಮ್ಮ ರಾಜಭಟರು ಹಿಡಿದಿದ್ದಾರೆ. ಅವರಲ್ಲಿ ಕೆಲವು ಗುಪ್ತ ಪತ್ರಗಳು ಸಿಕ್ಕಿವೆ" ಎಂದು ಹೇಳಿದನು.

"ಆ ಪತ್ರಗಳಲ್ಲೇನಿದೆ?"

"ಮಹಾರಾಜನೇ! ಆ ಪತ್ರಗಳಲ್ಲಿ ರಾಜರ ಕೊಲೆ ಮಾಡುವ ಮಹಾ ತಂತ್ರಗಳು ಅಡಗಿವೆ. ಮಂತ್ರಿವಧೆಗೆ ಪುರಸ್ಕಾರಗಳು ಕೊಡಲ್ಪಟ್ಟಿರುವುದೂ ಧ್ವನಿತವಾಗುತ್ತದೆ" ಎಂದನು

ರಾಜನು ಸ್ವಲ್ಪ ಹೊತ್ತು ಯೋಚಿಸಿ "ಮಂತ್ರಿಗಳೇ! ಜಗದೇಕರಾಯನೇನೋ ಬಹಳ ದಿನಗಳಿಂದ ನಮ್ಮ ಮೇಲೆ ಇಂತಹ ಕುತಂತ್ರಗಳನ್ನು ಎಷ್ಟೋಬಾರಿ ಮಾಡಿದ್ದಾನೆ. ಯಾರ ಮೇಲೆ ಆರೋಪವು ಹೊರುತ್ತದೆ ?"

"ಜಂಗಮವಾಡಿಯವರ ಮೇಲೆ ಪ್ರತ್ಯಕ್ಷ ಆರೋಪವು ಹೊರುತ್ತದೆ."

"ಮಂತ್ರಿಗಳೇ! ನೀವೇನು ಮಾಡಬೇಕನ್ನುತ್ತೀರಿ?"

"ನಾನು ಅದೆಲ್ಲವನ್ನೂ ಮಂತ್ರಾಲೋಚನೆಯಿಂದ ಸಿದ್ಧಾಂತ

ಮಾಡಿದ್ದೇನೆ. ತಿರುಮಲಾರ್ಯರು, ರಾಮರಾಯರು, ಚಾಮುಂಡಯ್ಯನವರು ಎಲ್ಲರೂ ಒಂದೇ ಅಭಿಪ್ರಾಯವನ್ನು ಕೊಡುತ್ತಾರೆ."

"ಅವರ ಅಭಿಪ್ರಾಯವೇನು?"

"ಜಂಗಮವಾಡಿಯವರನ್ನೆಲ್ಲಾ ಹಿಡಿದು ಬಂಧಿಸಬೇಕು. ಮಂತ್ರಿವಧೆಗೆ ಪ್ರತ್ಯಕ್ಷ ಕಾರಣಭೂತರಾದವರನ್ನೂ ಶೂಲಕ್ಕೇರಿಸಬೇಕು. ಜಗದೇಕರಾಯನ ಪಿತೂರಿಗೆ ಸಂಬಂಧಿಸಿದವರನ್ನೆಲ್ಲಾ ಕಬ್ಬಿಣದ ಪಂಜರಗಳಲ್ಲಿ ಕೂಡಿ ಬಂಧನದಲ್ಲಿಡಬೇಕು."

"ವೃದ್ಧಮಂತ್ರಿಗಳನ್ನು ಕೇಳಿದ್ದೀರಾ?"

"ಪ್ರಭುಗಳೇ! ಅವರೂ ಅದೇ ಸಿದ್ಧಾಂತಕ್ಕೆ ಬಂದಿದ್ದಾರೆ. ಮಂತ್ರಿವಧೆಯಾದಾಗಲೇ ಅವರನ್ನೆಲ್ಲಾ ಶಿಕ್ಷಿಸಿದ್ದರೆ ಚೆನ್ನಾಗಿತ್ತೆಂದು ವೃದ್ಧಮಂತ್ರಿಗಳು ಹೇಳುತ್ತಾರೆ ಅಪರಾಧಿಗಳಿಗೆ ಶಿಕ್ಷೆಯಿಲ್ಲದೆ ಇದ್ದರೆ ರಾಜತ್ವವೇ ಉಳಿಯುವುದಿಲ್ಲವೆಂದು ಮಂತ್ರಿಗಳು ಹೇಳುತ್ತಾರೆ."

"ಒಳ್ಳೆಯದು! ಈ ಗೊಂದಲದಿಂದ ರಾಜ್ಯಕ್ಷೋಭೆಯಾಗುವುದಿಲ್ಲವೆ?"

"ಇಲ್ಲ ! ಇಂಥಾ ಶಿಕ್ಷೆರಕ್ಷೆಗಳಿಂದ ರಾಜ್ಯಕ್ಷೋಭೆಯಾಗುವುದಿಲ್ಲ. ಪರರಾಜರ ಪ್ರಚೋದನೆ ಇರುವಾಗಲಂತೂ ಇದು ಮುಖ್ಯ ಕರ್ತವ್ಯ."

"ಸರಿ ! ನಿಮ್ಮಗಳ ಇಷ್ಟದಂತೆ ಮಾಡಬಹುದು."

"ಪ್ರಭುಗಳೇ ನಮ್ಮಗಳ ಇಷ್ಟವು ಮಾತ್ರವಲ್ಲ. ಇದು ನಮ್ಮ ಕರ್ತವ್ಯವಾಗಿಯೂ ಇದೆ. ಅದಕ್ಕೆ ರಾಜಾಜ್ಞೆಯಾಗಬೇಕು."

"ಓಹೋ ! ನೀವೆಲ್ಲರೂ ಒಪ್ಪಿದ ಮೇಲೆ ನನ್ನ ಸಂಪೂರ್ಣ ಆಜ್ಞೆಯು ಇದ್ದೇ ಇದೆ. ನಿಮ್ಮ ಕಾರ್ಯಕ್ರಮವೇನು?"

"ನಾನು ಈ ಜಂಗಮವಾಡಿಯ ಮುಖಂಡರನ್ನೆಲ್ಲಾ ಬಂಧಿಸುತ್ತೇನೆ. ಜಂಗಮವಾಡಿಗೆ ದೂರದಲ್ಲಿದ್ದು ಈ ಪಿತೂರಿಗೆ ಸಂಬಂಧಪಟ್ಟವರನ್ನೆಲ್ಲಾ ಬಂಧಿಸುತ್ತೇನೆ. ಅನಂತರ ಯಾರುಯಾರು ಮಂತ್ರಿವಧೆಗೆ ಪ್ರತ್ಯಕ್ಷವಾಗಿ ಸಂಬಂಧಪಟ್ಟವರೋ ಅವರನ್ನು ನ್ಯಾಯಮಂದಿರದಲ್ಲಿ

ವಿಚಾರಣೆ ನಡೆಸಿ, ಶೂಲಕ್ಕೇರಿಸುತ್ತೇನೆ. ಉಳಿದ ಪಿತೂರಿಕಾರರನ್ನೆಲ್ಲಾ ಕಾರಾಗೃಹವಾಸದಲ್ಲಿಡುತ್ತೇನೆ."

"ಇಷ್ಟೇ ನಿಮ್ಮ ಕಾರ್ಯಕ್ರಮವೋ ?"

"ಮಹಾರಾಜನೇ, ಇಷ್ಟೇ ಆಗಿದ್ದರೆ ನಾವೇ ಜಾರಿಮಾಡುತ್ತಿದ್ದೆವು. ಚನ್ನಪಟ್ಟಣದ ನಾಯಕನ ಮೇಲೆ ಸೈನ್ಯವನ್ನು ಕಳುಹಿಸಬೇಕೆಂದು ಸಿದ್ಧಾಂತಮಾಡಿದ್ದೇವೆ."

"ಯಾರು ಯುದ್ಧಕ್ಕೆ ಹೊರಡುವವರು?"

"ರಾಮರಾಯರು ತಾವೇ ಯುದ್ಧಮಾಡುವುದಾಗಿ ಹೊರಟೇಬಿಟ್ಟಿದ್ದಾರೆ."

"ಅದು ಸರಿಯಾಗಿದೆ! ನೀವೆಲ್ಲರೂ ಸರಿಯಾಗಿಯೇ ಆಲೋಚನೆ ಮಾಡಿದ್ದೀರಿ."

"ಮಹಾರಾಜನೇ, ಈ ವಿಷಯದಲ್ಲಿ ನನ್ನದೊಂದು ಬಿನ್ನಹವಿದೆ! ಈ ಯುದ್ಧಕ್ಕೆ ಸೇನಾಧಿಪತಿಯಾಗಿ ಹೊರಡಲು ನನಗೆ ಅಪ್ಪಣೆ ಕೊಡಬೇಕೆಂದು ಬೇಡುತ್ತೇನೆ."

"ದೇವರಾಜರೆ, ನೀವು ಕ್ಷತ್ರಿಯ ಕುಲೋತ್ಪನ್ನರು. ಯುದ್ಧಕ್ಕೆ ಹೊರಡುತ್ತೇನೆಂದು ಕೇಳಿದರೆ ನಾನು ಬೇಡವೆಂದು ನಿಷೇಧಿಸುವುದೆಂತು? ನೀವೂ ರಾಮರಾಯರೂ ಯುದ್ಧಕ್ಕೆ ಹೊರಡಬಹುದು. ಅವಶ್ಯವಿದ್ದರೆ ನಾನೂ ನಿಮ್ಮ ಜೊತೆಯಲ್ಲಿ ಯುದ್ಧಕ್ಕೆ ಸಿದ್ಧನಾಗಿ ಬರುತ್ತೇನೆ."

"ಮಹಾರಾಜನೇ, ನಾವು ನಿಮ್ಮ ಪರಾಕ್ರಮವನ್ನು ಅರಿಯದವರೇ? ಜಗದೇಕರಾಯನು ನಿಮಗೆ ಸರಿಸಮನಾದ ರಾಜನಲ್ಲ. ಮತ್ತು ತಮಗೆ ಸಮಬಲ ಪರಾಕ್ರಮಶಾಲಿಯೂ ಅಲ್ಲ. ನಾವೇ ಈ ಯುದ್ಧವನ್ನು ಮುಗಿಸಿ ಜಗದೇಕರಾಯನನ್ನು ಹಿಡಿದು ತಂದು ಒಪ್ಪಿಸುತ್ತೇವೆ" ಎಂದು ಹೇಳಿದನು.

ಮಂತ್ರಿಯ ಪ್ರಾರ್ಥನೆಯಂತೆ ರಾಜನು ಮರುದಿವಸವೇ ರಾಜಧಾನಿಗೆ ಪ್ರಯಾಣ ಮಾಡುವುದನ್ನು ನಿಶ್ಚಯಿಸಿದನು.

ಮೂರನೆಯ ದಿನ ರಾತ್ರಿ ಘೋರವಾದ ರಾತ್ರಿ ! ರಾಜಭಟರು ಸರ್ವ ಸನ್ನದ್ಧರಾಗಿದ್ದರು. ಮೈಸೂರು ನಗರದಲ್ಲಿ ಸ್ವಲ್ಪ ಗಲಿಬಲಿಯಿದ್ದಿತು. ಪುರಜನರಿಗೆ ಸರಿಯಾದ ಕಾರಣವು ತಿಳಿದಿರಲಿಲ್ಲ. ಮಧ್ಯರಾತ್ರಿಯ ಕಾಲದಲ್ಲಿ ರಾಜಭಟರು ಜಂಗಮವಾಡಿಯನ್ನು ಸುತ್ತುಗಟ್ಟಿ ಒಳಗಿರುವ ಮುಖಂಡರನ್ನೆಲ್ಲಾ ಬಂಧಿಸಿದರು. ಉಳಿದ ಸಾಮಾನ್ಯ ಜನರನ್ನು ರಾಜಾಜ್ಞೆಯಾಗುವವರೆಗೆ ಜಂಗಮವಾಡಿಯನ್ನು ಬಿಟ್ಟು ಹೊರಗೆ ಹೋಗಕೂಡದೆಂದು ಕಟ್ಟಪ್ಪಣೆ ಮಾಡಿದರು. ಆ ಮುಖಂಡರೆಲ್ಲರನ್ನೂ ಆ ರಾತ್ರಿಯೇ ಶ್ರೀರಂಗಪಟ್ಟಣಕ್ಕೆ ಸಾಗಿಸಿದರು. ಪ್ರಾತಃಕಾಲವಾಗುವುದರೊಳಗಾಗಿ ನಗರದಲ್ಲೆಲ್ಲಾ ಈ ವಾರ್ತೆಯು ಹರಡಿತು. ನಗರರಕ್ಷಕರು ಬಹಳ ಜಾಗರೂಕತೆಯಿಂದ ಕಾವಲು ಕಾಯುತ್ತಿದ್ದರು. ಶ್ರೀರಂಗಪಟ್ಟಣದಲ್ಲಿಯೂ ಬ್ರಹ್ಮಾಂಡವಾದ ಕಾವಲು ಏರ್ಪಾಡಾಗಿದ್ದಿತು.

ದೇಶದಲ್ಲೆಲ್ಲಾ ಜಂಗಮವಾಡಿಯ ಮುಖಂಡರುಗಳ ಬಂಧನೆ ವಾರ್ತೆಯು ಕಾಡುಕಿಚ್ಚಿನಂತೆ ಹಬ್ಬಿತು. ಸಂತೋಷಪಟ್ಟವರು ಒಳಗೊಳಗೇ ಸಂತಸಗೊಂಡರು. ಖಿನ್ನರಾದವರು ಒಳಗೊಳಗೇ ದುಃಖಪಟ್ಟುಕೊಂಡರು. 'ಶಿವನು ಕಾಪಾಡುತ್ತಾನೆ. ಸತ್ಯವಿದ್ದರೆ ಧರ್ಮವಿದ್ದರೆ ಜಯವಾಗುತ್ತದೆ' ಎಂದು ಹೇಳಿಕೊಂಡರು.

ರಾಜಧಾನಿಯಲ್ಲಿ ಜಂಗಮವಾಡಿಯವರನ್ನೆಲ್ಲಾ ಗಲ್ಲಿಗೇರಿಸುತ್ತಾರೆಂಬ ವರ್ತಮಾನವು ಹರಡಿತು. ಈ ಸಮಾಚಾರವು ಮಲ್ಲಿಗೆಗೂ ತಿಳಿಯಿತು. ಆದಿನ ರಾತ್ರಿ ಕಾತ್ಯಾಯಿನಿಯು ಬಂದು ಮಲ್ಲಿಗೆಯೊಡನೆ ಭಯದಿಂದ ಈ ಸಮಾಚಾರವನ್ನು ತಿಳಿಸಿದಳು. ಅವರಿಬ್ಬರೂ ಬ್ರಹ್ಮಾಂಡ ಆಲೋಚನೆ ಮಾಡಿದರು. ಕಾತ್ಯಾಯಿನಿಯು ಮಲ್ಲಿಗೆಯನ್ನು ಕುರಿತು, "ತಂಗಿ ! ಈ ಕಷ್ಟವನ್ನು ನೀನು ಪರಿಹರಿಸಬೇಕು. ಜಂಗಮವಾಡಿಯವರು ದುಷ್ಟರಾಗಲೀ, ಸಾಧುಗಳಾಗಲೀ ಅವರೆಲ್ಲರೂ ಶಿವಭಕ್ತರು. ಶಿವಭಕ್ತರೆಲ್ಲರೂ ಶಿವನ ಸಂತಾನರು. ಪರಶಿವನ

ಮಕ್ಕಳಲ್ಲಿ ಒಳ್ಳೆಯವರು, ಕೆಟ್ಟವರು, ದುಷ್ಟರು ಎಂಬ ಭೇದವಿರಬಾರದು. ನಾನಂತೂ ಶಿವದೀಕ್ಷೆಯನ್ನು ಪಡೆದವಳು. ಈ ಜಂಗಮವಾಡಿಯವರು ನನ್ನನ್ನು ಓದಿಸಿದ್ದರೂ ಜಂಗಮದೇವನು ಜಂಗಮವಾಡಿಯ ಅಧಿಕಾರವನ್ನು ನನಗೆ ವಹಿಸಿದ್ದನು. ನಾನು ಈಗ ಅವರೆಲ್ಲರನ್ನೂ ಉದ್ಧಾರಮಾಡಬೇಕು. ಇಲ್ಲದಿದ್ದರೆ ಪ್ರಾಣತ್ಯಾಗ ಮಾಡಬೇಕು. ನೀನೂ ಜಂಗಮದೇವನ ಭಕ್ತಳು. ಈಗ ನಿನ್ನಿಂದ ಉದ್ಧಾರವಾಗಬೇಕು" ಎಂದು ಹೇಳಿದಳು.

ಇವರಿಬ್ಬರೂ ಬಹಳ ಹೊತ್ತು ಆಲೋಚನೆ ಮಾಡಿದರು. ಯಾವ ಮಾರ್ಗದಿಂದ ಅವರನ್ನು ಉದ್ಧಾರಮಾಡಬೇಕೆಂಬುದು ಅವರಿಗೆ ಗೋಚರವಾಗಲಿಲ್ಲ ಮಲ್ಲಿಗೆಯು "ಚಾಮುಂಡಿ ! ನನಗೇನೂ ತೋರುವುದಿಲ್ಲ. ನೀನು ಹೇಳುವುದೆಲ್ಲಾ ನನಗೆ ದೇವತೆಯು ಹೇಳುತ್ತಿರುವಂತೆ ಕಾಣುತ್ತದೆ. ನಾನೇನು ಮಾಡಬಲ್ಲೆ ? ನಾನು ನಿನ್ನೊಡನೆ ಪ್ರಾಣಬಿಡಬಹುದು. ರಾಜನಲ್ಲಿ ಹೋಗಿ ಇವರುಗಳ ಪ್ರಾಣಭಿಕ್ಷೆಯನ್ನು ಬೇಡಲು ನನಗೆ ಧೈರ್ಯವಿಲ್ಲ. ನಿನ್ನ ಪ್ರಾರ್ಥನೆಯನ್ನು ನಿರಾಕರಿಸಲು ನನಗೆ ಮನಸ್ಸಿಲ್ಲ. ನಾವಿಬ್ಬರೂ ಕಾವೇರಿಯಲ್ಲಿ ಬಿದ್ದು ಪ್ರಾಣಬಿಡುವುದೆಂದರೆ ನಾನು ಆನಂದದಿಂದ ಸಿದ್ಧಳಾಗಿದ್ದೇನೆ" ಎಂದು ಹೇಳಿದಳು.

ಕಾತ್ಯಾಯಿನಿಯು "ತಂಗಿ ! ಪ್ರಾಣಬಿಡುವುದು ಸುಲಭ. ನಾವಿಬ್ಬರೂ ಆತ್ಮಹತ್ಯ ಮಾಡಿಕೊಂಡರೆ ಜಂಗಮವಾಡಿಯವರ ಪ್ರಾಣವನ್ನುಳಿಸಿದಂತಾಗುವುದಿಲ್ಲ. ನಾವು ಸರ್ವಪ್ರಯತ್ನದಿಂದಲೂ ಜಂಗಮವಾಡಿಯವರ ಪ್ರಾಣರಕ್ಷಣೆಗೆ ಸಾಹಸ ಮಾಡಬೇಕು. ಜಯಶೀಲರಾಗದಿದ್ದರೆ ಕೊನೆಗೆ ಪ್ರಾಣಬಿಡಬೇಕು" ಎಂದು ಹೇಳಿದಳು.

ಅವರಿಬ್ಬರೂ ಬಹಳ ಹೊತ್ತು ಆಲೋಚನೆ ಮಾಡಿ ಭಂಧನದಲ್ಲಿರುವವರನ್ನೆಲ್ಲಾ ಬಿಡಿಸಿಬಿಡಬೇಕೆಂದು ಗಟ್ಟಿಮನಸ್ಸು ಮಾಡಿದರು. ಕಾತ್ಯಾಯಿನಿಯು ಆ ರಾತ್ರಿಯೆಲ್ಲಾ ಮಲ್ಲಿಗೆಯ ಅಂತಃಪುರದಲ್ಲಿಯೇ

ಕಳೆದಳು.

ಮೂರನೆಯ ದಿನ ಬೆಳಗಾಗುತ್ತಲೇ ಮಲ್ಲಿಗೆಯು ಉಪಾಯವನ್ನು ಹುಡುಕಲಾರಂಭಿಸಿದಳು. ಈ ಕಾರ್ಯಕ್ಕೆ ಯಾರು ಸಹಾಯಕರಾಗುತ್ತಾರೆಂಬುದನ್ನು ಆಲೋಚಿಸತೊಡಗಿದಳು. ಮಲ್ಲಿಗೆಯ ಅಂತಃಪುರದಲ್ಲಿ ಮುದ್ದಮ್ಮನೆಂಬ ಪರಿಚಾರಿಕೆಯೊಬ್ಬಳಿದ್ದಳು. ಅವಳಿಗೆ ವೃದ್ಧಾಪ್ಯವು ಪ್ರಾಪ್ತವಾಗಿದ್ದಿತು. ಎಲ್ಲರನ್ನೂ ಒಳ್ಳೆಯ ಮಾತನಾಡಿ ಪ್ರೀತಿಯನ್ನು ಗಳಿಸಿದ್ದಳು. ಮಲ್ಲಿಗೆಯು ಅಂತಃಪುರಕ್ಕೆ ಬಂದಾಗಿನಿಂದ ಆ ಮುದ್ದಮ್ಮನು ವಿಶೇಷವಾಗಿ ಮಲ್ಲಿಗೆಯ ಅಭಿಮಾನಪಾತ್ರಳಾಗಿದ್ದಳು. ಅವಳು ಜಾತಿಯಲ್ಲಿ ಶಿವಭಕ್ತಳೆಂದು ಮಲ್ಲಿಗೆಗೆ ತಿಳಿದಿದ್ದಿತು. ಮಲ್ಲಿಗೆಯು ಆ ಮುದ್ದಮ್ಮನನ್ನು ಕರೆದು ತನ್ನ ಅಂತರಂಗದ ಕೋಣೆಯಲ್ಲಿ ಮಾತನಾಡಿಸಿದಳು. ಅವಳೊಡನೆ ಕೊಂಚಕೊಂಚವಾಗಿ ಜಂಗಮವಾಡಿಯವರ ಬಂಧನದ ಮಾತನ್ನೆತ್ತಿದಳು.

ಮುದ್ದಮ್ಮನು "ತಾಯೀ ನಾವೇನು ಮಾಡಲಾದೀತು? ಊರಿನಲ್ಲಿ ಯಾವನೋ ತಪ್ಪು ಮಾಡಿದರೆ ಊರಿನವರಿಗೆಲ್ಲರಿಗೂ ಶಿಕ್ಷೆಯಾಗಬೇಕೇ? ಮಹಾರಾಜರ ಇಷ್ಟ. ನೀವು ಮಹಾರಾಜರವರ ಪ್ರೇಮದರಸಿ. ರಾಜರಲ್ಲಿ ಹೇಳಿ ಈ ಘೋರವನ್ನು ನೀವೇ ತಪ್ಪಿಸಬೇಕು" ಎಂದು ಹೇಳಿದಳು

ಮಲ್ಲಿಗೆಯು "ಮುದ್ದಮ್ಮಾ ನಾನು ಹೇಳಿದರೂ ಫಲವಾಗುವುದಿಲ್ಲ ನನಗೆ ದಿಕ್ಕೇ ತೋಚದಂತಾಗಿದೆ ನನಗೆ ಶಕ್ತಿಯಿದ್ದಿದ್ದರೆ ಪ್ರಾಣವನ್ನಾದರೂ ಒಪ್ಪಿಸಿ ಇವರನ್ನೆಲ್ಲಾ ಉಳಿಸುತ್ತಿದ್ದೆ. ಅವರವರ ತಪ್ಪಿಗೆ ದೇವರು ಅವರವರಿಗೆ ಶಿಕ್ಷೆಮಾಡುತ್ತಾನೆ. ಕಾವಿಯನ್ನು ಹಾಕಿದಮೇಲೆ ಎಲ್ಲರೂ ಜಂಗಮರೇ. ಅದರಲ್ಲಿ ಭೇದವೆಲ್ಲಿ ಬಂತು? ವ್ಯತ್ಯಾಸವೆಲ್ಲಿ ಬಂತು. ನಾನೇನೂ ಮಾಡದವಳಾಗಿದ್ದೇನೆ. ಕಡೆಯ ಮಾತು. ಪ್ರಾಣವನ್ನು ಕಳೆದುಕೊಳ್ಳಬೇಕೆಂದಿದ್ದೇನೆ ಅಷ್ಟೆ!" ಎಂದು ಹೇಳಿದಳು.

" ತಾಯೆ ನೀನು ಲಕ್ಷ್ಮಿಯಂತಿದ್ದೀಯೆ. ನಿನ್ನ ಪ್ರಾಣವು ಅಮೂಲ್ಯವಾದದ್ದು ನೀನು ಪ್ರಾಣವನ್ನು ಕಳೆದುಕೊಂಡರೆ ಏನಾಗುತ್ತದೆ? ಆ ಜಂಗಮರ ಜೊತೆಯಲ್ಲಿ ನೀನೂ ಕೈಲಾಸಕ್ಕೆ ಹೋಗುವೆ ಅಷ್ಟೆ !"

ಮಲ್ಲಿಗೆಯು " ಮುದ್ದಮ್ಮಾ, ನೀನು ನನಗೆ ಸಹಾಯಕಳಾದರೆ ಏನಾದರೂ ಮಾಡಬಲ್ಲೆನೆಂದು ತೋರುತ್ತದೆ."

"ದೇವೀ, ನಾನು ಸಹಾಯ ಮಾಡುವುದೇ? ನನ್ನ ಸಹಾಯದಿಂದ ಈ ಕಾರ್ಯವು ಸಾಧನೆಯಾಗುವುದಾದರೆ ನನ್ನ ಪ್ರಾಣವನ್ನೇ ಕೊಡಬಲ್ಲೆ. ನನ್ನ ಚರ್ಮವನ್ನು ಸುಲಿದು ನಿನ್ನ ಪಾದರಕ್ಷೆಯಾಗಿ ಮಾಡಿಕೊಡಬಲ್ಲೆ" ಎಂದು ಹೇಳಿದಳು. ಮುದ್ದಮ್ಮನ ಮಗನು ಅರಮನೆಯಲ್ಲಿ ಪಾಕಶಾಲೆಯಲ್ಲಿ ಬಹುದಿವಸಗಳಿಂದಲೂ ಕೆಲಸಕ್ಕೆ ಸೇರಿಕೊಂಡಿದ್ದನು. ಅವನೊಡನೆ ಆಲೋಚನೆ ಮಾಡಿ ಏನಾದರೊಂದು ಉಪಾಯವನ್ನು ಹುಡುಕುವುದಾಗಿ ಹೇಳಿ ಮುದ್ದಮ್ಮನು ಹೊರಟುಹೋದಳು.

ಜಂಗಮವಾಡಿಯ ಮುಖಂಡರನ್ನೆಲ್ಲಾ ಅತಿಥಿಶಾಲೆಯಲ್ಲಿ ಬಂಧಿಸಿಟ್ಟಿದ್ದರು ಅರಮನೆಯ ಬಿಡದಿಯಿಂದಲೇ ಅವರಿಗೆ ಅನ್ನವನ್ನು ಕೊಡುವ ಏರ್ಪಾಡಾಗಿತ್ತು. ಒಳಬಾಗಿಲಿನಿಂದಲೇ ಅಡಿಗೆಯವರು ಅನ್ನವನ್ನೂ ನೀರನ್ನೂ ತೆಗೆದುಕೊಂಡು ಹೋಗಿ ಜಂಗಮರಿಗೆ ನೀಡುತ್ತಿದ್ದರು. ಹೊರಗಡೆ ಬಲವಾದ ಕಾವಲಿತ್ತು. ನಂಬಿಕಸ್ಥರಾದ, ಇಬ್ಬರು ಅಡಿಗೆಯವರು, ಕಡಾಯಿಗಳಲ್ಲಿ ಆಹಾರಪದಾರ್ಥಗಳನ್ನು ಕೊಂಡುಹೋಗಿ ಕೊಟ್ಟುಬರುತ್ತಿದ್ದರು. ಆ ಭೋಜನವನ್ನು ಕೊಡುವಾಗ ಮಾತ್ರ ಹಿಂದುಗಡೆ ಬಾಗಿಲು ತೆಗೆಯುತ್ತಿತ್ತು. ಅದು ಅರಮನೆಯಿಂದ ಹೋಗುವ ಒಳಬಾಗಿಲಾಗಿತ್ತು. ಅಲ್ಲಿ ಅರಮನೆಯ ಕಾವಲುಗಾರರು ಮಾತ್ರ ಇರುತ್ತಿದ್ದರು. ಈ ಅಡಿಗೆಯನ್ನು ತೆಗೆದುಕೊಂಡು ಹೋಗಿ ಕೊಡುವ ಕೆಲಸಕ್ಕೆ ಮಾದಯ್ಯನು ನೇಮಿಸಲ್ಪಟ್ಟಿದ್ದನು.

ಮುದ್ದಮ್ಮನು ಅಂತಃಪುರದಿಂದ ಪಾಕಶಾಲೆಗೆ ಹೋಗಿ ತನ್ನ

ಮಗನನ್ನು ಕರೆದುಕೊಂಡು ಬಂದಳು. ಆ ಮಾದಯ್ಯನೇ ಮುದುಕಿಯ ಮಗ. ಮುದ್ದಮ್ಮನು ತನ್ನ ಮಗನನ್ನು ರಾಣಿಯ ಸಮ್ಮುಖದಲ್ಲಿ ನಿಲ್ಲಿಸಿ "ಇವನು ನನ್ನ ಮಗ ಮಾದಯ್ಯ. ತಮ್ಮ ಸೇವೆಗೆ ಸಿದ್ಧನಾಗಿದ್ದಾನೆ. ಇವನಿಗೆ ತಾವು ಅಪ್ಪಣೆ ಮಾಡಬಹುದು. ಬಹಳ ಧೈರ್ಯಶಾಲಿ" ಎಂದು ಹೇಳಿದಳು.

ರಾಣಿಯವರು "ಸಂತೋಷ!" ಎಂದು ಹೇಳಿದರು. ಭಯದಿಂದ ಎದೆಯು 'ಡವಡವ'ನೆ ಬಡಿದುಕೊಳ್ಳುತ್ತಿದ್ದಿತು. ರಾಣಿಯ ಬಾಯಿಯಲ್ಲಿ ಮಾತುಗಳು ಹೊರಡಲಾರದಾದುವು.

ಮುದ್ದಮ್ಮನು "ಪಾಪ ಈ ಜಂಗಮರಿಗೆಲ್ಲಾ ಘೋರವಾದ ಶಿಕ್ಷೆಯಾಗುತ್ತದೆ. ಇದನ್ನು ತಪ್ಪಿಸಬೇಕೆಂದು ರಾಣಿಯವರ ಅಭಿಲಾಷೆ" ಎಂದು ತಾನೇ ಮಗನಿಗೆ ಹೇಳಿದಳು.

ಮಾದಯ್ಯನು ಕೈಮುಗಿದು "ಒಡತಿಯೇ, ನಾನು ಹೇಗೆ ತಪ್ಪಿಸಬಲ್ಲೆ? ನಾನೊಬ್ಬ ಅಡಿಗೆಯವನು" ಎಂದು ಮುಖವನ್ನು ಜೋಲುಹಾಕಿದನು.

ರಾಣಿಯು "ಅನ್ಯಾಯವಾಗಿ ಜಂಗಮರೆಲ್ಲರಿಗೂ ಸಾಯುವ ಹೊತ್ತು ಬಂದಿದೆ ಶಿವನು ಯಾವ ರೂಪದಿಂದ ಬಂದು ಅವರನ್ನು ಕಾಪಾಡುತ್ತಾನೆಯೋ ದೇವರೇ ಬಲ್ಲ" ಎಂದು ಹೇಳಿದಳು.

ಮಾದಯ್ಯನ ಮನಸ್ಸು ಕರಗಿತು. "ತಾಯೆ, ನಾನೇನೋ ಸಿದ್ಧ. ಪ್ರಾಣವನ್ನಾದರೂ ಒಪ್ಪಿಸಬಲ್ಲೆ. ಆದರೆ ಈ ಕಾರ್ಯವನ್ನು ಹೇಗೆ ಮಾಡಬಲ್ಲೆನೆಂಬುದು ನನಗೆ ತಿಳಿಯುವುದಿಲ್ಲ. ತಾವು ಹೇಗೆ ಆಜ್ಞೆ ಮಾಡಿದರೆ ಹಾಗೆ ಮಾಡುತ್ತೇನೆ" ಎಂದು ಹೇಳಿದನು.

ರಾಣಿಯು ತನ್ನ ಸಂದೂಕದಿಂದ ಒಂದು ರೇಷ್ಮೆಯ ಚೀಲವನ್ನು ತೆಗೆದು ಅವನ ಕೈಗೆ ಕೊಟ್ಟಳು. ಅದು ಭಾರವಾಗಿತ್ತು. ಅವನು ಅದನ್ನು ಕಿಸೆಯಲ್ಲಿಟ್ಟುಕೊಂಡು ರಾಣಿಯವರಿಗೆ ಕೈಮುಗಿದು ಹೊರಟುಹೋದನು.

ತಾಯಿಮಕ್ಕಳಿಬ್ಬರೂ ಅವಸರವಸರವಾಗಿ ಮನೆಗೆ ಹೋದರು. ಮನೆಯ ಹಜಾರದಲ್ಲಿ ಮಕ್ಕಳು ಗದ್ದಲ ಮಾಡುತ್ತಿದ್ದರು. ಅವರನ್ನೆಲ್ಲಾ ಹೊರಗೆ ಅಟ್ಟಿ ಬಾಗಿಲುಗಳನ್ನು ಹಾಕಿ ತಾಯಿಮಕ್ಕಳಿಬ್ಬರೂ ರಾಣಿಯಿತ್ತ ರೇಷ್ಮೆಯ ಚೀಲದ ಬಾಯಿಗೆ ಕಟ್ಟಿದ್ದ ದಾರವನ್ನು ಬಿಚ್ಚಿದರು. ಆ ಚೀಲವನ್ನು ಮಗನು ತಾಯಿಯ ಕೈಗೆ ಸುರಿದನು. ಹೊನ್ನು ! ಹೊನ್ನಿನ ವರಹಗಳು ! ಅದರಲ್ಲಿದ್ದವು. ಎಣಿಸಿನೋಡಿದರು. ನೂರು ವರಹಗಳು. ತಾಯಿಮಕ್ಕಳಿಬ್ಬರೂ ಸಂತೋಷದಿಂದ ಬಿರಿದುಹೋದರು.

"ಹೇಗಾದರೂ ಸಾಹಸಮಾಡಿ ರಾಣಿಯ ಆಜ್ಞೆಯನ್ನು ನೆರವೇರಿಸಬೇಕು" ಎಂದು ಹೇಳಿದಳು. "ರಾಣಿಯ ಇಷ್ಟಾರ್ಥವು ನೆರವೇರಿದರೆ ಇಂತಹ ಸಾವಿರ ಹೊನ್ನುಗಳನ್ನು ಕೊಡುತ್ತಾಳೆ" ಎಂದು ತಾಯಿಯು ಆಸೆಯನ್ನು ಹುಟ್ಟಿಸಿದಳು.

"ಅಮ್ಮಾ ಈ ಕಾರ್ಯಕ್ಕೆ ಕೈಹಾಕಿದರೆ ರಾಜರು ನನ್ನನ್ನು ಶೂಲಕ್ಕೆ ಹಾಕಿಸುತ್ತಾರೆ" ಎಂದು ಹೇಳಿದನು.

"ಅಯ್ಯೋ ಹುಚ್ಚ, ರಾಣಿಯು ಸಾಮಾನ್ಯಳಲ್ಲ. ವೇಶ್ಯೆಯಾಗಿ ಹುಟ್ಟಿ, ರಾಜನ ಮನಸ್ಸನ್ನೊಲಿಸಿಕೊಂಡು ಅಂತಃಪುರದ ರಾಣಿಯಾಗಿದ್ದಾಳೆ. ಅವಳ ಬಲವಿದ್ದರೆ ನೀನೊಬ್ಬ ದೊಡ್ಡ ಸರದಾರನೇ ಆಗುತ್ತೀ. ರಾಣಿಯು ಹಿಡಿದ ಕಾರ್ಯವನ್ನು ಬಿಡುವವಳಲ್ಲ. ನಿನ್ನನ್ನು ಅವಳೇ ಉದ್ಧಾರ ಮಾಡುತ್ತಾಳೆ" ಎಂದು ಧೈರ್ಯ ಕೊಟ್ಟಳು.

ಮಾದಯ್ಯನು ಉತ್ಸಾಹದಿಂದ ತಾಯಿಗೆ ವಚನಕೊಟ್ಟನು.

ಇಬ್ಬರೂ ಆ ಹಣದ ಚೀಲವನ್ನು ಕೋಣೆಯೊಳಗೆ ಪೆಟಾರಿಯಲ್ಲಿ ಮುಚ್ಚಿಟ್ಟು ಅರಮನೆಗೆ ಹೊರಟುಹೋದರು.

*

ಆದಿನ ಮಾದಯ್ಯನು ತನ್ನ ಜೊತೆಗಾರನೊಡನೆ ಜಂಗಮರಿಗೆ ಭೋಜನವನ್ನು ತೆಗೆದುಕೊಂಡುಹೋಗಿ ಕೊಟ್ಟುಬಂದನು. ಅವತ್ತು ಮಾದಯ್ಯನ ರೀತಿಯೇ ಬೇರೆಯಾಗಿದ್ದಿತು. ಜಂಗಮರಲ್ಲಿ ಬಹಳ ಭಕ್ತಿಯನ್ನು ತೋರಿದನು. ಮಾದಯ್ಯನು ಹೊರಟು ಬರುವಾಗ ಒಬ್ಬಿಬ್ಬರು ಜಂಗಮರ ಕಿವಿಯಲ್ಲಿ ಏನೇನೋ ಪಿಸುಮಾತುಗಳನ್ನು ಹೇಳಿ ಹೊರಟುಹೋದನು.

ರಾತ್ರಿ ಆ ಬಂಧಿತರಾದ ಜಂಗಮರಿಗೆ ಅನ್ನ ಕೊಡುವ ಹೊತ್ತಿಗೆ ಬಹಳ ವೇಳೆಯಾಗಿತ್ತು. ಮಾದಯ್ಯನು ತನ್ನ ಸ್ನೇಹಿತನಾದ ಬಸವಯ್ಯನೊಡನೆ ಜಂಗಮರ ಆಹಾರಕ್ಕೆ ಗೂಡೆಗಳಲ್ಲಿ ಹುಳಿಯನ್ನದ ಮೊಸರನ್ನದ ತೆರಳೆಗಳನ್ನಿಟ್ಟು ಹೊತ್ತುಕೊಂಡು ಬಂದನು. ನಾಲ್ಕು ಕಾವಲುಗಾರರಿದ್ದರು. ಅವರು ರಾತ್ರಿ ಹೊತ್ತಾಗಿದ್ದುದರಿಂದ ಭಂಗಿಯನ್ನು ಕುಡಿದಿದ್ದರು. ಕೊಂಚ ಕೊಂಚವಾಗಿ ಮತ್ತು ಹತ್ತುತ್ತಿತ್ತು. ಮಾದಯ್ಯನು ಬಂದು ಬಾಗಿಲು ತೆಗೆಯುವಂತೆ ಹೇಳಿದನು. ಕಾವಲುಗಾರರು ಬೀಗದ ಕೈಗಳ ಗೊಂಚಲುಗಳನ್ನು ತೆಗೆದುಕೊಂಡು ಹೋಗಿ ಯಾವಯಾವುದೋ ಬೀಗದಕೈಗಳನ್ನು ಹಾಕಿ ತಿರುಗಿಸಲಾರಂಭಿಸಿದರು. ಮಾದಯ್ಯನು ಕೋಪದಿಂದ ಅವರನ್ನು ಗದ್ದರಿಸಿ ಬೀಗದ ಕೈ ಗೊಂಚಲನ್ನು ಕೈಗೆ ತೆಗೆದುಕೊಂಡು ತಾನೇ ಬೀಗಗಳನ್ನು ತೆಗೆದು ಒಳಕ್ಕೆ ಹೋದನು. ಕಾವಲುಗಾರರು ಹಸಿದಿದ್ದುದರಿಂದ ಹುಳಿಯನ್ನವನ್ನು ಬೇಡಿದರು. ಮಾದಯ್ಯನು ಎರಡೆರಡು ತೆರಳೆಗಳನ್ನು ಎತ್ತಿ ಅವರ ಕೈಗೆ ಕೊಟ್ಟನು. ಮಾದಯ್ಯನೂ, ಬಸವಯ್ಯನೂ ಅನ್ನದ ಗೂಡೆಗಳನ್ನು ಒಳಗೆ ತೆಗೆದುಕೊಂಡು ಹೋದರು. ಬೀಗದ ಕೈಗೊಂಚಲು ಮಾದಯ್ಯನ ಸೊಂಟದಲ್ಲಿಯೇ ಇತ್ತು. ಕಾವಲುಗಾರರು ಭಂಗಿಯ

ಅಮಲಿನಲ್ಲಿ, ಹುಳಿಯನ್ನದ ರುಚಿಯಲ್ಲಿ, ಬೀಗ ಹಾಕುವುದನ್ನು ಮರೆತು ಬಿಟ್ಟರು. ಮಾದಯ್ಯನು ಒಳಗಿದ್ದವರಿಗೆಲ್ಲಾ ಭೋಜನವನ್ನು ಹಂಚಿದನು. ಹುಳಿಯನ್ನವನ್ನು ತಿಂದು ಖಾರವು ನಾಲಿಗೆಯಿಂದ ನೆತ್ತಿಗೆ ಹತ್ತಿ ಅವರೆಲ್ಲರೂ ನೀರು ನೀರು ಎಂದು ಕೂಗಲಾರಂಭಿಸಿದರು. ಮಾದಯ್ಯನು 'ನೀರು ಹೊರಗಿದೆ, ಗದ್ದಲಮಾಡದೇಹೋಗಿರಿ' ಎಂದನು. ಜಂಗಮರು ಒಬ್ಬೊಬ್ಬರಾಗಿ ಹೊರಗೆ ಹೊರಟರು. ಆ ಸಮಯಕ್ಕೆ ಸರಿಯಾಗಿ ರಾಣಿಯೂ ಕಾತ್ಯಾಯಿನಿಯೂ ಆ ಬಾಗಿಲಿನಲ್ಲಿ ಬಂದು ನಿಂತರು. ಬಂಧನದಲ್ಲಿದ್ದ ಜಂಗಮರನ್ನೆಲ್ಲಾ ಹೊರಗೆ ಹೋಗುವಂತೆ ಆಜ್ಞೆಮಾಡಿದರು. ಅವರೆಲ್ಲರೂ ರಾಣಿಗೆ ಕೈಮುಗಿದು ಹೊರಗೆ ಹೊರಟರು. ಹೊರಗಡೆ ಅಂತಃಪುರಕ್ಕೆ ಸೇರಿದ ದೊಡ್ಡ ಉದ್ಯಾನ ಆ ಉದ್ಯಾನದಲ್ಲಿ ದೊಡ್ಡ ದೊಡ್ಡ ನೆರಳಿನ ಮರಗಳೂ ಫಲಪುಷ್ಪವೃಕ್ಷಗಳೂ, ಲತಾಕುಂಜಗಳೂ, ಪುಷ್ಪವಾಟಿಗಳೂ, ಇದ್ದುವು. ಮಾದಯ್ಯನು ಆ ಜಂಗಮರಿಗೆ ದಾರಿ ತೋರಿಸುತ್ತಾ ಆ ಉದ್ಯಾನದಿಂದ ಹೊರಗೆ ದಾಟಿಸಿದನು. ಕೊನೆಯಲ್ಲಿ ಕಾವೇರಿಗೆ ಪ್ರಶಸ್ತವಾದ ಪಾವಟಿಗೆಗಳಿದ್ದುವು. ಮಾದಯ್ಯನು ಆ ಜಂಗಮರನ್ನು ಕುರಿತು 'ರಾಣಿಯ ದಯದಿಂದ ಪಾರಾದಿರಿ. ಶಿವನು ಕಾಪಾಡಿದನು. ನದಿಯಲ್ಲಿ ನೀರು ಕುಡಿದು, ನದಿಯನ್ನು ದಾಟಿ ಹೊರಟುಹೋಗಿರಿ ಎಲ್ಲಿಯಾದರೂ ಕಾಡುಗಳಲ್ಲಿಯೋ ಬೆಟ್ಟದ ಗುಹೆಗಳಲ್ಲಿಯೋ ತಲೆ ಮರೆಸಿಕೊಳ್ಳಿರಿ. ರಾಜಭಟರ ಕಣ್ಣಿಗೆ ಬಿದ್ದರೆ ನಿಮ್ಮ ತಲೆಗಳನ್ನು ಹಾರಿಸುತ್ತಾರೆ' ಎಂದು ಹೇಳಿ ಹಿಂತಿರುಗಿದನು. ಕಾವಲುಗಾರರು ಭಯದಿಂದ ನಡುಗುತ್ತಿದ್ದರು. ರಾಣಿಯು ಅವರುಗಳಿಗೆ ಧೈರ್ಯವನ್ನು ಹೇಳಿ ಆ ಬಾಗಿಲುಗಳನ್ನು ಭದ್ರಪಡಿಸುವಂತೆ ಹೇಳಿ ಅಂತಃಪುರಕ್ಕೆ ಹೊರಟುಹೋದಳು. ಮಾದಯ್ಯನು ತನ್ನ ಸ್ನೇಹಿತನಾದ ಬಸವಯ್ಯನೊಂದಿಗೆ ಮನೆಗೆ ಹೊರಟು ಹೋದನು

ಮಧ್ಯರಾತ್ರಿಯಾಯಿತು. ಮಧ್ಯರಾತ್ರಿಯ ತುತ್ತೂರಿಯು

ಊದಲ್ಪಟ್ಟಿತು. ಪಹರೆಯವರು, ಹನ್ನೆರಡು ಗಂಟೆಗಳನ್ನು ಹೊಡೆದರು. ಮುಂದುಗಡೆ ರಾಜಭಟರು ಸಶಸ್ತ್ರರಾಗಿ ಪಹರೆಗಳನ್ನು ಬದಲಾಯಿಸಿದರು. ಹಿಂದುಗಡೆ ಅರಮನೆಯ ಕಾವಲುಗಾರರು ಬೆಂಕಿಯನ್ನು ಕಾಸುತ್ತಾ ಚಿಲುಮೆಗಳಿಂದ ಭಂಗಿಯನ್ನು ಸೇವಿಸುತ್ತಾ ಏನೇನೋ ಕಥೆಗಳನ್ನು ಮಾತನಾಡಿಕೊಳ್ಳುತ್ತಾ ರಾತ್ರಿಯನ್ನು ಕಳೆಯುತ್ತಿದ್ದರು. ಮಧ್ಯರಾತ್ರಿಯಲ್ಲಿ ಫೌಜುದಾರನು ಆತ್ಯತೆಯಿಂದ ಮುಂದುಗಡೆಯ ಬಾಗಿಲುಗಳನ್ನು ತೆಗೆಸಿ ದೀವಟಿಗೆಗಳನ್ನು ಹಿಡಿಸಿಕೊಂಡು, ರಾಜಭಟರೊಂದಿಗೆ ಒಳಗೆ ಪ್ರವೇಶಮಾಡಿದನು. ಜಂಗಮರನ್ನು ಬಂಧಿಸಿದ್ದ ಕೋಣೆಯಲ್ಲವೂ ಬರಿದಾಗಿತ್ತು. ಅಲ್ಲಲ್ಲಿ ಕಾವಿಯ ಬಟ್ಟೆಗಳೂ, ಮಣ್ಣಿನ ಪಾತ್ರೆಗಳೂ ಬಿದ್ದಿದ್ದವು. ಫೌಜುದಾರನು ಗಾಬರಿಗೊಂಡನು. ಜಂಗಮವಾಡಿಯವರೆಲ್ಲಾ ಮಾಯವಾಗಿ ಹೋಗಿದ್ದರು. ಉಳಿದ ರಾತ್ರಿಯಲ್ಲಿ ಎಲ್ಲ ತೋಪುಗಳನ್ನೂ, ನದೀತೀರದ ಮಂಟಪಗಳನ್ನೂ ಹುಡುಕಿಸಿದರು. ಎಲ್ಲಿಯೂ ಜಂಗಮರ ಸುಳಿವೇ ಇಲ್ಲ.

ಮರುದಿನ ಪ್ರಾತಃಕಾಲದಲ್ಲಿ ಫೌಜುದಾರ ನರಸಿಂಗನು ಮಂತ್ರಿಗಳ ಭೇಟಿಮಾಡಿ ನಡುಗುತ್ತಾ, ಜಂಗಮರೆಲ್ಲರೂ ಮಾಯವಾಗಿದ್ದಾರೆಂದು ಅರಿಕೆ ಮಾಡಿದನು ಮಂತ್ರಿಗೆ ಆಶ್ಚರ್ಯವಾಯಿತು. ತನ್ನ ಪ್ರಯತ್ನವೆಲ್ಲಾ ನಿಷ್ಫಲವಾಯಿತೆಂದು ದುಃಖವಾಯಿತು. ಜಂಗಮರು ಹೇಗೆ ಮಾಯವಾದರು ಎಂದು ಗೋಪ್ಯವಾಗಿಯೇ ವಿಚಾರಣೆ ನಡೆಸಿದನು. ಮುಂದುಗಡೆಯಿಂದ ತಪ್ಪಿಸಿಕೊಳ್ಳುವುದು ಅಸಾಧ್ಯ. ಆ ಅತಿಥಿ ಶಾಲೆಗೆ ಹಿಂದುಗಡೆ ಒಂದು ಬಾಗಿಲಿದೆಯೆಂದು ಅರಮನೆಯ ಮುತ್ಸದ್ದಿಗಳಿಂದ ತಿಳಿಯಿತು. ರಾತ್ರಿ ಆ ಹಿಂದಿನ ಬಾಗಿಲಿನಲ್ಲಿ ಕಾವಲಿದ್ದ ಅರಮನೆಯ ಕಾವಲುಗಾರರನ್ನು ಹಿಡಿತರಿಸಿದರು. ಅವರುಗಳು ಮಂತ್ರಿಯ ಮುಂದೆ ನಡುಗುತ್ತಾ "ನಮಗೇನೂ ಗೊತ್ತಿಲ್ಲ. ಆ ಜಂಗಮರೆಲ್ಲಾ ಮಾಯಾ ಮಂತ್ರಗಳನ್ನು ಬಲ್ಲವರು. ಹೇಗೆ ಮಾಯವಾದರೋ ದೇವರೊಬ್ಬನೇ ಬಲ್ಲ" ಎಂದು ಹೇಳಿದರು. ಮಂತ್ರಿಯು

ರಾಜಭಟರನ್ನು ಕರೆಸಿ ಆ ಕಾವಲುಗಾರರನ್ನು ಕಶಗಳಿಂದ ಥಳಿಸಿದನು. ಕಾವಲುಗಾರರು ಬಾಯಿಬಿಟ್ಟರು. ರಾತ್ರಿ ಅನ್ನ ಕೊಡುವ ಸಮಯ ದಲ್ಲಿ, ಒಬ್ಬ ಸನ್ಯಾಸಿನಿಯು ಅಲ್ಲಿಗೆ ಬಂದಳೆಂದೂ, ಅವಳ ತಮ್ಮೆಲ್ಲರಿಗೂ ಕಣ್ಣುಕಟ್ಟು ಮಾಡಿದಳೆಂದೂ ಬಾಗಿಲುಗಳು ತಾವಾಗಿಯೇ ತೆರೆದು ಹೋದುವೆಂದೂ, ಜಂಗಮರೆಲ್ಲರೂ ಮಾಯವಾದರೆಂದೂ ತಿಳಿಸಿದರು. ಸಮಾಚಾರವು ಸ್ವಲ್ಪಮಟ್ಟಿಗೆ ಬೆಳಕಿಗೆ ಬಂದಂತಾಯಿತು. ಆ ಕಾವ ಲುಗಾರರನ್ನು ಮಂತ್ರಿಯು ಬಂಧನದಲ್ಲಿಡಿಸಿದನು. ಬಿಡದಿಯ ಯಜ ಮಾನ ಮಾದಯ್ಯನನ್ನೂ ಬಸವಯ್ಯನನ್ನೂ, ಹಿಡಿತರಿಸಿದನು. ಅವರು ಗಳಿಂದಲೂ ಇದೇ ಕತೆಯನ್ನು ಕೇಳಿದನು. ಆದರೆ ಮಾದ ಯ್ಯನು ಜಂಗಮವಾಡಿಯಿಂದ ಓಡಿಬಂದ ಕಾತ್ಯಾಯಿನಿಯೇ ಆ ಸನ್ಯಾಸಿನಿಯೆಂದು ತಿಳಿಸಿದನು. ಅವರಿಬ್ಬರನ್ನೂ ಬಂಧನದಲ್ಲಿಡು ವಂತೆ ಮಂತ್ರಿ ಆಜ್ಞಾಪಿಸಿದನು. ಅವನ ಕೋಪವು ಇಮ್ಮಡಿಯಾ ಯಿತು. ಕಾತ್ಯಾಯಿನಿಯ ವಿಷಯವನ್ನೆಲ್ಲಾ ಅವನು ಚೆನ್ನಾಗಿ ಬಲ್ಲನು. ಅವಳು ಮಲ್ಲಿಗೆಯ ಗೆಳತಿ. ಮಲ್ಲಿಗೆಯು ಜಂಗಮವಾಡಿಯಲ್ಲಿ ಭಕ್ತಿ ಯುಳ್ಳವಳೆಂದು ಮಂತ್ರಿಯು ಕೇಳಿದ್ದನು. ಈ ಕಾರ್ಯವು ಮಲ್ಲಿ ಗೆಯ ಬೆಂಬಲವಿಲ್ಲದೆ ನಡೆದಿಲ್ಲವೆಂದು ಮನಸ್ಸಿನಲ್ಲಿಯೇ ಗುಣಾಕಾರ ಹಾಕಿಕೊಂಡನು. ಕಾವಲುಗಾರರಿಂದಲೂ ಮಾದಯ್ಯನಿಂದಲೂ. ಮಲ್ಲಿಗೆಯ ಹೆಸರನ್ನು ಹೊರಡಿಸಲು ಎಷ್ಟೋ ಪ್ರಯತ್ನ ಪಟ್ಟನು. ಸಾಧ್ಯವಾಗಲಿಲ್ಲ. ಕಾತ್ಯಾಯಿನಿಯನ್ನು ಕರೆತರುವಂತೆ ರಾಜಭಟರಿಗೆ ಆಜ್ಞೆಮಾಡಿದನು. ಕಾತ್ಯಾಯಿನಿಯು ನದಿಯಲ್ಲಿ ಮಿಂದು ನದೀ ತೀರದ ಮಂಟಪದಲ್ಲಿ ಶಿವಪೂಜೆ ಗೈಯ್ಯುತ್ತಿದ್ದಳು. ರಾಜಭಟರು ಬಂದು 'ಮಂತ್ರಿಗಳ ಅಪ್ಪಣೆಯಾಗಿದೆ ಬರಬೇಕು' ಎಂದು ಹೇಳಿದರು. ಆ ಮಾತುಗಳಲ್ಲಿ ಮರ್ಯಾದೆಯಿರಲಿಲ್ಲ. ಬೆದರಿಕೆಯ ಧ್ವನಿಯಿದ್ದಿತು.

ಕಾತ್ಯಾಯಿನಿಯು ಅದರ ಅರ್ಥವನ್ನು ಅರಿತುಕೊಂಡಳು. ಶಿವಪೂಜೆಯನ್ನು ಪೂರೈಸಿ ಮೌನವಾಗಿ ಅವರ ಹಿಂದೆ ಹೋದಳು.

ಮಂತ್ರಿಯು ದಿವಾನ್ಖಾನೆಯಲ್ಲಿ ಕುಳಿತಿದ್ದನು. ಮುಖವು ಕೆಂಪೇರಿತ್ತು. ಮತ್ತಾರಾದರೂ ಆಗಿದ್ದರೆ, ಅವರ ಹೃದಯದಲ್ಲಿ ನಡುಕ ಹುಟ್ಟು ತ್ತಿತ್ತು. ಕಾತ್ಯಾಯಿನಿಯು ಶಾಂತಸ್ವರೂಪದಿಂದ ಮಂತ್ರಿಯ ಮುಂದೆ ಹೋಗಿ ನಿಂತಳು.

ಮಂತ್ರಿಯು ಗಂಭೀರ ಸ್ವರದಿಂದ "ನೀನೇ ಕಾತ್ಯಾಯಿನಿ ಎಂಬ ಸನ್ಯಾಸಿನಿಯೋ" ಎಂದು ಕೇಳಿದನು.

"ಹೌದು" ಎಂದು ಕಾತ್ಯಾಯಿನಿ ಮೃದುಸ್ವರದಿಂದ ಹೇಳಿದಳು.

"ನೀನು ಮೈಸೂರಿನ ಜಂಗಮವಾಡಿಯಿಂದ ಓಡಿ ಬಂದವಳೊ?"

"ಹೌದು"

"ನೀನು ಮಲ್ಲಿಗೆಯ ಆಪ್ತಸಖಿಯೋ?"

"ಹೌದು. ಚಿಕ್ಕರಾಣಿಯವರ ಅನುಗ್ರಹವು ನನ್ನ ಮೇಲೆ ಅಪಾರವಾಗಿದೆ."

"ನಿನ್ನ ಮೇಲೆ ರಾಜದ್ರೋಹ, ದೇಶದ್ರೋಹಗಳ ಗುರುತರವಾದ ಆಪಾದನೆಯು ಬಂದಿದೆ. ನೀನೇನು ಹೇಳುವಿ?"

"ಏನೂ ಇಲ್ಲ."

"ನೀನು ನಿನ್ನೆಯ ರಾತ್ರಿ ಅಂತಃಪುರದ ಗೊಡೆಯ ದಿಡ್ಡಿಯ ಬಾಗಿಲಿನಿಂದ ಬಂಧನದಲ್ಲಿದ್ದ ಜಂಗಮವಾಡಿಯ ಜಂಗಮರನ್ನೆಲ್ಲಾ ಪರಾರಿ ಮಾಡಿಸಿದ್ದೀಯೆಂದು ಆಪಾದನೆಯು ಬಂದಿದೆ. ಏನು ಹೇಳುವಿ?"

"ಅದು ಸರಿಯಾಗಿದೆ. ಆಪಾದನೆಯೇನೂ ಅಲ್ಲ, ಯಥಾರ್ಥ."

"ಕಾತ್ಯಾಯಿನಿ, ಈ ಅಪರಾಧಕ್ಕೆ ಶಿಕ್ಷೆಯೇನೆಂಬುದನ್ನು ಬಲ್ಲೆಯೋ?"

"ಇಲ್ಲ, ಶಿವನಂಬಿಗಳಿಗೆ ಶಿಕ್ಷೆ ರಕ್ಷೆಗಳು ಸಮಾನ."

"ಕಾತ್ಯಾಯಿನಿ, ನಿನ್ನ ಸನ್ಯಾಸವೆಲ್ಲವೂ ವೇಷ. ನೀನು ನಿಜ ವಾದ ಸನ್ಯಾಸಿನಿಯಾಗಿದ್ದರೆ ಈ ರಾಜಕೀಯಕ್ಕೆ ಏಕೆ ಬರುತ್ತಿದ್ದೆ? ನಿನ್ನನ್ನು ಶೂಲಕ್ಕೇರಿಸಬೇಕಾಗುವುದು"

" ಮಹಾಪುರುಷನೇ, ನನಗೆ ರಾಜಕೀಯವೆಲ್ಲಿಬಂತು ? ಐವತ್ತು ಮಂದಿ ಜಂಗಮರ ಪ್ರಾಣ ಹೋಗುವುದಕ್ಕಿಂತಲೂ ನನ್ನೊಬ್ಬಳ ಪ್ರಾಣ ವನ್ನು ಒಪ್ಪಿಸುವುದು ಶ್ರೇಷ್ಠವಾದ ಕಾರ್ಯ. ಅದಕ್ಕಿಂತಲೂ, ಪುಣ್ಯ ಕಾರ್ಯವು ಬೇರಾವುದೂ ಇಲ್ಲ."

" ಆ ಧೂರ್ತರು ಶಿವನಂಬಿಗಳೂ ಅಲ್ಲ. ಜಂಗಮರೂ ಅಲ್ಲ. ಕಾಶಾಯವನ್ನು ಧರಿಸಿದ ಮಾತ್ರಕ್ಕೇ ಅವರೆಲ್ಲರೂ ಪರಶಿವನ ಅವತಾರ ವೆನ್ನಿಸಿಕೊಳ್ಳುವರೇ ?"

" ನಿಜವಾದ ಭಕ್ತರು ಹಾಗೆಯೇ ಭಾವಿಸಬೇಕು. ಕಾಶಾಯ ವಸನಕ್ಕೂ ಅಷ್ಟು ಪೂಜ್ಯತೆಯುಂಟು. ಅದೇ ಶಿವರಹಸ್ಯ."

ಮಂತ್ರಿಯು ಕೋಪದಿಂದ " ಈ ನಿನ್ನ ಪಿತೂರಿಗೆ ನಿನ್ನ ರಾಣಿಯ ಬೆಂಬಲವು ಇದೆಯಷ್ಟೆ ?" ಎಂದನು.

" ಮಹಾಶಯನೇ, ಈ ಕಾರ್ಯಕ್ಕೆ ಪರಶಿವನ ಬೆಂಬಲವಿದೆ. ಮತ್ತಾರ ಬೆಂಬಲವೇಕೆ ? ಇಲ್ಲದಿದ್ದರೆ ಇಂತಹ ಕಾರ್ಯವು ನಡೆ ಯುತ್ತಿತ್ತೇ ?"

" ಕಾತ್ಯಾಯಿನಿ, ಹೆಚ್ಚು ಮಾತನಾಡಬೇಡ. ನಿನ್ನ ಮಾಯಾ ಮಂತ್ರಗಳೂ, ಪವಾಡಗಳೂ ನನ್ನಲ್ಲಿ ನಡೆಯುವುದಿಲ್ಲ. ನೀನು ಅಪರಾಧವನ್ನು ಒಪ್ಪಿಕೊಳ್ಳುತ್ತೀಯಾ ?"

" ಹೌದು, ನಾನೇ ಜಂಗಮರನ್ನೆಲ್ಲಾ ಬಿಡಿಸಿದವಳು. ಅದು ಅಪರಾಧವಾದರೆ ಆ ಅಪರಾಧವು ನನ್ನದು. ಶೂಲಕ್ಕೇರಬೇಕಾದರೆ ನಾನು ಸಂತೋಷದಿಂದ ಸಿದ್ಧವಾಗಿರುವೆನು. ವಿಷಪ್ರಾಶನ ಮಾಡಿಸುವು ದಾದರೆ ಒಂದು ಬೊಗಸೆ ವಿಷವನ್ನು ತರಿಸಿಕೊಟ್ಟರೆ ಸಂತೋಷದಿಂದ ನಿಮ್ಮೆದುರುನಲ್ಲಿಯೇ ಪಾನಮಾಡುವೆನು. ಚಿತ್ರವಧೆಗೆ ಅಪ್ಪಣೆಯಾದರೆ ನನ್ನ ಕೈಯಿಂದಲೇ ನನ್ನ ಶರೀರವನ್ನು ತುಂಡು ತುಂಡಾಗಿ ಕತ್ತರಿಸಿ ತಮ್ಮ ಮುಂದೆ ನೈವೇದ್ಯಕ್ಕಿಡುವೆನು. ಅದು ಕಾಲಭೈರವನ ಕಂಕ ನೈವೇದ್ಯವಾಗಲಿ " ಎಂದು ಹೇಳಿ ಕೈಮುಗಿದಳು.

ಮಂತ್ರಿಯು ಅವಾಕ್ಕಾದನು. ಅವನ ತಲೆಯು ತಿರುಗಿತು. ಇವಳು ಹೆಂಗಸಲ್ಲ, ಪಿಶಾಚಿ ಎಂದು ಮನಸ್ಸಿನಲ್ಲಿ ಅಂದುಕೊಂಡನು ರಾಜಭಟರನ್ನು ಕುರಿತು "ಇವಳ ಕೈಕಾಲುಗಳಿಗೆ ಬೀಗಗಳನ್ನು ತೊಡಿಸಿ ಬಂಧನದಲ್ಲಿಡಿರಿ" ಎಂದು ಆಜ್ಞಾಪಿಸಿ ಅರಮನೆಗೆ ಹೊರಟನು.

## ೨೪

ದೇವರಾಜನು ಸರಳಸ್ವಭಾವದವನು. ಸತ್ಯವಾದಿ, ಅವನ ಮನಸ್ಸಿನಲ್ಲಿ 'ಮಲ್ಲಿಗೆಯ ಬೆಂಬಲವಿಲ್ಲದೆ ಈ ಕಾತ್ಯಾಯಿನಿಗೆ ಇಷ್ಟು ಧೈರ್ಯವು ಬರುವುದಿಲ್ಲ. ಯಾರಾದರೇನು? ಅಪರಾಧಿಗಳಿಗೆ ಶಿಕ್ಷೆ ಯಾಗಲೇಬೇಕು. ರಾಣಿಯಾದರೂ ಶಿಕ್ಷೆಯು ತಪ್ಪದು' ಎಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡನು. ಅರಮನೆಗೆ ಹೋಗಿ ಅಂತ ರಂಗದಲ್ಲಿ ರಾಜನ ಭೇಟಿಮಾಡಿದನು. ರಾಜನಿಗೆ ಈ ಸಮಾಚಾರ ವೆಲ್ಲವೂ ಗುಪ್ತಚಾರರ ಮುಖೇನ ತಿಳಿದಿದ್ದಿತು

ರಾಜನು "ದೇವರಾಜರೇ, ಈ ಜಂಗಮರ ಸಮಾಚಾರವೇನು?" ಎಂದು ಕೇಳಿದನು.

ಮಂತ್ರಿಯು "ಮಹಾಪ್ರಭುಗಳೇ, ಬಂಧಿಸಲ್ಪಟ್ಟಿದ್ದ ಜಂಗಮ ರೆಲ್ಲರೂ ಪರಾರಿಯಾಗಿದ್ದಾರೆ. ಇದು ನಮಗೂ, ನಮ್ಮ ರಾಜ್ಯಕ್ಕೂ ಅತ್ಯಂತ ಅಪಮಾನಕರವಾಗಿದೆ" ಎಂದನು.

"ಮುಂದೇನು ಮಾಡಬೇಕು?"

"ಅದು ಅಷ್ಟು ಸುಲಭವಾದುದಲ್ಲ. ಈ ತುಂಟರು ಸ್ವಪ್ರತಿಷ್ಠೆ ಯನ್ನು ಕೊಚ್ಚಿಕೊಳ್ಳುತ್ತಾ ಜನಗಳನ್ನೆಲ್ಲಾ ಉದ್ರೇಕಗೊಳಿಸುತ್ತಾರೆ.

ಆದರಿಂದ ರಾಜ್ಯ ವಿಪ್ಲವವೇ ಸಂಭವಿಸಬಹುದು."

"ಜಂಗಮರನ್ನು ಓಡಿಸಲು ಯಾರು ಕಾರಣಕರ್ತರೆಂದು ಗೊತ್ತಾಗಿದೆಯೇ ?"

"ಮಹಾಪ್ರಭು, ಬಹುಮಟ್ಟಿಗೆ ಗೊತ್ತಾಗಿದೆ. ಕಾರಾಗೃಹದ ರಕ್ಷಕರದೇನೂ ತಪ್ಪಿಲ್ಲ. ಅರಮನೆಯ ಅಂತಃಪುರದಿಂದಲೇ ಈ ಪಿತೂರಿಯು ನಡೆದಿದೆ. ಅಂತಃಪುರೋದ್ಯಾನದ ಒಳಬಾಗಿಲಿನಿಂದಲೇ ಜಂಗಮರು ರಾಜಾರೋಷಾಗಿ ಪಲಾಯನ ಕಿತ್ತಿದ್ದಾರೆ."

"ಮಂತ್ರಿಗಳೇ, ಇದನ್ನು ಹೇಗೆ ಪತ್ತೆಮಾಡಿದಿರಿ ?"

ಮಂತ್ರಿಯು ನಕ್ಕು, "ಅದನ್ನು ಪತ್ತೆಮಾಡುವುದು ಅಗಾಧವಾದ ಕಾರ್ಯವೇನೂ ಅಲ್ಲ. ಎರಡೆರಡು ಚಾವುಟಿಯ ಪೆಟ್ಟು ಬೀಳುತ್ತಲೇ ಕಾವಲುಗಾರರು ಎಲ್ಲವನ್ನೂ ಬಾಯಿಬಿಟ್ಟರು. ಆ ಕಾತ್ಯಾಯಿನಿ-ಜಂಗಮವಾಡಿಯಿಂದ ಓಡಿಬಂದಿರುವ ವೇಷಧಾರಿಣಿಯಾದ ಪಿಶಾಚಿ-ಅವಳು ಬಂದು ಕಾವಲುಗಾರರನ್ನು ಮೋಸಗೊಳಿಸಿ ಜಂಗಮರನ್ನು ಓಡಿಸಿಬಿಟ್ಟಳು" ಎಂದನು.

ರಾಜನು ಗಾಬರಿಯಿಂದ "ಮಾಯೆ-ಮಂತ್ರಗಳಿಂದ ಕಾವಲುಗಾರರನ್ನು ಅವಳು ಮರುಳುಮಾಡಿರಬಹುದು" ಎಂದನು.

ಮಂತ್ರಿಯು ಪೆಟ್ಟುತಿಂದ ಘಟಸರ್ಪದಂತೆ ಉತ್ತೇಜಿತನಾಗಿ "ಮಹಾರಾಜಾ, ಈ ಮಾಯೆ-ಮಂತ್ರಗಳನ್ನು ರಾಜಕೀಯದಲ್ಲಿ ನಾನು ನಂಬುವುದಿಲ್ಲ, ಕಾತ್ಯಾಯಿನಿಯನ್ನು ಹಿಡಿತರಿಸಿದ್ದೇನೆ. ಅವಳೇ ಎಲ್ಲ ವಿಷಯಗಳನ್ನೂ ನಿರ್ಭಯವಾಗಿ ಹೇಳುತ್ತಾಳೆ. ಅವಳಿಗಷ್ಟು ಧೈರ್ಯವು ಎಲ್ಲಿ ಬರಬೇಕು? ಈ ಅಪಮಾನಕರವಾದ ಪಿತೂರಿಯಲ್ಲಿ ಚಿಕ್ಕರಾಣಿಯ ಕೈವಾಡವಿರಬೇಕು" ಎಂದು ಹೇಳಿದನು.

ರಾಜನಿಗೆ ಚೇಳು ಕುಟುಕಿದಂತಾಯಿತು. ಅವನು "ದೇವರಾಜ, ಈ ಮಾತನ್ನು ಯಾರು ಹೇಳಿದರು ?" ಎಂದು ಕೇಳಿದನು.

ಮಂತ್ರಿಯು "ನಾನು ಹೇಳುತ್ತೇನೆ. ರಾಣಿಯ ಪ್ರೋತ್ಸಾಹವಿಲ್ಲ

ದಿದ್ದರೆ ಕಾತ್ಯಾಯಿನಿಗೆ ಆ ಧೈರ್ಯವೆಲ್ಲಿ ಬರಬೇಕು? ನಾನು ರಾಣಿಯೇ ಪ್ರತ್ಯಕ್ಷವಾಗಿ ಈ ಅಪರಾಧಕ್ಕೆ ಕಾರಣಭೂತಳೆಂದು ನಿಶ್ಚಯ ಮಾಡಿದ್ದೇನೆ. ಪ್ರಜಾವರ್ಗವೆಲ್ಲವೂ ನಾಳೆ ಅದನ್ನರಿತುಕೊಳ್ಳುತ್ತದೆ. ಅಪವಾದ-ಅಪಮಾನಗಳ ಕಾರ್ಮೋಡಗಳು ಈ ಅರಮನೆಯನ್ನು ಮುಚ್ಚುತ್ತವೆ. ನಾನು ಇನ್ನು ಒಂದು ದಿನಸವೂ ಈ ಅಧಿಕಾರದಲ್ಲಿರು ವುದಿಲ್ಲ. ಅಧಿಕಾರ ಪರಿತ್ಯಾಗ ಮಾಡಿದ್ದೇನೆ" ಎಂದು ಹೇಳಿ ರಾಜನ ಅಪ್ಪಣೆಯನ್ನು ಪಡೆಯದೆ ಹೊರಟು ಹೋದನು.

ರಾಜನು ಮರ್ಮಾಹತನಾದವನಂತೆ ದುಃಖಿತನಾದನು. ಜಂಗ ಮರ ಪಲಾಯನದಿಂದ ಅವನ ಮನಸ್ಸಿಗೆ ಬಹಳ ದುಃಖವಾಗಿತ್ತು. ಮಿತಿಮೀರಿದ ಕೋಪವು ಬಂದಿತ್ತು. ಅರಮನೆಯ ಅಂತಃಪುರದ ಮೇಲೆ ಈ ಅಪವಾದವು ಬೀಳುತ್ತದೆಂಬ ಶಂಕೆಯಿಂದಂತೂ, ಅವನ ಮುಖಕ್ಕೆ ಮಸಿ ಬಳಿದಂತಾಗಿತ್ತು. 'ಮಲ್ಲಿಗೆಯು ಇಂತಹ ಘೋರ ಅಪರಾಧವನ್ನು ಮಾಡಿರಬಹುದೇ!' ಎಂದು ಅವನ ಮನಸ್ಸಿಗೆ ತೋರಿತು. 'ಇದ್ದರೂ ಇರಬಹುದು. ಸಹವಾಸದೋಷ. ಅವಳ ಹುಟ್ಟು ಗುಣವು ಹೋದೀತೆ?' ಎಂದು ಚಿಂತಿಸಿದನು. ಮಧ್ಯಾಹ್ನ ಆರೋಗಣೆ ಮಾಡಲಿಲ್ಲ. ಸಂಧ್ಯಾಕಾಲದವರೆಗೂ ತನ್ನ ಅಂತರಂಗಗೃಹದಲ್ಲಿ ಕುಳಿತು, ಮುಂದೇನು ಮಾಡಬೇಕೆಂಬುದನ್ನು ಆಲೋಚನೆ ಮಾಡಿದನು. ಮನಸ್ಸು ನಿರ್ಧಾರಕ್ಕೆ ಬಂದಿತು. ಹೃದಯವನ್ನು ಕಲ್ಲಿನಷ್ಟು ಕಠೋರ ಮಾಡಿಕೊಂಡು ಮಲ್ಲಿಗೆಯ ಅಂತಃಪುರಕ್ಕೆ ಹೋದನು.

## ೨೫

ಆದಿನ ಪ್ರಾತಃಕಾಲದಿಂದ ಅರಮನೆಯಲ್ಲಿ ಯಾರೂ ಊಟ-ಉಪಚಾರಗಳನ್ನು ಮಾಡಿರಲಿಲ್ಲ. ಕಾವಲುಗಾರರ ಬಂಧನ, ಕಾತ್ಯಾ

ಯಿನಿಯ ಬಂಧನ ಇದೆಲ್ಲವನ್ನೂ ಮುದ್ದವ್ವನು ಬಂದು ಮಲ್ಲಿಗೆಗೆ ಹೇಳಿದ್ದಳು. ಮಲ್ಲಿಗೆಯು ಸ್ನಾನ ಭೋಜನಗಳನ್ನು ಮಾಡದೆ ನಿರ್ವಿಣ್ಣಳಾಗಿ ಕುಳಿತಿದ್ದಳು. ರಾಜನು ಅಂತಃಪುರಕ್ಕೆ ಹೋಗಿ ಕೋಣೆಯ ಬಾಗಿಲನ್ನು ತಾನೇ ತೆಗೆದುಕೊಂಡು ಚಿಂತಾಕ್ರಾಂತಳಾಗಿ ಕುಳಿತಿದ್ದ ಮಲ್ಲಿಗೆಯ ಮುಂದೆ ಹೋಗಿ ನಿಂತನು. ಮಲ್ಲಿಗೆಯು ಎದ್ದು ನಿಂತುಕೊಂಡು ಕೈಮುಗಿದಳು. ಒಬ್ಬರ ಮುಖವನ್ನೊಬ್ಬರು ನೋಡಿದರು. ಎಲ್ಲವೂ ಅರ್ಥವಾಗಿ ಹೋಯಿತು. ಮಲ್ಲಿಗೆಯ ಮುಖವು ಕಾಂತಿಹೀನವಾಗಿತ್ತು. ಮುಖದಲ್ಲಿ ಬಿಳುಪೇರಿ ಹೋಗಿತ್ತು. ಅವಳ ಕಣ್ಣುಗಳು ರಾಜನ ಕಣ್ಣುಗಳನ್ನು ಸಂಧಿಸಲಾರದೇ, ನೋಟವು ಹಿಂದಕ್ಕೆ ಬಂದು ಕಣ್ಣುಗಳು ಮುಚ್ಚಿಕೊಳ್ಳುತ್ತಿದ್ದವು. ರಾಜನು ಆಸನದಮೇಲೆ ಕುಳಿತುಕೊಂಡನು.

"ಮಲ್ಲಿಗೆ! ವಿಚಾರವೆಲ್ಲವೂ ತಿಳಿದಿದೆಯಷ್ಟೆ?" ಎಂದು ಕಠೋರವಾಣಿಯಿಂದ ಕೇಳಿದನು.

"ಮಹಾಪ್ರಭು, ತಿಳಿದಿದೆ." ಎಂದು ಮಲ್ಲಿಗೆ ಮೃದುನುಡಿಯಿಂದ ನುಡಿದಳು.

ರಾಜನು "ಕಾತ್ಯಾಯಿನಿಯು ಜಂಗಮರನ್ನೆಲ್ಲಾ ಪರಾರಿ ಮಾಡಿಸಿದ್ದಾಳೆಂದು ರಾಜಧಾನಿಯಲ್ಲಿ ಜನಜನಿತವಾಗಿದೆ. ಮಂತ್ರಿಯ ಸಮ್ಮುಖದಲ್ಲಿ ಅವಳೇ ಒಪ್ಪಿಕೊಳ್ಳುತ್ತಾಳೆ. ಇದಕ್ಕೆ ಶಿಕ್ಷೆಯೇನೆಂಬುದನ್ನು ಬಲ್ಲೆಯಾ?" ಎಂದು ಕೇಳಿದನು.

ಮಲ್ಲಿಗೆಯು ತಲೆಯನ್ನು ಅಲ್ಲಾಡಿಸಿದಳು.

ರಾಜನು "ಕಾತ್ಯಾಯಿನಿಯನ್ನು ಶೂಲಕ್ಕೇರಿಸಬೇಕು. ಈ ಅಪರಾಧಕ್ಕೆ ಬೇರೆ ಶಿಕ್ಷೆಯೇ ಇಲ್ಲ" ಎಂದು ಹೇಳಿದನು.

ಮಲ್ಲಿಗೆಯು ಸ್ಥಿರಭಾವದಿಂದ ನಿಂತಿದ್ದಳು.

ರಾಜನು "ಮಲ್ಲಿಗೆ, ಈ ದೋಷವು ಅಷ್ಟಕ್ಕೆ ಪರಿಹಾರವಾದಂತೆ ಆಗುವುದಿಲ್ಲ. ನಿನ್ನಮೇಲೆಯೂ ಶಂಕೆಯು ಉತ್ಪನ್ನವಾಗಿದೆ. ಈ

ಅಪವಾದವು ನಿನಗೂ ತಪ್ಪುವಂತಿಲ್ಲ. ಮಲ್ಲಿಗೆ, ನೀನೇನು ಹೇಳುವೆ ?" ಎಂದನು.

ಮಲ್ಲಿಗೆಯು "ಮಹಾರಾಜ, ತಮ್ಮೆದುರಿಗೆ ನಾನೆಂದೂ ಅಸತ್ಯವನ್ನಾಡಿಲ್ಲ. ನನ್ನಮೇಲೆ ಸಂದೇಹವೇಕೆ ? ಅದು ಸತ್ಯವಾದುದು. ಕಾತ್ಯಾಯಿನಿಯದೇನೂ ತಪ್ಪಿಲ್ಲ. ನಾನೇ ಈ ಕೆಲಸವನ್ನು ನಡೆಸಿದವಳು. ಈ ಅಪರಾಧಕ್ಕೆ ನನಗೆ ಶಿಕ್ಷೆಯಾಗಬೇಕು " ಎಂದಳು.

"ಮಲ್ಲಿಗೆ ! ಇಂತಹ ಅಕೃತ್ಯವನ್ನು ನೀನೇಕೆ ನಡೆಸಿದೆ? ಇದರ ಪರಿಣಾಮವನ್ನು ನೀನು ಅರಿಯಲಾರದೇ ಹೋದೆಯಾ ?"

"ಪ್ರಭು, ನಾನು ಪರಿಣಾಮವನ್ನು ಆಲೋಚಿಸಲೇ ಇಲ್ಲ. ಜಂಗಮರ ವಧೆಯಿಂದ ಈ ಅರಮನೆಯು ಅಪವಿತ್ರವಾಗುವುದೆಂದೂ, ಈ ಕಲಂಕವು ಸೂರ್ಯಚಂದ್ರರಿರುವವರೆಗೆ ತಮಗೆ ತಪ್ಪಿದ್ದಲ್ಲವೆಂದೂ ಬಗೆದು ನಾನು ಈ ಸಾಹಸವನ್ನು ಮಾಡಿದೆ."

"ಛೆ ! ಅವರು ಜಂಗಮರೆಂದು, ಪವಿತ್ರಾತ್ಮರೆಂದು ನಿನಗಾರು ಹೇಳಿದರು ?"

"ದೇವಾ ! ಈ ಜಗತ್ತು ಹೇಳುತ್ತದೆ. ಅದಕ್ಕೆ ಪವಿತ್ರ ಅಪವಿತ್ರತೆಗಳ ಅರಿವಿಲ್ಲ. ಪಾಪ ಪುಣ್ಯಗಳ ಭಯವಿಲ್ಲ. ಹೊರಗಿನ ವೇಷವನ್ನು ಜನರು ನಂಬುತ್ತಾರೆ. ಜಂಗಮರೆಂದರೆ ಜಂಗಮರು. ಅಷ್ಟೆ. ಅವರ ಅಪರಾಧವೇನಿದೆ ?"

ರಾಜನಿಗೆ ಕೋಪವು ಇಮ್ಮಡಿಯಾಯಿತು. "ಮಲ್ಲಿಗೆ, ಜಂಗಮವಾಡಿಯವರ ಅಪರಾಧವೇನೂ ಇಲ್ಲವೆನ್ನುವೆಯಾ? ಮಂತ್ರಿಯ ವಧೆಮಾಡಿದವರಾರು? ನೀನು ಬಲ್ಲೆಯಾ ?"

"ದೇವಾ, ಅದಕ್ಕೆ ಸಾಕ್ಷ್ಯವೇನಿದೆ ?"

"ಸಾಕ್ಷ್ಯವು ಬೇಕೆ ? ನೀನು ನ್ಯಾಯಾಧೀಶಳಾದರೆ ಸಾಕ್ಷ್ಯವು ಬೇಕು. ನನಗೆ ಸಾಕ್ಷ್ಯವು ಬೇಕಾಗಿಲ್ಲ. ಈ ರಾಜ್ಯದಲ್ಲಿ ನಾನೇ ಸರ್ವತಂತ್ರ ಸ್ವತಂತ್ರ. ಧರ್ಮವೊಂದೇ ನನಗೆ ಸಾಕ್ಷಿ."

ಮಲ್ಲಿಗೆಯು "ಪ್ರಭು, ನನಗೇಕೆ ಸಾಕ್ಷಿ? ಮಹಾಪ್ರಭುಗಳೇ ನನ್ನ ದೈವ. ನನ್ನ ಅಂತರಾತ್ಮವೇ ಸಾಕ್ಷಿ ನಾನು ಬಂಧಿತರಾಗಿದ್ದ ಜಂಗಮ ರನ್ನೆಲ್ಲಾ ಬಿಡುಗಡೆಮಾಡಿದ್ದೇನೆ. ತಮ್ಮ ಚಿತ್ತಕ್ಕೆ ಅದು ಅಪರಾಧ ವೆಂದು ಕಂಡರೆ ನಾನು ಮಹಾಪರಾಧಿನಿ. ಶಿಕ್ಷೆಯನ್ನು ವಿಧಿಸಬಹುದು" ಎಂದು ಕೈಮುಗಿದಳು.

ರಾಜನು "ಶಿಕ್ಷೆ! ಶಿಕ್ಷೆ! ಶಿಕ್ಷೆಯನ್ನು ವಿಧಿಸದೇ ಗತ್ಯಂತರವಿಲ್ಲ. ರಾಜನಾದವನು ತಪ್ಪಿತಸ್ಥರಿಗೆ ಶಿಕ್ಷೆಯನ್ನು ವಿಧಿಸಲೇ ಬೇಕು. ನಾನು ನಿನ್ನನ್ನು ಪರಿತ್ಯಾಗ ಮಾಡಿದ್ದೇನೆ. ನೀನು ಈ ರಾಜ್ಯವನ್ನು ಬಿಟ್ಟು ಎಲ್ಲಿಯಾದರೂ ಹೊರಟುಹೋಗು. ಈ ನನ್ನ ರಾಜ್ಯದಲ್ಲಿ ಮತ್ತಾರೂ ನಿನ್ನನ್ನು ನೋಡದಿರಲಿ" ಎಂದು ಹೇಳಿದನು

ಮಲ್ಲಿಗೆಯ ಕಿವಿಗೆ ಸೀಸ ಕಾಸಿಬಿಟ್ಟಂತೆ ಆಯಿತು. ಅವಳು ನಿಂತಿದ್ದಂತೆಯೇ ಕುಸಿದು ಬಿದ್ದಳು. ಮೂರ್ಛಿತಳಾದಳು. ರಾಜನು ಮಲ್ಲಿಗೆಯ ಆ ಅವಸ್ಥೆಯನ್ನು ನೋಡಿದನು. ಮನಸ್ಸು ಚಲಿಸಲಿಲ್ಲ. ಪುನಃ ಮಲ್ಲಿಗೆಯ ಮುಖವನ್ನ ನೋಡಲಿಲ್ಲ. ಆ ಅಂತಃಪುರದಿಂದ ಹೊರಟುಹೋದನು.

ಮಲ್ಲಿಗೆಯು ಹಾಗೆಯೇ ಬಹಳ ಹೊತ್ತು ಬಿದ್ದಿದ್ದಳು. ಎಚ್ಚರ ವಾಯಿತು. ಎದ್ದು ಸ್ನಾನಗೃಹಕ್ಕೆ ಹೋಗಿ ಸ್ನಾನಮಾಡಿದಳು. ಮಡಿಯನ್ನುಟ್ಟು ದೇವರಿಗೆ ದೀಪಗಳನ್ನು ಹಚ್ಚಿಟ್ಟಳು. ಪುಷ್ಪಗಳನ್ನು ಸಮರ್ಪಿಸಿದಳು. ಆ ಪೂಜಾಗೃಹದಲ್ಲಿಯೇ ಕುಳಿತು ಒಂದು ಪತ್ರ ವನ್ನು ಬರೆದಳು. ಆ ಪತ್ರದ ಪರಿಯು ಈಪರಿಯಾಗಿದ್ದಿತು.

'ಮಹಾರಾಜಾಧಿರಾಜನೇ,

ನಾನು ಕುಲದಲ್ಲಿ ವೇಶ್ಯೆ. ಪರಮೇಶ್ವರನು ದತ್ತೂರಿಯ ಪುಷ್ಪ ವನ್ನು ಸ್ವೀಕರಿಸಿದಂತೆ ತಾವು ನನ್ನನ್ನು ಪ್ರೀತಿಯಿಂದ ಪರಿಗ್ರಹಿ ಸಿದಿರಿ. ಮಹಾರಾಣಿಯವರು ನನ್ನನ್ನು ಪುರಸ್ಕರಿಸಿದರು. ಈ

ರಾಜ್ಯದಲ್ಲಿ ಎಲ್ಲರೂ ನನ್ನನ್ನು ಚಿಕ್ಕರಾಣಿಯೆಂದು ಕರೆಯುತ್ತಿದ್ದರು. ಒಬ್ಬರಾದರೂ ಬಂಗಾರದವಳೆಂದು ತಿರಸ್ಕರಿಸಲಿಲ್ಲ. ನಾನು ಬೇಡಿದ್ದನ್ನೆಲ್ಲಾ ಬಂಗಾರವಾಗಿ ಮಾಡಿದಿರಿ. ಗರಳಪುರಿಯಲ್ಲಿ ನಾನು ಸನ್ಯಾಸಿನಿಯಾಗಿ ಹೊರಟುಹೋಗುತ್ತಿದ್ದೆ. ಪುನಃ ನನ್ನನ್ನು ಅರಸಿ ಕರೆತರಿಸಿದಿರಿ. ತಮ್ಮ ಪ್ರೀತಿಯಲ್ಲಿ ಎಂದೂ ಕುಂದಿರಲಿಲ್ಲ. ಜಂಗಮವಾಡಿಯವರು ದುಷ್ಟರೋ, ಸಾಧುಗಳೋ ನಾನೆಂದೂ ಪರಿಗಣಿಸಲಿಲ್ಲ. ಕಾವಿಯ ಬಟ್ಟೆಯನ್ನು ಧರಿಸಿದರೆ ಮಾನವನು ಪರಮಾತ್ಮಸ್ವರೂಪನಾಗುವನೆಂದು ನನ್ನ ದೃಢಭಾವನೆಯಿತ್ತು. ಈಗಲೂ ಅದೇ ಭಾವನೆಯಿದೆ. ಆದರೂ, ತಾವು ನನಗಿತ್ತ ಶಿಕ್ಷೆಯು ನ್ಯಾಯವಾದುದು. ಅರಮನೆಯ ವೈಭವಗಳನ್ನು ಸಂತೋಷದಿಂದ ಅನುಭವಿಸಿದಮೇಲೆ ಅರಮನೆಯ ಕಟ್ಟು ಕಟ್ಟಲೆಗಳನ್ನೂ, ನಿಯಮಗಳನ್ನೂ ನಾನು ಪಾಲಿಸಲೇ ಬೇಕು. ಆ ದೃಷ್ಟಿಯಿಂದ ಜಂಗಮರನ್ನು ಬಿಟ್ಟುಬಿಟ್ಟದ್ದು ನನ್ನ ಮಹಾಪರಾಧವೇ ಸರಿ. ತಾವು ವಿಧಿಸಿದ ಶಿಕ್ಷೆಯು ನ್ಯಾಯವಾದುದೇ ಸರಿ. ಭಗವಂತನು ಮುಂದಿನ ಜನ್ಮದಲ್ಲಿ ತಮ್ಮ ಪಾದಸೇವೆಗೆ ಅವಕಾಶವನ್ನು ಕೊಡಲಿ. ತಾವು ನನ್ನನ್ನು ಈ ರಾಜ್ಯದಲ್ಲಿಯೇ ಇರಕೂಡದೆಂದು ಆಜ್ಞಾಪಿಸಿದಮೇಲೆ ಈ ಲೋಕದಲ್ಲಿ ನನಗೆಲ್ಲಿಯೂ ಸ್ಥಳವಿಲ್ಲ. ಮಹಾಪ್ರಭುಗಳಾದ ತಮ್ಮಲ್ಲಿ ನನ್ನದೊಂದು ಕಟ್ಟಕಡೆಯ ಪ್ರಾರ್ಥನೆಯಿದೆ. ನನ್ನ ಒಡವೆ ವಸ್ತುಗಳು, ಧನಕನಕಗಳು ಅಪಾರವಾಗಿದೆ. ಇವೆಲ್ಲವನ್ನೂ ವೆಚ್ಚಮಾಡಿ ಈ ರಾಜಧಾನಿಯ ಸಮೀಪದಲ್ಲಿ ನನ್ನ ಹೆಸರಿನಲ್ಲಿ ಒಂದು ಕಾಲುವೆಯನ್ನು ಕಟ್ಟಿಸಬೇಕು. ಅದರಿಂದ ಪಶುಪಕ್ಷಿಗಳು, ಜೀವಜಂತುಗಳು ಸಂತೃಪ್ತಿಯಾಗುವಂತಾಗಬೇಕು. ಇದೇ ಈ ಜನ್ಮದಲ್ಲಿ ನನ್ನ ಕಡೆಯ ಪ್ರಾರ್ಥನೆ. ಮಹಾಪ್ರಭುಗಳೇ, ಈ ಜನ್ಮದ ಕಡೆಯ ವಂದನೆಗಳು. – ಮಲ್ಲಿಗೆ.

ಎಂದು ಪತ್ರವನ್ನು ಬರೆದು ದೇವರ ಮುಂದೆ ಮಣೆಯ ಮೇಲಿಟ್ಟು ಆ ಪತ್ರದ ಮೇಲೆ ಒಂದು ಪುಷ್ಪಹಾರವನ್ನು ಇಟ್ಟು, ದೇವರಿಗೆ ನಮಸ್ಕರಿಸಿ ತನ್ನ ಅಂತರಂಗದ ಕೋಣೆಗೆ ಹೋದಳು. ಅಲ್ಲಿ ಮೈಮೇಲಿದ್ದ ಆಭರಣಗಳನ್ನೆಲ್ಲಾ ಬಿಚ್ಚಿಟ್ಟು ಪೂರ್ವದಲ್ಲಿ ಜಂಗಮದೇವನು ಕೊಟ್ಟಿದ್ದ ಕಾವಿಯ ಬಟ್ಟೆಗಳನ್ನು ಧರಿಸಿಕೊಂಡಳು. ಅಂತಃಪುರದ ಉದ್ಯಾನದಿಂದ ಯಾವ ಮಾರ್ಗದಲ್ಲಿ ಜಂಗಮರು ಹೊರಟರೋ ಅದೇ ಮಾರ್ಗವಾಗಿ ಹೊರಟು ಕಾವೇರಿಯ ಪಾವಟಿಗೆಗಳನ್ನು ಇಳಿದಳು. ಅಲ್ಲಿಯೇ ಮುಂದೆ ಹರಿಯುತ್ತಿರುವ ಕಾವೇರಿಯನ್ನು ನೋಡಿದಳು. 'ಬೇಡ ಈ ರಾಜಧಾನಿಯಲ್ಲಿ ಸಜೀವವಾಗಿಯಾಗಲೀ ನಿರ್ಜೀವವಾಗಿಯಾಗಲೀ ನನ್ನನ್ನು ಯಾರೂ ನೋಡಬಾರದು. ಅದು ನನ್ನ ಪ್ರಭುವಿನ ಇಷ್ಟ' ಎಂದು ಹೇಳಿ ನದಿಯ ಮಗ್ಗುಲಿನಲ್ಲಿಯೇ ನಡೆದು ಹೊರಟಳು.

ಅವಳು ಎಲ್ಲಿಗೆ ಹೋಗುವಳೋ ಅದನ್ನು ಅವಳೇ ಅರಿತಿರಲಿಲ್ಲ. ದಾರಿಯು ಮಾತ್ರ ಮೈಸೂರಿಗೆ ಕರದೊಯ್ದಿತು. ಅಷ್ಟು ಹೊತ್ತಿಗೆ ಬೆಳಕು ಹರಿದಿದ್ದಿತು. ಮಲ್ಲಿಗೆಯು ಜನರಾರಿಗೂ ಮುಖವನ್ನು ತೋರಿಸಲಿಲ್ಲ. ಬೆಟ್ಟದ ತಪ್ಪಲಿನಲ್ಲಿ ಜಂಗಮನು ವಧೆಯಾದ ಮಂಟಪಕ್ಕೆ ಹೋಗಿ ಕುಳಿತಳು. ಆ ಸ್ಥಳವು ನಿರ್ಮಾನುಷ್ಯವಾಗಿದ್ದಿತು ಹಕ್ಕಿಗಳು ಕಲಕಲನಿನಾದ ಮಾಡುತ್ತಿದ್ದವು. ಮಲ್ಲಿಗೆಯು ಹೋಗಿ ಆ ಮಂಟಪದಲ್ಲಿ ಕುಳಿತಳು. ಅಲ್ಲಿ ಅವಳಿಗೆ ತಡೆಯಲಾರದಷ್ಟು ದುಃಖವು ಬಂದಿತು. ಬಹಳ ಹೊತ್ತು ರೋದಿಸಿದಳು. ಗುರುದೇವನನ್ನು ನೆನೆದು ಅತ್ತಳು.

'ಗುರುದೇವಾ, ನನಗಾಗಿ ನೀನು ಅಕಾಲಮೃತ್ಯುವಿಗೆ ತುತ್ತಾದೆ. ನನಗಾಗಿ ನಿನ್ನ ಅಷ್ಟಸಿದ್ಧಿಗಳನ್ನು ಕಳೆದುಕೊಂಡೆ. ಜನರು ಏನೆನ್ನಲಿ ನನ್ನ ಭಾಗಕ್ಕೆ ನೀನೇ ಪರಮೇಶ್ವರ. ಈ ಜಗತ್ತಿನಲ್ಲಿ ಸಕಲ ವೈಭವಗಳನ್ನೂ ಪಡೆದಿರುವ ರಾಜನು ನನ್ನವನು. ಆದರೆ

ಅವನೂ ದುಃಖಿ ! ಅವನಿಗೆ ಸುಖವೆಲ್ಲಿದೆ ? ಅಷ್ಟಸಿದ್ಧಿಗಳನ್ನು ಪಡೆದು ಪವಾಡಪುರುಷನೆನಿಸಿಕೊಂಡಿದ್ದ ನೀನು ನನ್ನ ಗುರು. ನಿನಗೆಂಥಾ ದುರ್ಮರಣವು ಸಂಭವಿಸಿತು ! ನಿನಗಾದರೂ ಶಾಶ್ವತವಾದ ಆನಂದ ವೆಲ್ಲಿ ಬಂತು?' ಎಂದು ರೋದಿಸಿದಳು. ಆ ಮಂಟಪದಿಂದ ಎದ್ದು ಗರಳಪುರಿಯ ಕಡೆಗೆ ಹೊರಟಳು.

ದಾರಿಯಲ್ಲಿ ಕಂಡ ಹಳ್ಳಿಗರು ಯಾರೋ ಸನ್ಯಾಸಿನಿಯೆಂದು ಭಾವಿಸಿ ಕೈಮುಗಿದು ಹೋಗುತ್ತಿದ್ದರು. ಇವಳು ಅರಮನೆಯ ಅರ ಗಿಣಿಯಂತಿದ್ದ ಮಲ್ಲಿಗೆಯೆಂಬುದನ್ನು ಯಾರು ಬಲ್ಲರು ? ಸಂಧ್ಯಾಕಾಲದ ಸಮಯಕ್ಕೆ ಗರಳಪುರಿಗೆ ತಲುಪಿ ಮಹಂತನ ಮಠಕ್ಕೆ ಹೋದಳು. ಆ ಸಮಯದಲ್ಲಿ ಮಹಂತನು ಶಿವಪೂಜೆಯನ್ನು ಪೂರೈಸಿ ಭಕ್ತಾದಿಗಳಿಗೆ ಪ್ರಸಾದವನ್ನು ಕೊಡುತ್ತಿದ್ದನು. ಮಲ್ಲಿಗೆಯು ಹೋಗಿ ಮಹಂತನ ಪಾದಗಳಿಗೆ ಎರಗಿದಳು.

ಮಹಂತನು ಅಭಿಮಾನದಿಂದ "ಮಗಳೇ, ಇಲ್ಲಿಗೇಕೆ ಬಂದೆ ? ಈ ವೇಷವೇನು ? ನಿನಗೇನು ಕಷ್ಟವು ಪ್ರಾಪ್ತವಾಯಿತು ?" ಎಂದು ಪ್ರಶ್ನೆ ಮಾಡಿದನು.

ಮಲ್ಲಿಗೆಯು "ಮಹಾಪುರುಷನೇ, ಪರಶಿವನೇ, ನನ್ನ ಕಷ್ಟಗಳೆಲ್ಲಾ ಪೂರೈಸಿದವು. ನಿನ್ನ ದರ್ಶನಕ್ಕೆ–ಕಡೆಯ ದರ್ಶನಕ್ಕೆ ಬಂದಿದ್ದೇನೆ. ನನಗೆ ಶಿವದೀಕ್ಷೆಯನ್ನು ಕೊಡು " ಎಂದು ಕೇಳಿದಳು.

ಮಹಂತನು ನಗುತ್ತಾ "ಮಗಳೇ, ನೀನು ಪುಣ್ಯಾತ್ಮಳು. ನಿನಗೇಕೆ ಶಿವದೀಕ್ಷೆ? ನಿನ್ನಂತಹವಳಿಗೆ ಪರಶಿವನೇ ಅಂತರಂಗ ದೀಕ್ಷೆಯನ್ನು ಅನು ಗ್ರಹಿಸುತ್ತಾನೆ. ನೀನು ಕೃತಾರ್ಥಳಾಗಿರುವೆ. ಈ ಕ್ಷೇತ್ರದಲ್ಲಿಯೇ ಇರು. ಮುಕ್ತಿಯು ಲಭಿಸುತ್ತದೆ " ಎಂದು ಹೇಳಿದನು.

ಮಲ್ಲಿಗೆಯು ಮಹಂತನ ಪಾದಗಳಮೇಲೆ ತಲೆಯಿಟ್ಟು ನಮ ಸ್ಕರಿಸಿ ಪ್ರಸಾದವನ್ನು ಸ್ವೀಕರಿಸಿದಳು. ಎದ್ದು ಮಹಂತನ ಮಠದಿಂದ ಹೊರಡಲು ಅನುವಾದಳು. ಮಹಂತನು "ಮಗಳೇ, ಈ ಮಠವು

ನಿನ್ನದೇ ಇದೆ. ಇಲ್ಲಿಯೇ ಇರವಮ್ಮಾ" ಎಂದು ಹೇಳಿದನು.

"ಗುರುವೇ, ನಾನು ನದಿಯ ತೀರದಲ್ಲಿ ಮಂಟಪದಲ್ಲಿ ರಾತ್ರಿ ಕಳೆಯುತ್ತೇನೆ. ಅದೇ ನನ್ನಂತಹ ಸನ್ಯಾಸಿನಿಯರಿಗೆ ಅಭಯಸ್ಥಾನ" ಎಂದು ಹೇಳಿ ಕೈಮುಗಿದು ಹೊರಟುಹೋದಳು.

ಮಲ್ಲಿಗೆಯ ಕಾಲುಗಳು ಅವಳ ತಾಯಿಯು ಸ್ವರ್ಗಸ್ಥಳಾದ ಛತ್ರದ ಕಡೆಗೆ ಎಳೆಯಿತು. ಆ ಛತ್ರದೊಳಗೆ ಹೋಗಿ ನೋಡಿದಳು. ಎಷ್ಟೋ ಮಂದಿ ಭಕ್ತಾದಿಗಳು ಆ ಛತ್ರದಲ್ಲಿ ಇಳಿದುಕೊಂಡು ಭಗವಂತನ ಗುಣಗಾನಮಾಡುತ್ತಿದ್ದರು. ಈ ಸನ್ಯಾಸಿನಿಯು ಹೋಗಿ ತನ್ನ ತಾಯಿಯು ಮೃತಿಹೊಂದಿದ ಸ್ಥಳದಲ್ಲಿ ಕುಳಿತಳು ತಾಯಿಯನ್ನು ನೆನೆದು ಅಳಲಾರಂಭಿಸಿದಳು. ಅಲ್ಲಿದ್ದ ಭಕ್ತರು "ನೀನಾರಮ್ಮ? ಏಕೆ ಅಳುತ್ತಿ ?"ಎಂದು ಸಮಾಧಾನಗೊಳಿಸಿದರು

ಮಲ್ಲಿಗೆಯು " ಇದು ನನ್ನ ತಾಯಿಯು ಮೃತಿ ಹೊಂದಿದ ಸ್ಥಳ" ಎಂದು ಗದ್ಗದ ಕಂಠದಿಂದ ಹೇಳಿದಳು.

"ಅಯ್ಯೋ ತಾಯೆ, ಎಲ್ಲರೂ ಸಾಯಲೇಬೇಕು. ಈ ಭಗವಂತನ ಸಾನ್ನಿಧ್ಯದಲ್ಲಿ ಸತ್ತವರು ಪುಣ್ಯವಂತರು. ಅವರನ್ನು ಪರಮೇಶ್ವರನು ಕೈಲಾಸಕ್ಕೆ ಪುಷ್ಪಕವಿಮಾನದಲ್ಲಿ ಕರೆಸಿಕೊಳ್ಳುತ್ತಾನೆ. ಅಂತಹವರಿಗಾಗಿ ಕಣ್ಣೀರಿಡಬಾರದು ನಮ್ಮ ಕಣ್ಣೀರಿನಿಂದ ಅವರ ಪುಣ್ಯವು ಸವೆದುಹೋಗುತ್ತದೆ" ಎಂದು ಹೇಳಿದರು

ಮಲ್ಲಿಗೆಯು "ಎಲ್ಲರೂ ಸಾಯಲೇಬೇಕು. ಈ ಕ್ಷೇತ್ರದಲ್ಲಿ ಸತ್ತವರು ಪುಣ್ಯಾತ್ಮರು. ಅವರು ಕೈಲಾಸಕ್ಕೆ ಹೋಗುತ್ತಾರೆ" ಎಂದು ಮಂತ್ರಪಠಣ ಮಾಡಿದಂತೆ ಆ ಮಾತುಗಳನ್ನೇ ನಾಲ್ಕಾರು ಬಾರಿ ಬಾಯಿನಲ್ಲಿ ಉಚ್ಚರಿಸಿದಳು. ಅಲ್ಲಿಂದ ಎದ್ದು, ಹೊರಗೆ ಹೊರಟಳು.

ಭಯಂಕರವಾದ ಕಾಳರಾತ್ರಿ. ತನ್ನ ತಾಯಿಯ ಸಂಸ್ಕಾರ ಮಾಡಿದ್ದ ತೋಪನ್ನು ಸ್ಮರಿಸಿಕೊಂಡಳು. ಮಲ್ಲಿಗೆಯು ಆ ಛತ್ರದ ಹಿಂದುಗಡೆಯಿಂದಲೇ ಸಣ್ಣದಾಗಿ ಜಲಜಲನೆ ಹರಿಯುತ್ತಿದ್ದ ಕೌಂಡಿನೀ

ನದಿಯನ್ನು ದಾಟಿ ಆ ತೋಪಿನ ಕಡೆಗೆ ಹೋದಳು. ಸಮಾಧಿ ಮಾಡಿದ್ದ ಸ್ಥಳಕ್ಕೆ ಹೋಗಿ ತಾಯಿಗೆ ನಮಸ್ಕಾರಮಾಡಿ ನಿಂತಳು. 'ಪರಮೇಶ್ವರಾ, ಎಲ್ಲರೂ ಸಾಯಬೇಕು. ಈ ಕ್ಷೇತ್ರದಲ್ಲಿ ಸತ್ತವರು ಪುಣ್ಯಾತ್ಮರು. ಕೈಲಾಸಕ್ಕೆ ಪುಷ್ಪಕವಿಮಾನದಲ್ಲಿ ಹೋಗುತ್ತಾರೆ' ಎಂಬ ಮಾತು ಗಳನ್ನು ಉಚ್ಚರಿಸಿದಳು. ಗಟ್ಟಿಯಾಗಿ ಮತ್ತೊಮ್ಮೆ ಉಚ್ಚರಿಸಿದಳು. ಮೇಲೆ ಹೊದ್ದಿದ್ದ ಬಟ್ಟೆಯನ್ನು ಹುರಿಮಾಡಿದಳು. ಆ ದೊಡ್ಡ ವೃಕ್ಷದ ಮೇಲೆ ಹತ್ತಿ ಕೊರಳಿಗೆ ನೇಣು ಹಾಕಿಕೊಂಡಳು. ವೃಕ್ಷದಿಂದ ಕೆಳಕ್ಕೆ ಧುಮಿಕಿದಳು. ಪ್ರಾಣವು ಹಾರಿಹೋಯಿತು.

## ೨೬

ಬೆಳಗಾದಮೇಲೆ ಮಹಂತನಿಗೆ ಯಾರೋ ಸನ್ಯಾಸಿನಿಯು ಸಂಗಮದತೋಪಿನಲ್ಲಿ ನೇಣು ಹಾಕಿ ಕೊಂಡಿದ್ದಾಳೆಂಬ ಸಮಾಚಾರವು ಬಂದಿತು ಮಹಂತನು ಮಲ್ಲಿಗೆಯೇ ಇರಬೇಕೆಂದು ನಿಶ್ಚಯಿಸಿದನು. ತಕ್ಷಣ ಆ ಮರದಡಿಗೆ ಹೋಗಿ ನಿಂತನು. ತಲೆಯೆತ್ತಿ ನೋಡಿದನು. ಅದು ಮಲ್ಲಿಗೆ ಎಂದು ಗುರ್ತಿಸಿದನು ಭಕ್ತ, ಮಹಂತನ ಅಪ್ಪಣೆಯಂತೆ ಮರದ ಮೇಲೆ ಹತ್ತಿ ನೇಣು ಬಿಚ್ಚಿ ಮಲ್ಲಿಗೆಯ ಶರೀರವನ್ನು ಇಳಿಸಿ ಭೂಮಿಯ ಮೇಲೆ ಮಲಗಿಸಿದರು. ಮಹಂತನು ಆ ಶರೀರವನ್ನು ನದೀಜಲದಿಂದ ತೊಳೆಯುವಂತೆ ಅಪ್ಪಣೆ ಮಾಡಿದ. ಭಕ್ತಾದಿಗಳು ಅಭಿಷೇಕ ಮಾಡಿ ಮಲ್ಲಿಗೆಯ ಪವಿತ್ರದೇಹವನ್ನು ಪುಷ್ಪರಾಶಿಯ ಮೇಲೆ ಮಲಗಿಸಿದರು. ಮಹಂತನ ಅಪ್ಪಣೆಯ ಮೇಲೆ ಗಂಧ ಪುಷ್ಪಗಳಿಂದ ಪೂಜೆಗೈದರು. ಸಮಾಧಿ ಮಾಡಿದರು. ಮಹಂತನು ಆ ಸಮಾಧಿಯಮೇಲೆ ಭವ್ಯವಾದ ಕಲ್ಲಿನ ಮಂಟಪವನ್ನು ಕಟ್ಟಿಸಿದನು.

ಆ ಮಂಟಪಕ್ಕೆ 'ಮಲ್ಲಿಗೆಯ ಮಂಟಪ'ವೆಂದು ಹೆಸರಿಟ್ಟನು. ಕೆಲವರು 'ಸೂಳೆಯ ಮಂಟಪ' ಎಂದೂ ಕರೆಯುತ್ತಾರೆ. ಜಾತ್ರೆಯ ಕಾಲದಲ್ಲಿ ಭಕ್ತರುಗಳು ಇಂದಿಗೂ ಆ ಮಂಟಪದಲ್ಲಿ ಸಮಾರಾಧನೆ ಮಾಡುತ್ತಾರೆ. ಜಂಗಮರುಗಳಿಗೆ ಗಣಾರಾಧನೆ ಮಾಡುತ್ತಾರೆ. ಅನ್ನದಾನ ಮಾಡುತ್ತಾರೆ.

ಶ್ರೀರಂಗಪಟ್ಟಣದಲ್ಲಿ ಮಲ್ಲಿಗೆಯು ಮಾಯವಾದ ಮರು ದಿವಸವೇ ರಾಜನು ಮಲ್ಲಿಗೆಯ ಅಂತಃಪುರಕ್ಕೆ ಹೋಗಿ ಅಂತಃಪುರದಲ್ಲಿ ಮಲ್ಲಿಗೆಯನ್ನು ಕಾಣದೆ ದುಃಖಿಸಿದನು. ಪೂಜಾಗೃಹದಲ್ಲಿ ಹೋಗಿ ನೋಡಿದನು. ಮಣೆಯಮೇಲೆ ಇಟ್ಟಿದ್ದ ಪತ್ರವನ್ನು ತೆಗೆದು ಇಟ್ಟುಕೊಂಡನು. ಒಂದೆರಡು ದಿನಗಳಲ್ಲಿ ಮಲ್ಲಿಗೆಯು ಗರಳಪುರದಲ್ಲಿ ನೇಣು ಹಾಕಿಕೊಂಡಳೆಂಬ ಸಮಾಚಾರವು ಬಂದಿತು. ರಾಜನು ಬಹಳವಾಗಿ ದುಃಖಿಸಿದನು. ಮಲ್ಲಿಗೆಯು ನಿಜವಾದ 'ನಂದನವನದ ಮಲ್ಲಿಗ' ಎಂದುಕೊಂಡನು.

ರಾಜನ ಅಪ್ಪಣೆಯಂತೆ ಬಂಗಾರದೊಡ್ಡಿ ಕಾಲುವೆಯ ನಿರ್ಮಾಣವಾಯಿತು. ಈಗಲೂ ಬಂಗಾರದೊಡ್ಡಿ ಕಾಲುವೆ ಎಂಬ ಹೆಸರಿದೆ. ಕಾವೇರಿಯು ನವರೂಪದಿಂದ ಆ ಕಾಲುವೆಯಲ್ಲಿ ಪ್ರಸನ್ನಳಾಗಿ ಹರಿಯುತ್ತಾಳೆ. ಭೂಮಾತೆಯು ಕಾಲುವೆಯ ಪ್ರಭಾವದಿಂದ ಸರ್ವದಾ ಹಸಿರು ಸೀರೆಯನ್ನುಟ್ಟು ನಲಿಯುತ್ತಾಳೆ.

